# ಲಂಬಾಣಿಗರ ಗೋವಾ ವಲಸೆ

## ಒಂದು ಸಮಾಜಶಾಸ್ತ್ರೀಯ ಅಧ್ಯಯನ

---

ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಶೋಧನಾ ಮಹಾಪ್ರಬಂಧ

ಸಂಶೋಧಕರು

**ಗಣಪತಿ ಕೆ. ಲಮಾಣಿ** ಎಂ.ಎ., ಎಂ.ಫಿಲ್

ಮಾರ್ಗದರ್ಶಕರು

**ಡಾ. ಚಲುವರಾಜು**

ಹಿರಿಯ ಶ್ರೇಣಿ ಅಧ್ಯಾಪಕರು

ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ



ಸಮಾಜ ವಿಜ್ಞಾನಗಳ ನಿಕಾಯ

ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೭

# ಲಂಬಾಣಿಗರ ಗೋವಾ ವಲಸೆ

## ಒಂದು ಸಮಾಜಶಾಸ್ತ್ರೀಯ ಅಧ್ಯಯನ

---

ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಶೋಧನಾ ಮಹಾಪ್ರಬಂಧ


ಸಂಶೋಧಕರು

**ಗಣಪತಿ ಕೆ. ಲಮಾಣಿ**

ಎಂ.ಎ., ಎಂ.ಫಿಲ್





ಮಾರ್ಗದರ್ಶಕರು

**ಡಾ. ಚಲುವರಾಜು**

ಹಿರಿಯ ಶ್ರೇಣಿ ಅಧ್ಯಾಪಕರು

ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ





ಸಮಾಜ ವಿಜ್ಞಾನಗಳ ನಿಕಾಯ

ಬುಡಕಟ್ಟು ಅಧ್ಯಯನ ವಿಭಾಗ

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ ೫೮೩ ೨೭೬

೨೦೦೭

# ದೃಢೀಕರಣ ಪತ್ರ

ಶ್ರೀ ಗಣಪತಿ ಕೆ. ಲಮಾಣಿ ಇವರು ಲಂಬಾಣಿಗರ ಗೋವಾ ವಲಸೆ : ಒಂದು ಸಮಾಜಶಾಸ್ತ್ರೀಯ ಅಧ್ಯಯನ ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಸಮಾಜಶಾಸ್ತ್ರದಲ್ಲಿ ಪಿಎಚ್.ಡಿ ಪದವಿಗಾಗಿ ಈ ಮಹಾಪ್ರಬಂಧವನ್ನು ಸಲ್ಲಿಸಲಾಗುತ್ತಿದೆ. ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇತರ ಉದ್ದೇಶಗಳಿಗಾಗಿ ಬಳಸಿಕೊಂಡಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : 16-1-2007
ಸ್ಥಳ : ವಿದ್ಯಾರಣ್ಯ

(ಡಾ. ಚಲುವರಾಜು)
ಮಾರ್ಗದರ್ಶಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಪ್ರಮಾಣ ಪತ್ರ

ಲಂಬಾಣಿಗರ ಗೋವಾ ವಲಸೆ : ಒಂದು ಸಮಾಜಶಾಸ್ತ್ರೀಯ ಅಧ್ಯಯನ ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಡಾ. ಚಲುವರಾಜು ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಸಮಾಜಶಾಸ್ತ್ರದಲ್ಲಿ ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇತರ ಉದ್ದೇಶಗಳಿಗಾಗಿ ಬಳಸಿಕೊಂಡಿಲ್ಲವೆಂದು ದೃಢೀಕರಿಸುತ್ತೇನೆ.

( ಗಣಪತಿ ಕೆ. ಲಮಾಣಿ )
ಸಂಶೋಧಕ
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : 16-1-2007.
ಸ್ಥಳ : ವಿದ್ಯಾರಣ್ಯ

## ಪರಿವಿಡಿ

## ಕೋಷ್ಟಕಗಳ ಪಟ್ಟಿ

ಭೂಪಟಗಳ ಪಟ್ಟಿ

ಛಾಯಾಚಿತ್ರಗಳು

25 ವಾಸ್ಕೊನಗರದ ಆದರ್ಶ ಹೋಟೇಲಿನಲ್ಲಿ ವೇಟರ್ ಆಗಿ ಕೆಲಸ ಮಾಡುತ್ತಿರು ಯುವಕ

26 ಆದರ್ಶ ಹೋಟೆಲಿನಲ್ಲಿ ಅಡುಗೆ ತಯಾರಿಸುವ ಕೆಲಸದಲ್ಲಿ ನಿರತರಾಗಿರುವ ಯುವಕ

27 ವಾಸ್ಕೊನಗರದ ಖಾರೇವಾಡಾ ಬೀಚ್‌ನಲ್ಲಿ ಬೋಟು ಚಾಲಕನ ಕೆಲಸ ಮಾಡುತ್ತಿರುವ ಲಂಬಾಣಿ ಯುವಕ

28 ಮೀನು ಮಾರಾಟದಲ್ಲಿ ತೊಡಗಿರುವ ಲಂಬಾಣಿ ಮಹಿಳೆಯರು

29 ವಿದೇಶಿಯರಿಗೆ ಲಂಬಾಣಿ ಉಡುಪುಗಳನ್ನು ಮಾರಾಟ ಮಾಡುತ್ತಿರುವ ಲಂಬಾಣಿ ಮಹಿಳೆ

30 ಸಿಕೇರಿ ಒಡ್ಯಾ ಗ್ರಾಮದಲ್ಲಿ ಮಣ್ಣು ತುಂಬುವ ಕೆಲಸದಲ್ಲಿ ನಿರತರಾಗಿರುವ ಲಂಬಾಣಿ ಯುವಕರು

31 ವಾಸ್ಕೊನಗರದ ಗೋಮ್ಸ್ ಬೇಕರಿಯಲ್ಲಿ ಬ್ರೆಡ್ ತಯಾರಿಸುವ ಕೆಲಸದಲ್ಲಿ ತೊಡಗಿರುವ ಲಂಬಾಣಿ ಯುವಕರು

32 ಪಿಲಾರ ಪಟ್ಟಣದ ಸಮೀಪದ ಪ್ರದೇಶದಲ್ಲಿ ನೆಲೆಸಿರುವ ಕೂಲಿಕಾರ ಲಂಬಾಣಿಗರು

33 ಪಿಲಾರ ಪಟ್ಟಣದ ಶ್ರೀಮಂತ ವ್ಯಕ್ತಿ ಪಿ.ಓ.ರವರ ಜಾಗದಲ್ಲಿ ನೆಲೆಸಿರುವ ಲಂಬಾಣಿಗರು

34 ಬಾಣಸ್ತರಿ ಗ್ರಾಮದ ಬೆಟ್ಟದ ಮೇಲ್ಭಾಗದಲ್ಲಿ ನೆಲೆಸಿರುವಕೂಲಿಕಾರ ಲಂಬಾಣಿಗರು

35 ಸ್ವಸ್ಥಳದಲ್ಲಿ ಮರಣ ಹೊಂದಿರುವ ಸಂಬಂಧಿಕರ ಸುದ್ಧಿ ತಿಳಿದು ದುಃಖದಲ್ಲಿರುವ ಲಂಬಾಣಿ ಮಹಿಳೆಯರು

36 ಬಾಣಸ್ತರಿ ಗುಡ್ಡದ ಮೇಲ್ಭಾಗದಲ್ಲಿ ಕಲ್ಲು ಅಗೆಯುವ ಕಠಿಣ ಕೆಲಸದಲ್ಲಿ ನಿರತರಾಗಿರುವ ಲಂಬಾಣಿಗರು

37 ಶಿಕ್ಷಣದಿಂದ ವಂಚಿತರಾದ ವಲಸಿಗರ ಮಕ್ಕಳು

38 ವಾಸ್ಕೊನಗರದ ಮಂಗೂರ್‌ಹಿಲ್ ಕೊಳಚೆ ಪ್ರದೇಶದಲ್ಲಿ ಪ್ರಾರ್ಥನೆ ನಡೆಸುತ್ತಿರುವ ಕ್ರಿಶ್ಚಿಯನ್ ಪಾದ್ರಿ

39 ಕ್ರಿಶ್ಚಿಯನ್ ಪಾದ್ರಿ ನಡೆಸುವ ಪ್ರಾರ್ಥನೆಯಲ್ಲಿ ನಿರತರಾದ, ಮತಾಂತರ ಹೊಂದಲು ಸಿದ್ಧತೆ ನಡೆಸಿರುವ ಲಂಬಾಣಿಗರು

40 ಗೋವೆಯಲ್ಲಿ ರದ್ದಿ ಆರಿಸುವ ಕೆಲಸದಲ್ಲಿ ನಿರತರಾಗಿರುವ ಲಂಬಾಣಿ ಮಹಿಳೆಯರು

41 ಹಳೆ ಗೋವೆಯಲ್ಲಿರುವ ಜಗತ್ಪ್ರಸಿದ್ಧ ಸೆಂಟಝೇವಿಯರನ ಚರ್ಚು

42 ಕನ್ನಡ ಪ್ರಾಥಮಿಕ ಶಾಲೆ ಜುವಾರಿನಗರ

43 ವಲಸೆ ಹೋಗಿ ಗೋವೆಯಲ್ಲಿ ನೆಲೆಸಿ ಬದಲಾವಣೆಗೊಂಡಿರುವ ಲಂಬಾಣಿ ಕುಟುಂಬ

44 ಕನ್ನಡಿಗರ ಸಮಸ್ಯೆ ಕುರಿತು ಚರ್ಚಿಸುತ್ತಿರುವ ಫಣಜಿ ಕನ್ನಡ ಸಂಘದ ಪದಾಧಿಕಾರಿಗಳು

45 ವಾಸ್ಕೊನಗರದ ಶ್ರೀಮಂತರ ಮನೆಯಲ್ಲಿ ಗೃಹ ಕೆಲಸಗಳನ್ನು ಮಾಡುತ್ತಿರುವ ನರಸಲಗಿ ತಾಂಡಾದ ಮಹಿಳೆ

## ಅಧ್ಯಾಯ ೧

# ವಿಜಾಪುರ ಜಿಲ್ಲೆಯ ಲಂಬಾಣಿಗರ ಐತಿಹಾಸಿಕ ಹಿನ್ನೆಲೆ

**Historical Background of Banjara's (Lambani's) of Bijapur District**

ಭಾರತದಲ್ಲಿ ಉದ್ಯೋಗವನ್ನಾಧರಿಸಿ ಜನರನ್ನು ವಿವಿಧ ಸ್ಥರಗಳಲ್ಲಿ ವಿಂಗಡಿಸಲಾಗಿದೆ. ಜನರು ವಿಭಿನ್ನ ಉದ್ಯೋಗಗಳಲ್ಲಿ ತೊಡಗಿದ್ದರಿಂದ ಉದ್ಯೋಗದ ಆಧಾರದ ಮೇಲೆ ಆಯಾ ಜನಾಂಗವನ್ನು ಕರೆಯಲಾಗಿದೆ. ಉದಾಹರಣೆಗೆ ಚರ್ಮದ ಕೆಲಸ ಮಾಡುವವರನ್ನು ಚಮ್ಮಾರರೆಂದೂ, ಬಡಿಗತನ ಮಾಡುವವರನ್ನು ಬಡಿಗರೆಂದೂ, ಮೀನು ಹಿಡಿಯುವವರನ್ನು ಮೀನುಗಾರರೆಂದೂ, ಬಣ್ಣ ಹಾಕುವವರನ್ನು ಬಣಗಾರರೆಂದೂ ಕರೆದಂತೆ ಉಪ್ಪು ಅಥವಾ ಲವಣ ಮಾರುವ ಉದ್ಯೋಗ ಹೊಂದಿದ ಜನಾಂಗಕ್ಕೆ "ಲಂಬಾಣಿಗರು" ಎಂದು ಕರಿದಿದ್ದಾರೆ. ಲಂಬಾಣಿಗರು ತಮ್ಮದೇ ಆದ ವಿಶೇಷ ಸಂಸ್ಕೃತಿ, ವೇಷಭೂಷಣ, ಲಿಪಿ ಇಲ್ಲದ ಭಾಷೆ, (ಗೊರಬೊಲಿ) ಆಡಳಿತ ವ್ಯವಸ್ಥೆ, ಧಾರ್ಮಿಕ ವ್ಯವಸ್ಥೆಗಳನ್ನು ಅನುಸರಿಸಿಕೊಂಡು ರಂಗುರಂಗಿನ ಜೀವನವನ್ನು ಸಾಗಿಸುತ್ತಿದ್ದಾರೆ. 17ನೇ ಶತಮಾನದಿಂದಲೂ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ವಲಸೆ ಹೋಗುತ್ತ ಅಲೆಮಾರಿ ಜೀವನ ನಡೆಸುವುದನ್ನು ಕಾಣತ್ತೇವೆ. ವಿವಿಧ ದಾಖಲೆಗಳ ಪ್ರಕಾರ ಲಂಬಾಣಿಗರ ಐತಿಹಾಸಿಕ ಹಿನ್ನೆಲೆಯನ್ನು ಕೆಳಗಿನಂತೆ ವಿವರಿಸಬಹುದು.

ಭಾರತದ ಎಲ್ಲ ಭಾಗಗಳಲ್ಲಿ ಸಾಮಾನ್ಯವಾಗಿ ಇವರನ್ನು "ಗೋರ್ ಬಂಜಾರಾ" ಎಂದು ಕರೆಯುತ್ತಾರೆ. ಲಂಬಾಣಿಗರು ವಿವಿಧ ಉದ್ಯೋಗಗಳಲ್ಲಿ ತೊಡಗಿದ್ದರಿಂದ ಹಾಗೂ ಸ್ಥಾನಿಕ ಭಾಷೆಗಳಿಂದ ಪ್ರಭಾವಿತರಾದದ್ದರಿಂದ ಇವರನ್ನು ಬೇರೆ, ಬೇರೆ ರಾಜ್ಯಗಳಲ್ಲಿ ಬೇರೆ, ಬೇರೆ ಹೆಸರುಗಳಿಂದ ಕರೆಯುತ್ತಾರೆ. ಉದಾಹರಣೆಗೆ ಕರ್ನಾಟಕದಲ್ಲಿ ಬಂಜಾರಾ ಹಾಗೂ ಲಂಬಾಣಿ ಎಂದೂ, ಓರಿಸ್ಸಾದಲ್ಲಿ ಲಬಾಣಿ ಹಾಗೂ ಬಂಜಾರಿ ಎಂದೂ, ಬಿಹಾರನಲ್ಲಿ ಬಂಜಾರ್ ಹಾಗೂ ತಮಿಳುನಾಡಿನಲ್ಲಿ ಸುಗಾಲಿ ಹಾಗೂ ಲಬಾಡಿಗಳೆಂದೂ, ಆಂಧ್ರ ಪ್ರದೇಶದಲ್ಲಿ ಸುಕಾಲಿ, ಸುಗಾಲಿ, ಲಂಬಾಡಿಗಳೆಂದೂ, ರಾಜಸ್ಥಾನದಲ್ಲಿ ಲಂಜಾರ್, ಲಭಾಣ, ಗವರಿಯಾಗಳೆಂದೂ, ಗುಜರಾತನಲ್ಲಿ "ಬಣಜಾರ" ಲವಣಿಯಾ ಎಂದು ಕರೆಯುತ್ತಾರೆ. ಇಲ್ಲಿ ಗಮನಿಸಬೇಕಾದ ಮುಖ್ಯ ಸಂಗತಿ ಎಂದರೆ ಲಂಬಾಣಿಗರು ಬೇರೆ ಬೇರೆ ರಾಜ್ಯಗಳಲ್ಲಿ ನೆಲೆಸಿದರೂ ವಿವಿಧ ಸಂಸ್ಕೃತಿಗಳಿಂದ ಪ್ರಭಾವಿತರಾದರೂ ಅವರ ವೇಷ ಭೂಷಣ, ಭಾಷೆ, ಸಂಸ್ಕೃತಿ ಪದ್ಧತಿಗಳು ಬಹುತೇಕ ಒಂದೇ ರೂಪದಲ್ಲಿ ಕಂಡುಬರುವುದರಿಂದ ವಿವಿಧ ರಾಜ್ಯಗಳಲ್ಲಿ ವಾಸಿಸುವ ಬಂಜಾರಾ ಜನರು ಒಂದೇ ಮೂಲದವರಾಗಿದ್ದಾರೆಂದು ಖಚಿತವಾಗುತ್ತದೆ. ಬಂಜಾರ ಅಥವಾ "ಬಣಚಾರ್" ಎಂಬುದು ಅವರು ಮೂಲತಃ ವರ್ತಕರಾಗಿದ್ದರೆಂಬುದನ್ನು

ಸೂಚಿಸುತ್ತದೆ. ಉತ್ತರ ಹಿಂದುಸ್ಥಾನ ಮೊದಲಾದ ಕಡೆಗಳಲ್ಲಿ ಆಹಾರ ಧಾನ್ಯದ ವ್ಯಾಪಾರ ಕೈಕೊಂಡಿದ್ದರಿಂದ "ವಣಚಾರಾ" (ವಣಜ ಸಂ-ಧಾನ್ಯ) ಬಣಚಾರಾ ಎಂಬ ಹೆಸರುಗಳಿಂದ ಕರೆಯಲ್ಪಟ್ಟರು. ವಾಣಿಜ್ಯಂ ಎಂಬ ಶಬ್ದ ಪ್ರಾಂತೀಯ ಭಾಷೆಗಳಿಂದ ಪ್ರಭಾವಿತಗೊಂಡು, ಬನಜಾರಾ (ರಾಜಸ್ಥಾನಿ) ವನಜಾರಾ (ಗುಜರಾತಿ) ಬನಚಾರೆ (ಉರ್ದು) ಬಂಜಾರಿ (ಮರಾಠಿ) ಎಂಬುದಾಗಿ ಕರೆಯಲ್ಪಟ್ಟರು. ಅವರು ವ್ಯಾಪಾರಕ್ಕಾಗಿ ಕಾಡಿನ ಮಾರ್ಗವಾಗಿ ಸಂಚರಿಸುತ್ತಿದ್ದರಿಂದ ವನಚರ, ವನಜಾರಾ, ಬನಚಾರಾ, ಬಣಚಾರ ಎಂದಾಗಿರಬೇಕು. (ಖಂಡೋಬಾ 1988:14)[1]

ಬಂಜಾರ ಪದದ ಅರ್ಥ ಕಾಡಿನ ಮಾಲಿಕ ಎಂದಾಗುತ್ತದೆ. ಬನ+ಜಾರಾ, ಬನ=ವನ, ಜಾರಾ=ಒಡೆಯ, ಆದ್ದರಿಂದ ಲಂಬಾಣಿಗರು ಅರಣ್ಯ ವಾಸಿಗಳೆಂದು ತಿಳಿದು ಬರುತ್ತದೆ. 'ವನಜ' 'ವಣಜ' ವಾಣಿಜ್ಯ ಎಂಬ ಶಬ್ದಗಳು ಅವರ ವ್ಯಾಪಾರವನ್ನು ಪ್ರತಿಬಿಂಬಿಸುತ್ತವೆ. ಆದ್ದರಿಂದ ಸಾವಿರಾರು ದನಕರುಗಳ ಮೇಲೆ ವ್ಯಾಪಾರ ಮಾಡುತ್ತ ಒಂದು ಊರಿನಿಂದ ಇನ್ನೊಂದು ಊರಿಗೆ ಈ ಜನರು ವಲಸೆ ಹೋಗುತ್ತಿದ್ದರಿಂದ 'ಬನಜಾರ' ಎಂದು ಕರೆದಿದ್ದು ಕಂಡುಬರುತ್ತದೆ. "ಲಭಾನ, ಲಭಾನಿ, ಲಂಬಾಡಾ ಎಂದು ಕರೆಯಲ್ಪಡುವ ಇವರು ಲಭಾಣ ಎಂಬುದು ಒಂದು ವ್ಯಾಪಾರಿ ಜನಾಂಗದ ಹೆಸರಾಗಿದ್ದು, ಆ ಜನಾಂಗದವರು ಒಂಟೆ ಮತ್ತು ದನಕರುಗಳ ಮೇಲೆ ಉಪ್ಪನ್ನು ಹೇರಿಕೊಂಡು ವ್ಯಾಪಾರದಲ್ಲಿ ತೊಡಗಿದ್ದರು. ರಾಜಸ್ಥಾನದ ಇತಿಹಾಸದಲ್ಲಿ ಲಭ್ಯವಾಗುವ ಮಾಹಿತಿಗಳ ಪ್ರಕಾರ, ಸುಮಾರು 4 ಹಾಗೂ 5ನೆಯ ಶತಮಾನದಲ್ಲಿ ಬಹುಶಃ ಗುಪ್ತರ ಅವಧಿಯಲ್ಲಿ ದನಕರುಗಳ ಮೇಲೆ ಆಹಾರ ಪದಾರ್ಥಗಳನ್ನು ಹೇರಿಕೊಂಡು ಈ ಜನರು ವ್ಯಾಪಾರದಲ್ಲಿ ತೊಡಗಿದ್ದರೆಂಬುದು ಕಂಡು ಬರುತ್ತದೆ. 'ಲಂಬಾಣಿ' ಅಥವಾ ಲಂಬಾಡಿ ಎಂಬ ಪದವು 'ಲಮಾನ್' ಎಂಬ ಪದದ ಇನ್ನೊಂದು ರೂಪವೆಂದು ಹೇಳುತ್ತಾರೆ. 'ಲಭಾನ್' ಎಂಬುದು ಬಣಜಾರ ಜಾತಿಯ ಪ್ರಕಾರಗಳಲ್ಲಿ ಒಂದಾಗಿದೆ. (Nanjundayya and Ananthayyar :1928, Page 136)[2] ಲಂಬಾಣಿ ಎಂಬ ಪದವು ಸಂಸ್ಕೃತ ಭಾಷೆಯ ಲವಣ ಎಂಬ ಶಬ್ದದಿಂದ ಬಂದಿರುತ್ತದೆ. ಆದ್ದರಿಂದ ಹಿಂದಿನ ಕಾಲದಲ್ಲಿ ಈ ಜನರು ಲವಣದ ಅಂದರೆ ಉಪ್ಪಿನ ವ್ಯಾಪಾರದಲ್ಲಿ ತೊಡಗಿದ್ದರೆಂಬುದು ಕಂಡುಬರುತ್ತದೆ.

ಕೆಲವು ಊಹೆಗಳ ಮತ್ತು ದಾಖಲೆಗಳ ಪ್ರಕಾರ ಲಂಬಾಣಿಗರಿಗೆ 400 ವರ್ಷಗಳ ಹಿಂದಿನ ಲಿಖಿತ ಇತಿಹಾಸ ಇರುವುದು ಕಂಡುಬರುತ್ತದೆ. 1891ರ ಮದ್ರಾಸ್ ಜನಗಣತಿಯಲ್ಲಿ ವಿವರಿಸಿರುವಂತೆ ಬಂಜಾರರ ಇತಿಹಾಸ ಬಹಳ ಪ್ರಾಚೀನವಾದದ್ದು, ಕ್ರಿ.ಶ. 400 ವರ್ಷಕ್ಕಿಂತ ಹಳೆಯ ಇತಿಹಾಸ ಇವರಿಗಿದೆ. ಪ್ರಾಚೀನ ಕಾಲದಲ್ಲಿ ಪಂಜಾಬ ಮತ್ತು ಉತ್ತರ ಭಾರತದ ಕೆಲವು ಪ್ರದೇಶಗಳಲ್ಲಿ ಆರ್ಯರು ಗುಂಪು ಗುಂಪಾಗಿ ಪ್ರವೇಶಿಸಿದರು. ರಜಪೂತರು ಆರ್ಯರ ವಂಶಕ್ಕೆ ಸೇರಿದವರಾಗಿದ್ದಾರೆಂಬುದು ಖಚಿತವಾಗಿದೆ. ಲಂಬಾಣಿ ಜನರು ಮೂಲತಃ ರಾಜಸ್ಥಾನದ ರಜಪೂತ ವಂಶಕ್ಕೆ ಸೇರಿದವರಾಗಿದ್ದು, ಕ್ಷತ್ರಿಯ ವರ್ಣಕ್ಕೆ

---

1. ಖಂಡೋಬಾ ಪಿ.ಕೆ : ೧೯೮೮ 'ಲಂಬಾಣಿ ಸಂಸ್ಕೃತಿ' ತೇಜ್‌ಸಿಂಗ್ ರಾಠೋಡ್ ಮೆಮೋರಿಯಲ್ ಟ್ರಸ್ಟ್ ಗುಬ್ಬರ್ಗಾ ಪುಟ-೧೪
2. Nanjundayya and Ananthayyar: (1928) 'The Mysore Tribes and Castes' Bangalore, Mysore Govt. Press, P-135 to 136.

ಸಂಬಂಧಿಸಿದವರೆಂದೂ, ಯುದ್ಧ ಮಾಡುವುದು, ಬೇಟೆ, ಕಾವಲು ಕಾಯುವ ಕೆಲಸದಲ್ಲಿ ಇವರು ಪ್ರಸಿದ್ಧರೆಂದೂ, ಬಂಜಾರಾ ಎಂಬ ಪದ ಜಾತಿಯನ್ನು ಸೂಚಿಸುವುಗರ ಜೊತೆಗೆ ಪ್ರಾಣಿ ಸಾಕಾಣಿಕೆ, ಭಾರ ಎತ್ತುವುದು, ಗೋರಕ್ಷಣೆ, ವ್ಯಾಪಾರ ಮೊದಾಲಾದ ಉದ್ಯೋಗಗಳನ್ನು ಅವಲಂಬಿಸಿರುವುದು ಎಂದು ಹೇಳಲಾಗಿದೆ. (Thurstan:1909:215)[3] ಲಂಬಾಣಿಗರು ಉತ್ತರ ಭಾರತಕ್ಕೆ ಸೇರಿದವರು. ಆದರೆ ಉತ್ತರ ಭಾರತದ ನಿರ್ದಿಷ್ಟವಾಗಿ ಯಾವ ಪ್ರದೇಶಕ್ಕೆ ಸೇರಿದವರಾಗಿದ್ದಾರೆಂಬುದರ ಬಗ್ಗೆ ನಿರ್ದಿಷ್ಟ ದಾಖಲೆಗಳು ದೊರೆತಿಲ್ಲ ಹಾಗೂ ಶಾಸ್ತ್ರಜ್ಞರಲ್ಲಿ ಈ ಬಗೆಗೆ ಒಮ್ಮತದ ಅಭಿಪ್ರಾಯವಿಲ್ಲ. ಕೆಲವು ದಂತಕಥೆಗಳು, ಮತ್ತು ಐತಿಹಾಸಿಕ ದಾಖಲೆಗಳ ಪ್ರಕಾರ ಇವರ ಜನ್ಮಭೂಮಿ ಉತ್ತರ-ಮಧ್ಯ ಭಾರತದ, ಮಾರವಾಡ ಎಂದು ಹೇಳಬಹುದು. ರಾಜಸ್ಥಾನದ ಈ 'ಮಾರವಾಡ' ಪ್ರದೇಶದಿಂದ ಅವರು ಬೇರೆಬೇರೆ ಕಡೆಗಳಿಗೆ ಪಸರಿಸಿದರು. ಹಾಗೂ ಇವರು ಭಾರತದ ದಕ್ಷಿಣದ ಕಡೆಗಲ್ಲದೇ ಉತ್ತರದ ಕಾಶ್ಮೀರ ಮತ್ತು ಉತ್ತರ ಪ್ರದೇಶದ ಪೂರ್ವ ಭಾಗಗಳಿಗೂ ವಲಸೆ ಹೋದರೆಂದು. ನಂಜುಂಡಯ್ಯ ಹಾಗೂ ಐಯ್ಯರ್ ಅವರು ಹೇಳಿದ್ದಾರೆ. (Nanjundayya and Ananthayyar:1928-136)[4]

ರಾಜಸ್ಥಾನದ ವಣಿಕೆ (ವ್ಯಾಪಾರಿ) ಸಮುದಾಯಕ್ಕೆ ಸೇರಿದ ಲಂಬಾಣಿಗರು ರಾಜಕೀಯ ಹಾಗೂ ಸಾಮಾಜಿಕ ಒತ್ತಡಕ್ಕೆ ಒಳಗಾಗಿ, ತಮ್ಮ ಮೂಲ ಸ್ಥಾನವನ್ನು ಬಿಟ್ಟು ಖಾದ್ಯ ಪದಾರ್ಥಗಳ ವ್ಯಾಪಾರ ಮಾಡುತ್ತ ಭಾರತದ ಮೂಲೆ, ಮೂಲೆಗಳಲ್ಲಿ ವ್ಯಾಪಿಸಿದರು. ಹೀಗೆ ತಾಯ್ನಾಡನ್ನು ತ್ಯಜಿಸಿದ ಈ ಜನರು ತಮ್ಮ ಅಸಂಖ್ಯಾತ ದನಕರುಗಳ ಮೇಲೆ ಖಾದ್ಯ ಪದಾರ್ಥಗಳನ್ನು ಹೇರಿಕೊಂಡು ತಂಡೋಪತಂಡವಾಗಿ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಅಲೆಮಾರಿಗಳಾಗಿ ಸಂಚರಿಸಿದರು. (ಖಂಡೋಬಾ 1988:1)[5] Banjara`s are the people Mentioned by the Aryans in the fourth Century B.C. as leading a wandering life engaged in carrying trade on pack bullocks and also hiring beasts of burden (Berar Census Report:1981:150)[6] ವಾಹನ ಸೌಕರ್ಯಗಳಿಲ್ಲದ ಆ ಕಾಲದಲ್ಲಿ ಲಂಬಾಣಿಗರು, ದನಕರುಗಳ ಮೇಲೆ ಬಹುದಿನಗಳಿಂದಲೂ ವ್ಯಾಪಾರ ಮಾಡುತ್ತ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಅಲೆದಾಡುತ್ತಿದ್ದರು.

ಮೊಗಲ ಅರಸರು ದಕ್ಷಿಣ ಭಾರತದ ಮೇಲೆ ದಂಡೆತ್ತಿ ಬಂದಾಗ ಸಾರಿಗೆ ಸಾಗಾಣಿಕೆಗಳ ಸಮಸ್ಯೆಯನ್ನು ತೀವ್ರವಾಗಿ ಅನುಭವಿಸಿದರು. ಇಂಥಹ ಸ್ಥಿತಿಯಲ್ಲಿ ಅಸಂಖ್ಯಾತ ದನ ಕರುಗಳನ್ನು ಹೊಂದಿದ್ದ ಲಂಬಾಣಿಗರು

---

3. Thurstan-E, (1909) Mysore census Report, Quoted, Caste and Tribes of Southern India, Vol-4, Delhi, Cosmo Publications, P-215
4. Nanjundayya and Ananthayyar: (1928) 'The Mysore Tribes and Castes' Bangalore, Mysore Govt. Press, P-135
5. ಖಂಡೋಬಾ ಪಿ.ಕೆ.: (1998) 'ಲಂಬಾಣಿ ಸಂಸ್ಕೃತಿ' ತೇಜ್‌ಸಿಂಗ್ ರಾಠೋಡ್, ಮೆಮೋರಿಯಲ್ ಟ್ರಸ್ಟ್, ಗುಲ್ಬರ್ಗಾ, ಪುಟ-1
6. Berar Census Report: (1981) Quoted, Russel and Hiralal: (1975) The Tribes & Castes of Central Provinces of India, Vol-II, Cosmo Publications, New Delhi, P-163

ಮೊಗಲ ಸೈನಿಕರಿಗೆ ಆಹಾರ ಧಾನ್ಯಗಳನ್ನು ಸಾಗಿಸಲು ನೆರವಾದರು. ಇವರ ಧೈರ್ಯ ಸಾಹಸಗಳನ್ನು, ಘೋರ ಅರಣ್ಯವನ್ನು ದಾಟುವ ಕಲೆಯನ್ನು ಮೆಚ್ಚಿದ ಮೊಗಲರು ಇವರಿಗೆ ತಮ್ಮ ಸೈನಿಕರಿಗೆ ಆಹಾರ ಪೂರೈಸುವ ಕೆಲಸ ಒದಗಿಸಿದರು. ಈ ಕಾರಣಕ್ಕಾಗಿ ಲಂಬಾಣಿಗರು ದಕ್ಷಿಣ ಭಾರತಕ್ಕೆ ಬಂದು ನೆಲೆಸುವುದು ಅನಿವಾರ್ಯವಾಯಿತು. (Kamala Manohar Rao:1950:17)[7] ಹೆಚ್ಚಿನ ಸಂಖ್ಯೆಯಲ್ಲಿ ದನಕುಗಳನ್ನು ಹೊಂದಿದ್ದ ಲಂಬಾಣಿಗರಿಗೆ ಮೊಗಲರ ಸೈನಿಕರಿಗೆ ಆಹಾರ ಒದಗಿಸುವುದು ಅನಿವಾರ್ಯವಾಗಿದ್ದರಿಂದ ಆಹಾರ ಪೂರೈಸುವ ಕೆಲಸ ಮಾಡಲು ಒಪ್ಪಿಕೊಂಡದ್ದು ಕಂಡುಬರುತ್ತದೆ. ಬಹುದೂರದ ಶತ್ರು ಪ್ರದೇಶದಲ್ಲಿ ಹೋರಾಡುತ್ತಿದ್ದ ಸೈನಿಕರಿಗೆ ಲಂಬಾಣಿಗರು ನಿರ್ಭಯವಾಗಿ ಆಹಾರವನ್ನು ಪೂರೈಸುತ್ತಿದ್ದು ಇವರನ್ನು ಯಾವ ಪಕ್ಷದವರು ಹಿಂಸಿಸುತ್ತಿರಲಿಲ್ಲ. ಇವರು ಸಾವಿರಾರು ಜನರು ಒಟ್ಟಿಗೆ ಜೊತೆಯಾಗಿ ಸಂಚರಿಸುತ್ತಿದ್ದರು. ಸಂಜೆಯಾದೊಡನೆ ದಾರಿಯಲ್ಲಿ ಧಾನ್ಯದ ಚೀಲಗಳನ್ನು ಒಂದೆಡೆ ಸೇರಿಸಿ, ರಾತ್ರಿ ಜನರೂ, ನಾಯಿಗಳೂ ಧಾನ್ಯವನ್ನು ಕಾಯುತ್ತಿದ್ದರಂತೆ, ಬಹು ಧೈರ್ಯಶಾಲಿಗಳಾದ ಇವರ ತಂಟೆಗೆ ಇತರರು ಹೋಗಲು ಹೆದರುತ್ತಿದ್ದರು. ಹೀಗಾಗಿ ಮೊಗಲರ ಸೇನೆಗೆ ಆಹಾರ ಸರಬರಾಜು ನಿರಂತರವಾಗಿ ನಡೆಯುತ್ತಿದ್ದಿತು. (ಚಿ.ಮೂ:1970:10)[8]

ಲಂಬಾಣಿಗರ ಮೂಲ ಸ್ಥಾನದ ಬಗ್ಗೆ ವಿವಿಧ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯ ಕಂಡುಬರುತ್ತದೆ. ಶೇರ್ ಸಿಂಗ್ ಶೇರ್‌ರವರು ಲಂಬಾಣಿಗರ ಮೂಲದ ಬಗ್ಗೆ ಕೆಳಗಿನಂತೆ ಅಭಿಪ್ರಾಯಪಟ್ಟಿದ್ದಾರೆ. "Originally they are the Rajputs of Rajasthan and they are known to be very brave people being the descendents of martial race of Rajputs and have not lost their instinctive martial spirit (Shareshing Sher:1883)[9] ಉತ್ತರ ಭಾರತದ ಗೋರಖ್‌ಪುರದಿಂದ ಹರಿದ್ವಾರದ ವರೆಗಿನ ಉಪಪರ್ವತ ಶಿಖರವೇ ಬಂಜಾರಾಗಳ ಮೂಲಸ್ಥಾನವಾಗಿದೆ. (ಇಬ್ಸನ್:1918:62-63)[10]

ದಕ್ಷಿಣ ಭಾರತದ ಬುಡಕಟ್ಟುಗಳು ಮತ್ತು ಜಾತಿಪದ್ಧತಿಯನ್ನು ಅಧ್ಯಯನ ಮಾಡಿದ ನಂಜುಂಡಯ್ಯ ಮತ್ತು ಅಯ್ಯರ್, ಲಂಬಾಣಿಗರು ಕ್ಷತ್ರಿಯ ವಂಶದ ರಜಪೂತರ ಉತ್ತರಾಧಿಕಾರಿಗಳಾಗಿದ್ದು, ಇವರ ಮೂಲಸ್ಥಾನ 'ಮಾರವಾಡ' ಆಗಿದೆ ಎಂದು ಅಭಿಪ್ರಾಯ ಪಟ್ಟಿದ್ದಾರೆ. (ನಂಜುಂಡಯ್ಯ:1928)[11] ಬಂಜಾರರು ಉತ್ತರದಿಂದ ಬಹುಶಃ ರಾಜಪುತ ತಾಣದಿಂದ ದಕ್ಷಿಣಕ್ಕೆ ವಲಸೆ ಬಂದು ನೆಲೆಸಿದರು. ಸುಮಾರು

---

7. Kamala Manohara Rao : (1950) 'The Mythological Origin and Clan system of Banjara,s of Hyderabad-Man in India', P-17
8. ಚಿದಾನಂದ ಮೂರ್ತಿ ಎಂ: (1970) "ಸಂಶೋಧನಾ ತರಂಗ" ಸಂಪುಟ-2 ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. ಪುಟ-10
9. Shareshing Sher: (1883) The Sikligars of Punjab, Quoted, ಡಾ.ಪಿ.ಕೆ.ಖಂಡೋಬಾ: 'ಕರ್ನಾಟಕದ ಬುಡಕಟ್ಟಿನ ಲಂಬಾಣಿಗರು', ಸಿದ್ದಲಿಂಗೇಶ್ವರ ಬುಕ್ ಡಿಪೊ, ಗುಲಬರ್ಗಾ, ಪುಟ. ೧೮
10. Ibbetson: (1916) Punjab Castes and Tribes, Quoted, ಡಾ.ಪಿ.ಕೆ.ಖಂಡೋಬಾ: 'ಕರ್ನಾಟಕದ ಬುಡಕಟ್ಟಿನ ಲಂಬಾಣಿಗರು', ಸಿದ್ದಲಿಂಗೇಶ್ವರ ಬುಕ್ ಡಿಪೊ, ಗುಲಬರ್ಗಾ.
11. Nanjundayya and Ananthayyar: (1928) 'The Mysore Tribes and Castes' Bangalore, Mysore Govt. Press,P-136.

ಮೂನ್ನೂರು ವರ್ಷಗಳ ಹಿಂದೆ ಹದಿನೇಳನೆಯ ಶತಮಾನದಲ್ಲಿ ಅಥವಾ ಅದಕ್ಕಿಂತ ಮುಂಚೆ ಮಹಮ್ಮದೀಯರ ಸೇನೆಯ ಜೊತೆಯಲ್ಲಿ ಬಂದರು. (ಚಿ.ಮೂ:1970:10)[12]

ಲಂಬಾಣಿಗರು ಮೂಲತಃ ರಾಜಸ್ಥಾನದ ಮೂಲದವರಾಗಿದ್ದು, ಮೊಗಲರ ಸೈನಿಕರ ಜೊತೆ ವಲಸೆ ಬಂದು ಭಾರತದ ವಿವಿಧ ಭಾಗಗಳಲ್ಲಿ ಚದುರಿ ಹೋಗಿದ್ದಾರೆ. ಅಲೆಮಾರಿ ವ್ಯಾಪಾರಿಗಳಾದ ಇವರು ಹಿಂದುಸ್ಥಾನದ ಸೈನಿಕರಿಗೆ ಆಹಾರ ಧಾನ್ಯಗಳನ್ನು ಪೂರೈಸುವುದು ಇವರ ಉದ್ಯೋಗವಾಗಿತ್ತೆಂದು ಐರ್ವಿನ್‌ರವರು ವರದಿ ಮಾಡಿದ್ದಾರೆ. (Russel and Hiralal:1975-168)[13]

ಈ ಮೇಲಿನ ಅಭಿಪ್ರಾಯಗಳನ್ನು ಅವಲೋಕಿಸಿದಾಗ ಲಂಬಾಣಿಗರು ಮೂಲತಃ ಉತ್ತರ ಭಾರತದ ರಾಜಸ್ಥಾನದಿಂದ ಮೊಗಲರ ಸೈನ್ಯದ ಜೊತೆಗೆ ಬಂದರೆಂದೂ, ಲಂಬಾಣಿಗರಿಗೂ ಮತ್ತು ರಜಪೂತರಿಗೂ ಪರಸ್ಪರ ಸಂಬಂಧವಿದ್ದು, ಲಂಬಾಣಿಗರು ರಜಪೂತ ವಂಶದವರೆಂದು ಸ್ಪಷ್ಟವಾಗುತ್ತದೆ. ಉತ್ತರ ಭಾರತದಿಂದ ಮೊಗಲರ ಸೈನಿಕರಿಗೆ ಆಹಾರ ಸರಬರಾಜು ಮಾಡುತ್ತ ವಲಸೆ ಬಂದ ಲಂಬಾಣಿಗರು ಕಾಲಾಂತರದಲ್ಲಿ ಉತ್ತರ ಭಾರತಕ್ಕೆ ಮರಳಿ ಹೋಗದೇ ದಕ್ಷಿಣ ಭಾರತದಲ್ಲಿ ಶಾಸ್ವತವಾಗಿ ನೆಲೆಸಿದರು.

**ವಲಸೆಯ ಮಾರ್ಗ:**

ಲಂಬಾಣಿಗರು 1630ರ ಸುಮಾರಿಗೆ ಮಹಮ್ಮದೀಯರ ಸೇನೆಯ ಜೊತೆ ಕಾರಣಾಂತರಗಳಿಂದ ವಲಸೆ ಬಂದು ಸಂಚಾರಿ ವ್ಯಾಪಾರಿಗಳಾಗಿ ದಕ್ಷಿಣ ಮತ್ತು ಪಶ್ಚಿಮ ಭಾರತದ ವಿವಿಧ ಭಾಗಗಳಲ್ಲಿ ನೆಲೆಸಿದರು. ಮೊದಲು ಇವರು ದೀರ್ಘ ಕಾಲದವರೆಗೆ ಕಾಡಿನಲ್ಲಿ ವಾಸಿಸಿದ್ದರಿಂದ ಸ್ವಾಭಾವಿಕವಾಗಿ ಪ್ರಾಣಿ ಸಾಕಾಣಿಕೆಯಲ್ಲಿ ನಿರತರಾಗಿದ್ದರು. ಇವರು ತಮ್ಮ ಅಪಾರವಾದ ದನಕರುಗಳೊಂದಿಗೆ ಉತ್ತರ ಭಾರತದ ರಾಜಸ್ಥಾನ ಮತ್ತು 'ಪವಾಡ' ಪ್ರದೇಶವನ್ನು ಬಿಟ್ಟು ಮಾಳವಾ ಮುಖಾಂತರ ಹೊರಬಿದ್ದರು. ಹೀಗೆ ಅರಣ್ಯದಿಂದ ಹೊರಗೆ ಬಂದ ಇವರು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ವಲಸೆ ಹೋಗುತ್ತಾ ಅನೇಕ ತೊಂದರೆಗಳನ್ನು ಅನುಭವಿಸಿದರು. ನಂತರ 19ನೇ ಶತಮಾನದ ಉತ್ತರಾರ್ಧದಲ್ಲಿ ತಮ್ಮದೇ ಆದ ಶಾಶ್ವತ ತಾಂಡಾಗಳಲ್ಲಿ ನೆಲೆಸಿದರು. ರಾಜಸ್ಥಾನ ಬಿಟ್ಟು ವಲಸೆ ಬಂದ ಲಂಬಾಣಿಗರು ತಮ್ಮ ಉಪಜೀವನಕ್ಕಾಗಿ ದನಕರುಗಳ ಮೇಲೆ ದವಸ ಧಾನ್ಯಗಳ ವ್ಯಾಪಾರ ಮಾಡುವುದನ್ನು ಅವಲಂಬಿಸಿದರು. ಇವರು ಉತ್ತರ ಭಾರತದ ಒಂದೇ ಪ್ರದೇಶದಿಂದ ವಲಸೆ ಪ್ರಾರಂಭಿಸಿ ಭಾರತದ ವಿವಿಧ ಭಾಗಗಳಲ್ಲಿ ಚದುರಿ ಹೋಗಿ ಭಾರತದ ತುಂಬಾ ಕಂಡುಬರುತ್ತಾರೆ. (ಹೆಚ್.ಡಿ.ಲಮಾಣಿ 1976:1)[14]

---

12. ಚಿದಾನಂದ ಮೂರ್ತಿ ಎಂ: (1970) "ಸಂಶೋಧನಾ ತರಂಗ" ಸಂಪುಟ-2 ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. ಪುಟ-10

13. Russel and Hiralal: (1975) 'The Tribes & Castes of Central Provinces of India', Vol.-II, Cosmo Publications, New Delhi, P-168

14. ಹೆಚ್ ಡಿ. ಲಮಾಣಿ: 1976: ಕರ್ನಾಟಕದ ಲಮಾಣಿ ಜನಪದ ಗೀತೆಗಳ ಸಾಹಿತ್ಯಿಕ ಅಧ್ಯಯನ, ಅಪ್ರಕಟಿತ ಹಿಂದೀ, ಪಿ.ಹೆಚ್.ಡಿ. ಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ಪುಟ-1

ಲಂಬಾಣಿಗರು ವಲಸೆ ಬಂದ ಪ್ರದೇಶಗಳನ್ನು ತಮ್ಮದೇ ಆದ ಹೆಸರುಗಳಿಂದ ಕರೆದಿರುವುದು ಕಂಡುಬರುತ್ತದೆ. ಅವರು ಸಂಚರಿಸಿರುವ ಪ್ರದೇಶಗಳು ಇತಿಹಾಸದಲ್ಲಿ ಕಂಡುಬರುವುದಿಲ್ಲ. ದಕ್ಷಿಣದ ಪ್ರದೇಶವನ್ನು ಖೇರಾಲಿ, ತಲಗಾಣೊ, ಶೇರಾಯು, ಬರಾಡ, ಖಾನ್‌ದೇಶ, ನಿಮಾಡ, ಭವಾಣಗಳೆಂದೂ, ಉತ್ತರದ ಪ್ರದೇಶಗಳನ್ನು ಸಾಬರಘಾಟಿ, ಬಾಗಡ, ಹರಿಯಾಣಾ, ಘಾಟಿಗಳೆಂದು ಕರೆದಿದ್ದಾರೆ. ಬಹುಶಃ ಈ ಹೆಸರುಗಳನ್ನು ತಮ್ಮ ಅನುಕೂಲಕ್ಕಾಗಿಯೇ ಅವರು ಇಟ್ಟುಕೊಂಡರೆಂದು ಕಾಣಿಸುತ್ತದೆ. ಈಗಲೂ ಈ ಜನರು ಈ ಪ್ರದೇಶಗಳನ್ನು ಅವೇ ಹೆಸರುಗಳಿಂದ ಕರೆಯುವ ವಾಡಿಕೆ ಇದೆ. ಲಂಬಾಣಿಗರು ಈ ಕೆಳಗೆ ಕಾಣಿಸಿರುವ ಪ್ರದೇಶಗಳಿಗೆ ವ್ಯಾಪಾರಕ್ಕಾಗಿ ವಲಸೆ ಹೋಗಿರುವುದು ಕಂಡುಬರುತ್ತದೆ.

1. ಇಸ್ವಿ ಸನ್ 150 ರಲ್ಲಿ ಟಾಲಿಮಿಯಿಂದ ಬರೆಯಲ್ಪಟ್ಟ ಭೂಗೋಲದ ಆಧಾರದ ಮೇಲೆ ಇವರ ಸಂಚಾರ ಕುರಮಂಡಲದ ದಂಡೆಯವರೆಗೂ ಇದ್ದದ್ದೂ ಗೋಚರಿಸುತ್ತದೆ.
2. ಇವರ ಸಂಚಾರ ಉತ್ತರ ಭಾರತದ ಗಂಗಾ ನದಿಯ ಉಗಮಸ್ಥಾನದ ವರೆಗೂ ಇರುವ ಬಗೆಗೆ ಕ್ರಿ.ಶ. ಪೂರ್ವ 1 ರಿಂದ 4ರ ನಡುವೆ ಬರೆದ ಭೌದ್ಧ ಜಾತಕದಿಂದ ತಿಳಿದುಬರುತ್ತದೆ.
3. ಕ್ರಿ.ಶ.ಪೂರ್ವ 200 ರಿಂದ 150 ರವರೆಗೆ ದೊರೆತ ಶಾತವಾಹನರ ಶಿಲಾಲೇಖನಗಳಲ್ಲಿ ಮಹಾರಾಷ್ಟ್ರದ ಗಡಿಯವರೆಗೂ ಇವರು ಸಂಚರಿಸಿರುವ ಉಲ್ಲೇಖವಿದೆ.
4. ಕುಶಾಣರ ಶಿಲಾಲೇಖ (ಕ್ರಿ.ಶ.200) ದಿಂದ ಭಾರತದ ವಾಯುವ್ಯ ಪ್ರದೇಶದ ಮಾರ್ಗ (ಕ್ರಿ.ಶ.ಪೂರ್ವ 713ರಲ್ಲಿ ಸಿಕಂದರ ಮಾರ್ಗವೆಂದು ಕರೆಯಲ್ಪಡುತ್ತಿತ್ತು) ಇವರ ಅಧೀನದಲ್ಲಿ ಬರುತ್ತದೆ ಎಂದು ತಿಳಿಯುತ್ತದೆ. (ಖಂಡೋಬಾ: ಪುಟ:22-23)[15] ಈ ರೀತಿ ವಲಸೆ ಬಂದ ಲಂಬಾಣಿಗರು ಶಾಹಜಾನನ ಆಡಳಿತದ ಅವಧಿಯಲ್ಲಿ ಆಸಪ್ ಖಾನನ ಮುಂದಾಳತ್ವದಲ್ಲಿ ದಕ್ಷಿಣ ಭಾರತದ ವಿಜಾಪುರದ 'ಆದಿಲ್‌ಶಾಹಿ'ಯ ಮೇಲೆ ದಾಳಿ ಮಾಡಲು ಕ್ರಿ.ಶ.1630ರ ವೇಳೆಗೆ ಅಸಂಖ್ಯಾತ ಸಂಖ್ಯೆಯಲ್ಲಿ ಲಂಬಾಣಿಗರು ದಕ್ಷಿಣ ಭಾರತಕ್ಕೆ ಬಂದು ಅಲ್ಲಿಯೇ ನೆಲೆಸಿದರು. (Thurstan:1909:213)[16] ಈ ಅವಧಿಯಲ್ಲಿ ಆಸಫ್‌ಖಾನನ ಜೊತೆಗೆ ವಲಸೆ ಬಂದ ಲಂಬಾಣಿ ನಾಯಕರುಗಳಾದ ಜಂಗಿಯ ಹತ್ತಿರ 1,80,000 ದನಕರುಗಳು ಮತ್ತು ಭಂಗಿಯ ಹತ್ತಿರ 52,000 ದನಕರುಗಳಿದ್ದವೆಂದು ಎಫ್.ಎಂ.ಕೆಂಬರ್‌ಲೇಜರವರು ಉಲ್ಲೇಖಿಸಿದ್ದಾರೆ. (1882:169)[17] ತಮ್ಮ ಅಸಂಖ್ಯಾತ ದನಕರುಗಳಿಗೆ ಆಹಾರ ಮತ್ತು ನೀರಿನ ತೊಂದರೆಯಾದಾಗ ಲಂಬಾಣಿ ನಾಯಕರಾದ ಜಂಗಿ ಮತ್ತು ಭಂಗಿ ಆಸಫ್‌ಖಾನನ ಹತ್ತಿರ ಹೋಗಿ ಕೆಲವು ಸವಲತ್ತುಗಳನ್ನು ಒದಗಿಸಲು ಕೇಳಿಕೊಂಡಾಗ ಇವರ

---

15. ಡಾ.ಪಿ.ಕೆ.ಖಂಡೋಬಾ: 'ಕರ್ನಾಟಕದ ಬುಡಕಟ್ಟಿನ ಲಂಬಾಣಿಗರು', ಸಿದ್ಧಲಿಂಗೇಶ್ವರ ಬುಕ್ ಡಿಪೊ, ಗುಲಬರ್ಗಾ
16. Thurstan-E, (1909) Mysore Census Report, Quoted, Caste and Tribes of Southern India, Vol-4, Cosmo Publications, P-215, New Delhi.
17. Cumberlej F.N: Quoted, Russel and Hiralal, (1975) The Tribes and Castes of Central Provinces of India, Vol-II, Casmo Publications, New Dehli, P-169

ಸೇವೆಯಿಂದ ತೃಪ್ತಿಹೊಂದಿದ್ದ ಆಸಫ್‌ಖಾನನು ಸುವರ್ಣಾಕ್ಷರಗಳಿಂದ ಮುದ್ರಿಸಿದ ತಾಮ್ರಪತ್ರದ ಮೇಲೆ ಈ ಕೆಳಗಿನಂತೆ ಲಂಬಾಣಿ ನಾಯಕರಿಗೆ ಅಧಿಕಾರ ಬರೆದುಕೊಟ್ಟದ್ದು ಕಂಡುಬರುತ್ತದೆ.

"ರಂಜನಕಾಪಾನಿ'
ಛಪ್ಪರ ಕಾ ಘಾಸ,
ದಿನ್ ಕೆತೀನ್ ಖೂನ್ ಮಾಫ್,
ಔರ್ ಜಹಾನ್ ಅಸಫ್ ಖಾನ್ ಕೆ ಘೋಡೆ,
ವಂಹಾ ಭಂಗಿ, ಜಂಗಿಕೆ ಬೈಲ್ ಖಡೆ"

ಈ ತಾಮ್ರ ಪತ್ರದ ಅರ್ಥ, ನಿಮಗೆ ಎಲ್ಲಿಯೂ, ನೀರು ದೊರೆಯದಿದ್ದರೆ ನನ್ನ ಸಂಗಡಿಗರ ಪಾತ್ರೆಗಳಿಂದ ಪಡೆಯಬಹುದು; ಹುಲ್ಲು ಕೂಡಾ ಅವರ ಗುಡಿಸಲುಗಳ ಮೇಲ್ಛಾವಣಿಯಿಂದ ಪಡೆಯಬಹುದು, ಮತ್ತು ನೀವು ದಿನಕ್ಕೆ ಮೂರು ಕೊಲೆ ಮಾಡಿದರೂ ನಾನು ಕ್ಷಮಿಸುತ್ತೇನೆ. ನನ್ನ ಕುದುರೆ ನಿಲ್ಲುವ ಹತ್ತಿರದಲ್ಲಿಯೇ ಭಂಗಿ, ಜಂಗಿಯ ದನಕರುಗಳು ನಿಲ್ಲಬಹುದು. ಈ ಮೇಲಿನ ಅಧಿಕಾರವನ್ನು ವಿವರಿಸುವ ತಾಮ್ರ ಪತ್ರವು ಪ್ರಸ್ತುತ ಹಿಂಗೋಲಿ ಹತ್ತಿರವಿರುವ ಮುಸಿ (Musi) ಎಂಬ ಸ್ಥಳದಲ್ಲಿ ನೆಲೆಸಿರುವ ಭಂಗಿ ನಾಯಕರ ವಂಶಸ್ಥರ ಹತ್ತಿರ ಇರುತ್ತದೆ. ಆದ್ದರಿಂದ ನಿಜಾಮ್ ಸರ್ಕಾರ ಅವರನ್ನು ಬಂಜಾರಾ ಜನಾಂಗದ ಮುಖ್ಯ ನಾಯಕರು ಎಂದು ಗುರುತಿಸಿದ್ದಾರೆ. ಅಲ್ಲದೆ ಇವರ ವಂಶಸ್ಥರ ನಾಯಕರಿಗೆ ನಿಜಾಮ ಸರ್ಕಾರ ಗೌರವಪೂರ್ವಕವಾಗಿ ಕಾಣಿಕೆಗಳನ್ನು ನೀಡುತ್ತದೆ. 1869ರಲ್ಲಿ ಮದ್ರಾಸ್ ಪ್ರಾಂತ್ಯದ ಮಚಲಿ ಬಂದರದ ಹತ್ತಿರದ ಭಗವಾನ್ ದಾಸನ ವಂಶಸ್ಥನೆಂದು ಹೇಳಲಾಗುವ ಭಟ್ಟಿ ನಾಯಕನ ಹತ್ತಿರ ನಿಜಾಮರು ಕೊಟ್ಟಿರುವ 8 ಠಾಣೆಗಳ ನಿಶಾನೆ ಇದ್ದದ್ದನ್ನು ಕಂಬರ್‌ಲೇಜ ಎಂಬ ವಿದ್ವಾಂಸರು ಕಂಡಿದ್ದಾರೆ ಎಂಬ ಉಲ್ಲೇಖವಿದೆ. (1975:168-169)[18] ದಕ್ಷಿಣ ಭಾರತದವನ್ನು ವಶಪಡಿಸಿಕೊಂಡು ಮೊಗಲರು 17ನೇ ಶತಮಾನದವರೆಗೆ ಅಧಿಕಾರದಲ್ಲಿದ್ದರು. ಈ ಸಮಯದಲ್ಲಿ ಲಂಬಾಣಿಗರು ದಕ್ಷಿಣ ಭಾರತದ ವಿವಿಧ ಭಾಗಗಳಿಗೆ ಚದುರಿ ಹೋದರು. ನಂತರ 18ನೇ ಶತಮಾನದಲ್ಲಿ ಮಹಾರಾಷ್ಟ್ರದ ಸಾತಾರಾ ಪ್ರದೇಶದ ಆಡಳಿತಗಾರರಿಗೆ, ಮತ್ತು ಪೂನಾದ ರಾಜರಿಗೆ, ಹೈದ್ರಾಬಾದದ ನಿಜಾಮರಿಗೆ ಲಂಬಾಣಿಗರು ಸೇವೆ ಸಲ್ಲಿಸಿದರು. ಬ್ರಿಟಿಷರ ಮತ್ತು ಮೈಸೂರು ರಾಜರ ಯುದ್ಧದ ಸಮಯದಲ್ಲಿ (1792 ಮತ್ತು 1799) ಹಾಗೂ ಮರಾಠರ ಮತ್ತು ಬ್ರಿಟಿಷರ ಯುದ್ಧದ ಸಂದರ್ಭಗಳಲ್ಲಿ (1800-1818) ಲಂಬಾಣಿಗರು ಆಹಾರಧಾನ್ಯ ಒದಗಿಸುವ ಸೇವೆಯಲ್ಲಿ ತೊಡಗಿದ್ದರು. (Nanjundayya and Ananthayyar:1928:141)[19]

ಹೀಗೆ ಶತಮಾನಗಳಿಂದ ರಾಜಕೀಯ ಒತ್ತಡಕ್ಕೆ ಬಲಿಯಾದ ಲಂಬಾಣಿಗರು ಉತ್ತರ ಭಾರತದಿಂದ ಮೊಗಲರ ಸೈನಿಕರ ಜೊತೆ ವಲಸೆ ಬಂದು ಹೈದ್ರಾಬಾದದ ನಿಜಾಮರಿಗೆ, ಬ್ರಿಟಿಷರಿಗೆ ಮಹಾರಾಷ್ಟ್ರದ

18. Cumberlej F.N: Quoted, Russel and Hiralal, (1975) The Tribes and Castes of Central Provinces of India, Vol-II, Casmo Publications, New Dehli, P-168-169.

19. Nanjundayya and Ananthayyar: (1928) 'The Mysore Tribes and Castes' Bangalore, Mysore Govt. Press, P. 140-141.

ರಾಜರಿಗೆ ಸೇವೆ ಸಲ್ಲಿಸಿದ್ದಾರೆ. ಅವರ ಸುದೀರ್ಘವಾದ ಸೇವೆಯ ಮಧ್ಯೆಯೂ ಇವರು ತಮ್ಮ ಸಂಸ್ಕೃತಿ, ಭಾಷೆ, ವೇಷಭೂಷಣ ಪೋಷಿಸಿಕೊಂಡು ಮುನ್ನಡೆದಿದ್ದು, ಅವರು ಸಂಸ್ಕೃತಿಗೆ ನೀಡಿದ ಪ್ರಾಧಾನ್ಯತೆ ಕಂಡುಬರುತ್ತದೆ. ಲಂಬಾಣಿಗರು ಬ್ರಿಟಿಷ್ ಅಧಿಕಾರದ ಅವಧಿಯಲ್ಲಿ ಸಲ್ಲಿಸಿದ ಆಹಾರಧಾನ್ಯಗಳ ಸಾಗಾಣಿಕೆಯ ಸೇವೆ ಪ್ರಾಮಾಣಿಕವಾದದ್ದು ಮತ್ತು ಪ್ರಶಂಸನೀಯವಾದದ್ದು ಎಂದು ಬ್ರಿಟಿಷ್ ಅಧಿಕಾರಿಗಳು ಮತ್ತು ಪ್ರಯಾಣಿಕರು ಲಂಬಾಣಿಗರ ಪ್ರಾಮಾಣಿಕತೆ ಮತ್ತು ಕರ್ತವ್ಯದಲ್ಲಿ ತೋರಿಸಿದ ನಿಷ್ಠೆಯನ್ನು ಕೊಂಡಾಡಿದ್ದಾರೆ. (Thurstan:1909-122)[20] ದಕ್ಷಿಣ ಭಾರತದಲ್ಲಿ ಮೊಗಲರ ಆಳ್ವಿಕೆ ಮುಗಿದ ನಂತರ ಅನೇಕ ಬದಲಾವಣೆಗಳಾದವು. ರೈಲಿನಂತಹ ಮೊದಲಾದ ವಾಹನ ಸೌಕರ್ಯಗಳು, ಬಳಕೆಗೆ ಬಂದು, ಲಂಬಾಣಿಗರ ರಫ್ತುಕಾರ್ಯ ಸಂಪೂರ್ಣವಾಗಿ ನಿಂತು ಹೋಯಿತು. ಇದರಿಂದ ಅವರ ಬದುಕು ಸಂಕಷ್ಟಕ್ಕೆ ಗುರಿಯಾಯಿತು. (ನಂಜುಂಡಯ್ಯ:1928:136)[21] ಹೀಗೆ ಬ್ರಿಟಿಷರ ಅವಧಿಯಲ್ಲಿ ಭಾರತದಲ್ಲಿ ಆಧುನಿಕ (ಮೆಕ್ಯಾನಿಕಲ್) ಸಾರಿಗೆ ಸಂಪರ್ಕಗಳು ಪ್ರಾರಂಭವಾದ ನಂತರ ಲಂಬಾಣಿಗರು, ದನಕರುಗಳ ಮೇಲೆ ಆಹಾರಧಾನ್ಯ ಪೂರೈಸುವ ಸಾಂಪ್ರಾಯಿಕ ಉದ್ಯೋಗ ಕಳೆದುಕೊಂಡರು. ಬ್ರಿಟಿಷರು ತಮ್ಮ ಅಧಿಕಾರ ಅವಧಿಯಲ್ಲಿ ರೈಲುಗಳನ್ನು, ರಸ್ತೆ ಸಾರಿಗೆಯನ್ನು ಪ್ರಾರಂಭಿಸಿದರು, ಹಾಗೂ ಲಂಬಾಣೇತರ ಜನರು, ಎತ್ತಿನ ಚಕ್ಕಡಿಗಳನ್ನು ಉಪಯೋಗಿಸಲು ಪ್ರಾರಂಭಿಸಿದ್ದರಿಂದ ಈ ಎಲ್ಲಾ ಕಾರಣಗಳಿಂದ ಉದ್ಯೋಗದಿಂದ ವಂಚಿತರಾದ ಲಂಬಾಣಿಗರು ಉಪಜೀವನ ಸಾಗಿಸಲು ಅರಣ್ಯಗಳನ್ನು ಅವಲಂಬಿಸಬೇಕಾಯಿತು. ಅರಣ್ಯಗಳಲ್ಲಿ ದೊರೆಯುವ ಕಟ್ಟಿಗೆ, ಮತ್ತಿತ್ತರ ವಸ್ತುಗಳನ್ನು ಮಾರಿ ಜೀವನ ಸಾಗಿಸತೊಡಗಿದರು. ಆದರೆ ಇದರಿಂದ ಬರುವ ಆದಾಯ ಅತ್ಯಲ್ಪವಾಗಿದ್ದರಿಂದ ಕುಟುಂಬ ನಿರ್ವಹಿಸಲು ಆಗದೆಯಿರುವ ಪರಿಸ್ಥಿತಿಯಲ್ಲಿ ಅಶಿಕ್ಷಿತರಾದ, ಆರ್ಥಿಕವಾಗಿ ಹಿಂದುಳಿದ, ತಾಂತ್ರಿಕ ಕೌಶಲ್ಯತೆ ಇಲ್ಲದ ಲಂಬಾಣಿಗರು ಜೀವನ ಸಾಗಿಸಲು ಬೇರೆ ದಾರಿ ತೋರದೇ ಕ್ರೂರ ಅಪಹರಣ ಮತ್ತು ದರೋಡೆಕೋರರಾಗಿ ಪರಿವರ್ತಿಸಿದರು. (Dubois:1936:67-70)[22] ಜೀವನ ಸಾಗಿಸಲು ದಾರಿಕಾಣದ ಲಂಬಾಣಿಗರು ಇತರ ಉದ್ಯೋಗ ಮಾಡಲು ತರಬೇತಿ ಇಲ್ಲದ್ದರಿಂದ ದರೋಡೆ ಮಾಡಲು ಪ್ರಾರಂಭಿಸಿದರು. ಈ ಕಾರಣಕ್ಕಾಗಿ ಲಂಬಾಣಿಗರನ್ನು ಬ್ರಿಟಿಷ್ ಸರ್ಕಾರ ಅಪರಾಧಿ ಬುಡಕಟ್ಟು, ಕಾಯ್ದೆ 1871ರಲ್ಲಿ ಸೇರಿಸಿ ಅಪರಾಧಿ ಬುಡಕಟ್ಟುಗಳ ಪಟ್ಟಿಗೆ ಸೇರಿಸಿತು. ಇಂತಹ ಸ್ಥಿತಿಯಲ್ಲಿ ಲಂಬಾಣಿಗರು ಆರ್ಥಿಕವಾಗಿ ಮುಂದೆಬರಲು ಬ್ರಿಟಿಷರು ಸಹಾಯ ಮಾಡಲಿಲ್ಲ. ಅಪಾರಾಧಿ ಬುಡಕಟ್ಟುಗಳೆಂದು ಹಣೆಪಟ್ಟಿ ಕಟ್ಟಿಕೊಂಡ ಲಂಬಾಣಿಗರ ಮೇಲೆ ಇತರರು ಮಾಡುವ ಕಳ್ಳತನದ ಆರೋಪಗಳನ್ನು ಹೇರಲು ಪ್ರಾರಂಭಿಸಿದರು. ಈ

---

20. Thurstan. (E:1909) Caste and Tribes of Southern India, Vol-4, New Delhi, Cosmo Publications, P-122.
21. Nanjundayya and Ananthayyar: (1928) 'The Mysore Tribes and Castes' Bangalore, Mysore Govt. Press, P-140-141.
22. Dubois: (1936) Quoted, ಬಿ.ಜಿ.ಹಳಬರ, (1975) ಉತ್ತರ ಕರ್ನಾಟಕದ ಲಂಬಾಣಿಗರಲ್ಲಿ ಆರ್ಥಿಕ ಬದಲಾವಣೆಯ ಸಾಮಾಜಿಕ ಪರಿಣಾಮ ಮಾನವ ಶಾಸ್ತ್ರದ ಅಪ್ರಕಟಿತ ಪಿಹೆಚ್.ಡಿ. ಮಹಾಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಸಂದರ್ಭದಲ್ಲಿ ಇವರಿಂದ ಸೇವೆ ಪಡೆದುಕೊಂಡ ವಿವಿಧ ರಾಜಮನೆತನಗಳು, ಬ್ರಿಟಿಷ್ ಸರ್ಕಾರ ಇವರ ರಕ್ಷಣೆಗೆ ಬರಲಿಲ್ಲ. ತದ್ವಿರುದ್ಧವಾಗಿ ಇವರು ಅತ್ಯಾಚಾರಕ್ಕೆ ಶೋಷಣೆಗೆ ಒಳಾಗದರು. ಇವರನ್ನು ಕಂಡಲ್ಲಿ ಹಿಡಿದು ಬಂಧಿಸುವ ಕಾರ್ಯ ನಡೆಯಿತು. ಈ ಎಲ್ಲಾ ಕಾರಣಗಳಿಂದಾಗಿ ಲಂಬಾಣಿಗರು ಅರಣ್ಯದಲ್ಲಿ ಜೀವನ ಸಾಗಿಸುವುದು ಅನಿವಾರ್ಯವಾಯಿತು. ಈ ಮೇಲಿನ ಎಲ್ಲಾ ದಾಖಲೆಗಳಿಂದ ಕಂಡುಬರುವುದೇನೆಂದರೆ, ಲಂಬಾಣಿಗರು ಮೂಲತಃ ಬುಡಕಟ್ಟು ಸಮುದಾಯಕ್ಕೆ ಸೇರಿಲ್ಲ. ಮೊದಲು ವ್ಯಾಪರಾಸ್ಥರಾಗಿದ್ದು ಮೊಗಲರ ಸೈನಿಕರಿಗೆ ಆಹಾರ ಹಾಗೂ ಯುದ್ಧದ ಸಾಮಾಗ್ರಿಗಳನ್ನು ಸಾಗಿಸಲು ಸಾಗಾಣಿಕೆಯ ಕೊರತೆ ಉಂಟಾದಾಗ ದನಕರುಗಳನ್ನು ಹೊಂದಿದ್ದ ಲಂಬಾಣಿಗರಿಗೆ ಒತ್ತಾಯಪೂರ್ವಕವಾಗಿ ಸೈನಿಕರಿಗೆ ಆಹಾರ ಧಾನ್ಯ ಒದಗಿಸುವ ಕಾರ್ಯಗಳಲ್ಲಿ ತೊಡಗಿಸಿದರು. ನಂತರ ಬ್ರಿಟಿಷ್ ಆಡಳಿತ ಅವಧಿಯಲ್ಲಿ ಉದ್ಯೋಗ ಕಳೆದುಕೊಂಡು ಇತರ ಜನಾಂಗಗಳಿಂದ ಶೋಷಣೆಗೆ ಒಳಗಾಗಿ ಕಾಡಿನಲ್ಲಿ ವಾಸಿಸುವುದು ಅನಿವಾರ್ಯವಾಗಿದ್ದರಿಂದ ಆದಿವಾಸಿಗಳ ಹಾಗೆ ಜೀವನ ಸಾಗಿಸಿದರು. ಭಾರತಕ್ಕೆ ಸ್ವಾತಂತ್ರ್ಯ ದೊರೆತ ನಂತರ ಸರ್ಕಾರ ಲಂಬಾಣಿಗರನ್ನು ಒಂದು ಹಿಂದುಳಿದ ಜಾತಿ ಎಂದು ಪರಿಗಣಿಸಿ ಪರಿಶಿಷ್ಟ ಜಾತಿಯ ಪಟ್ಟಿಗೆ ಸೇರಿಸಿದೆ. ಯಾವುದೆ ಬುಡಕಟ್ಟು ಸಮುದಾಯ ನಾಗರೀಕ ಸಮಾಜದಿಂದ ದೂರವಿದ್ದದ್ದು ಕಂಡುಬರುತ್ತದೆ. ಆದರೆ ಲಂಬಾಣಿಗರಂತೆ ಬೃಹತ್ ವ್ಯಾಪಾರದಲ್ಲಿ ತೊಡಗಿದ್ದು ಕಂಡುಬರುವುದಿಲ್ಲ.

**ಲಂಬಾಣಿಗರ ಈಗಿನ ಸ್ಥಿತಿ-ಗತಿ :**

ಲಂಬಾಣಿಗರು ತಮ್ಮ ಜೊತೆಗಿದ್ದ ಅಸಂಖ್ಯಾತ ದನಕರುಗಳನ್ನು ಸಾಕಲಾಗದೆ ಮಾರಾಟ ಮಾಡಿ ತಮ್ಮ ಮೂಲ ಉದ್ಯೋಗ ಕಳೆದುಕೊಂಡು ಭಾರತದ ವಿವಿದೆಡೆ ವಲಸೆ ಹೋಗಿ ವಿಭಿನ್ನ ಉದ್ಯೋಗಗಳಲ್ಲಿ ತೊಡಗಿದರು. ಹೆಚ್ಚಿನ ಸಂಖ್ಯೆಯಲ್ಲಿ ಲಂಬಾಣಿಗರು ಕೃಷಿ ಸಂಬಂಧಿ ಕೆಲಸಗಳಲ್ಲಿ ತೊಡಗಿದ್ದಾರೆ. ಕೃಷಿ ಕಾರ್ಯಗಳಲ್ಲಿ ಇವರಿಗೆ ಆಸಕ್ತಿ, ಅನುಭವ ಇಲ್ಲದಿದ್ದರೂ ಜೀವನ ಸಾಗಿಸಲು ಬೇರೆ ದಾರಿ ತೋರದೆ, ಒಕ್ಕಲುತನವನ್ನು ತಮ್ಮ ಜೀವನ ಮಾರ್ಗವನ್ನಾಗಿಸಿಕೊಂಡಿದ್ದಾರೆ. ಭಾರತಕ್ಕೆ ಸ್ವಾತಂತ್ರ್ಯ ದೊರೆತ ನಂತರ ಭಾರತ ಸರ್ಕಾರ ಬ್ರೀಟಿಷರು ಜಾರಿಮಾಡಿದ ಕಾನೂನುಗಳನ್ನು ಬದಲಾವಣೆ ಮಾಡಿ 1949ರಲ್ಲಿ 'ಅಪಾರಾಧಿ ಬುಡಕಟ್ಟುಗಳ ಕಾಯ್ದೆ' ಹಿಂದಕ್ಕೆ ಪಡೆಯಿತು. ಇದರಿಂದ ಲಂಬಾಣಿಗಳಿಗೆ ಇತರರ ಹಾಗೆ ಸಾಮಾಜಿಕ ಸ್ಥಾನಮಾನಗಳು ದೊರೆತವು ಸರ್ಕಾರ ಇವರ ಆರ್ಥಿಕ ಮತ್ತು ಸಾಮಾಜಿಕ ಏಳಿಗೆಗಾಗಿ ಹೊಸ ಹೊಸ ಅವಕಾಶಗಳನ್ನು ನೀಡಿತು. ವಿಜಾಪುರ ಜಿಲ್ಲೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ವಾಸವಾಗಿರುವ ಲಂಬಾಣಿಗರಲ್ಲಿ ಹೆಚ್ಚಿನವರಿಗೆ ಸ್ವಂತ ಭೂಮಿ ಇಲ್ಲದೆ ಶ್ರೀಮಂತರ ಭೂಮಿ ಬಾಡಿಗೆ ಪಡೆದು ಕೃಷಿಯಲ್ಲಿ ತೊಡಗಿದ್ದಾರೆ. ಮತ್ತೆ ಕೆಲವರು ಕೃಷಿ ಕಾರ್ಮಿಕರಾಗಿ, ಕೂಲಿ ಆಳುಗಳಾಗಿ, ಜೀತದಾಳುಗಳಾಗಿ ಕೆಲಸ ಮಾಡುತ್ತಿದ್ದಾರೆ. ಲಂಬಾಣಿಗರಲ್ಲಿ "ನೂರಾರು ವರ್ಷಗಳಿಂದ ರೂಢಿಯಲ್ಲಿದ್ದ ವಲಸೆಯ ಪ್ರವೃತ್ತಿಯು ಈಗಲೂ ದೃಢವಾಗಿದೆ". (ನಂಜುಂಡಯ್ಯ:1928:148)[23] ಪ್ರಸ್ತುತ ಆರ್ಥಿಕವಾಗಿ ಹಿಂದುಳಿದ ಲಂಬಾಣಿಗರು ಜೀವನ ಸಾಗಿಸಲು ನಗರ ಪ್ರದೇಶಗಳಿಗೆ ವಲಸೆ ಹೋಗುತ್ತಿದ್ದಾರೆ.

---

23. Nanjundayya and Ananthayyar: (1928) 'The Mysore Tribes and Castes' Bangalore, Mysore Govt. Press, P-148.

ಲಂಬಾಣಿಗರು ವಾಸಿಸುವ ಪ್ರದೇಶಗಳನ್ನು ತಾಂಡಾಗಳೆಂದು ಕರೆಯುತ್ತಾರೆ. ತಾಂಡಾಗಳಿಗೆ ಸಮೀಪದ ಗ್ರಾಮದ ಹೆಸರುಗಳಿಂದ ಕರೆಯುತ್ತಾರೆ. ಬಸವನ ಬಾಗೇವಾಡಿಯ ಸಮೀಪವಿರುವ ತಾಂಡಾಗಳನ್ನು ಬಾಗೇವಾಡಿ ತಾಂಡಾ ನಂ.1, ತಾಂಡಾ ನಂ.2, ನರಸಲಗಿ ಗ್ರಾಮದ ಸಮೀಪವಿರುವ ತಾಂಡಾ ನರಸಲಗಿ ತಾಂಡಾ ಎಂದೂ, ಅಂಬಳನೂರು ಗ್ರಾಮದ ಸಮೀಪವಿರುವ ತಾಂಡಾವನ್ನು ಅಂಬಳನೂರು ತಾಂಡಾ ಎಂದು ಹೆಸರಿಸಲಾಗಿದೆ. ಸರಕಾರಿ ದಾಖಲೆಗಳಲ್ಲಿಯೂ ಇವೇ ಹೆಸರುಗಳನ್ನು ನಮೂದಿಸಿದ್ದು ಕಂಡುಬರುತ್ತದೆ. ಇತ್ತೀಚೆಗೆ ಕರ್ನಾಟಕ ಸರ್ಕಾರ ಕೆಲವು ಲಂಬಾಣಿ ತಾಂಡಾಗಳನ್ನು ಕಂದಾಯ ಗ್ರಾಮಗಳನ್ನಾಗಿ ಘೋಷಿಸಿದ್ದರಿಂದ ತಾಂಡಾಗಳಿಗೆ ಹೊಸ ಹೊಸ ಹೆಸರುಗಳನ್ನು ಇಡಲು ಪ್ರಾರಂಭಿಸಲಾಗಿದೆ. ವಿಜಾಪುರ ಜಿಲ್ಲೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಲಂಬಾಣಿ ತಾಂಡಾಗಳು ಕಂಡುಬಂದರೂ, ಈವರೆಗೆ ಅವುಗಳಿಗೆ ಕಂದಾಯ ಗ್ರಾಮಗಳನ್ನಾಗಿ ಪರಿವರ್ತಿಸಿಲ್ಲ. ಆದ್ದರಿಂದ ಇವು ಮೂಲಭೂತ ಸೌಲಭ್ಯಗಳಾದ ರಸ್ತೆ, ಒಳಚರಂಡಿ, ಆರೋಗ್ಯ ಕೇಂದ್ರಗಳು, ಮುಂತಾದವುಗಳಿಂದ ವಂಚಿತವಾಗಿವೆ. ಈ ಪ್ರದೇಶದ ಲಂಬಾಣಿಗರು ಶ್ರಮ ಜೀವಿಗಳಾಗಿದ್ದು ಹೆಚ್ಚಾಗಿ ಕೃಷಿ ಕಾರ್ಯಗಳಲ್ಲಿ ತೊಡಗಿದ್ದಾರೆ. ಕೃಷಿ ಕಾರ್ಮಿಕರಿಗೆ ವರ್ಷದ ಎಲ್ಲಾ ದಿನಗಳಲ್ಲಿ ಕೆಲಸ ದೊರೆಯುವುದಿಲ್ಲ. ಆದ್ದರಿಂದ ನಿಸರ್ಗದಲ್ಲಿ ಸಿಗುವ ಕಟ್ಟಿಗೆ, ಜೇನು, ನೆಲ್ಲಿಕಾಯಿ, ಕವಳಿ, ಬಿಕ್ಕೆಹಣ್ಣು, ಮುಂತಾದವುಗಳನ್ನು ಸಂಗ್ರಹಿಸಿ ಪಟ್ಟಣದಲ್ಲಿ ಮಾರಾಟ ಮಾಡಿ ಜೀವನ ಸಾಗಿಸುತ್ತಿದ್ದಾರೆ. ಕೆಲವರು ಕಳ್ಳಬಟ್ಟಿ ಸಾರಾಯಿ ತಯಾರಿಸಿ ಜೀವನ ಸಾಗಿಸಿದರೆ, ಮತ್ತೆ ಕೆಲವರು ನಿಷ್ಠೆಯಿಂದ ದುಡಿದು ಜೀವನ ಸಾಗಿಸುತ್ತಿದ್ದಾರೆ. ನೀರಾವರಿ ಸೌಲಭ್ಯಗಳಿಂದ ವಂಚಿತವಾದ, ಸದಾ ಬರಗಾಲದಿಂದ ಪೀಡಿತವಾಗಿರುವ ಈ ಪ್ರದೇಶದ ಲಂಬಾಣಿಗರು ಮಳೆಯ ಮೇಲೆ ಅವಲಂಬಿಸಿದ್ದಾರೆ. ಸಕಾಲಕ್ಕೆ ಮಳೆ ಆಗದೇ ಇದ್ದಾಗ, ಸಮೀಪದ ನಗರ ಪ್ರದೇಶಗಳಾದ ಮುಂಬೈ ಮತ್ತು ಗೋವಾ ರಾಜ್ಯಕ್ಕೆ ವಲಸೆ ಹೋಗಿ ಕೆಲವು ದಿನ ಕೆಲಸ ಮಾಡಿ ಹಣ ಸಂಪಾದಿಸಿಕೊಂಡು ತಮ್ಮ ಮೂಲ ಸ್ಥಳಕ್ಕೆ ಮರಳುತ್ತಾರೆ. ವಿಜಾಪುರ ಜಿಲ್ಲೆಯ ಲಂಬಾಣಿಗರು ಸದಾ ಬರಗಾಲದ ಬವಣೆಯನ್ನು ಅನುಭವಿಸುತ್ತಾರೆ. ಈ ಜಿಲ್ಲೆಯ ಪರಿಶಿಷ್ಟ ಜಾತಿಯ ಜನರು ಬಡತನ ಮತ್ತು ತಮ್ಮ ಮೇಲಾಗುವ ಮೇಲ್ಜಾತಿಯ ಜನರ ಶೋಷಣೆ ತಾಳಲಾರದೆ ಸ್ವತಂತ್ರವಾಗಿ ಜೀವನ ಸಾಗಿಸಲು 1961ರ ನಂತರ ಸಾಕಷ್ಟು ಸಂಖ್ಯೆಯಲ್ಲಿ ಗೋವಾ ಹಾಗೂ ಮುಂಬೈ ನಗರಕ್ಕೆ ವಲಸೆಹೋಗಿದ್ದಾರೆ ಮೊದಲು ಬರಗಾಲದ ಸಂದರ್ಭದಲ್ಲಿ ಲಂಬಾಣಿಗರು ತಮ್ಮ ಸಮೀಪದ ಹಳ್ಳಿಗಳಿಗೆ ವಲಸೆಹೋಗಿ ಕೂಲಿ ಕೆಲಸ ಮಾಡುತ್ತಿದ್ದರು. ಆದರೆ 1972ರಲ್ಲಿ ವಿಜಾಪುರ ಜಿಲ್ಲೆಯು ಭೀಕರ ಬರಗಾಲವನ್ನು ಎದುರಿಸಿತು. ಈ ಸಂದರ್ಭದಲ್ಲಿ ಲಂಬಾಣಿಗರಿಗೆ ಯಾವುದೇ ಕೆಲಸಕಾರ್ಯಗಳು ಸಿಗದೆ ವಿಪರೀತ ಬಡತನ ಎದುರಿಸಿದರು ಈ ಸಂದರ್ಭದಲ್ಲಿ ಅನೇಕರು ತಪ್ಪಲನ್ನು ತಿಂದು ಜೀವನ ಸಾಗಿಸಿದರು ಇಂಥಹ ಪರಿಸ್ಥಿತಿಯಲ್ಲಿ ಈಗಾಗಲೇ ಗೋವಾ ರಾಜ್ಯದ ಪರಿಚಯವಿರುವ ಪರಿಶಿಷ್ಟ ಜಾತಿಯ ಜನರಾದ ದೇವಪ್ಪಹಲಗಿ, ಹಣಮಂತ, ಪೀರಪ್ಪಮಾದರ ಅವರು ಲಂಬಾಣಿಗರ ಪರಿಸ್ಥಿತಿ ಕಣ್ಣಾರೆ ಕಂಡು ಗೋವೆಯಲ್ಲಿ ಕೆಲಸದ ಅವಕಾಶಗಳಿವೆ ಎಂಬ ವಿಷಯ ತಿಳಿಸಿದರು. ಸುದ್ದಿ ತಿಳಿದ ಲಂಬಾಣಿ ಯುವಕರು ರೈಲಿನಲ್ಲಿ ಟಿಕೆಟ್ ಇಲ್ಲದೆ ಇವರ ಹಿಂದೆ ಗೋವೆಗೆ ಪ್ರಯಾಣ ಬೆಳಸಿದರು. ನಂತರ ಕೆಲಸದ ಅವಕಾಶವಿರುವುದನ್ನು ಖಚಿತಪಡಿಸಿಕೊಂಡು ಗೋವೆಗೆ ಹೆಚ್ಚಿನ ಸಂಖ್ಯೆಯಲ್ಲಿ ಲಂಬಾಣಿಗರು ವಲಸೆ ಹೋಗಲು ಪ್ರಾರಂಭಿಸಿದರು ಎಂಬ ಅಂಶ ವಲಸಿಗರನ್ನು

ಸಂದರ್ಶಿಸಿದಾಗ ತಿಳಿದು ಬಂದಿದೆ. ಹೆಚ್ಚಿನ ಸಂಖ್ಯೆಯ ಲಂಬಾಣಿಗರು ಶಾಶ್ವತ ವಲಸಿಗರಲ್ಲ. ಋತುಮಾನದ ವಲಸಿಗರಾಗಿದ್ದಾರೆ.

ಲಂಬಾಣಿಗರನ್ನು ಆಯಾ ರಾಜ್ಯಗಳಲ್ಲಿ ವಿವಿಧ ಜಾತಿಯ ಪಟ್ಟಿಗೆ ಸೇರಿಸಿದ್ದು ಕಂಡುಬರುತ್ತದೆ. ಆಂಧ್ರ ಪ್ರದೇಶ, ಒರಿಸ್ಸಾ, ಗುಜರಾತ ರಾಜ್ಯಗಳಲ್ಲಿ ಇವರನ್ನು (ಎಸ್.ಟಿ.) ಪರಿಶಿಷ್ಟ ಬುಡಕಟ್ಟಿಗೆ, ಕರ್ನಾಟಕ, ಕೇರಳಗಳಲ್ಲಿ ಪರಿಶಿಷ್ಟ ಜಾತಿಗೆ (ಎಸ್.ಸಿ.) ಮಧ್ಯಪ್ರದೇಶ, ಮಹಾರಾಷ್ಟ್ರಗಳಲ್ಲಿ (ಡಿ.ಎನ್.ಟಿ.) ಅ ವರ್ಗೀಕೃತ ಜಾತಿಗೆ, ಹಾಗೂ ಇತರ ರಾಜ್ಯಗಳಲ್ಲಿ ಹಿಂದುಳಿದ ಜಾತಿಯ ಪಟ್ಟಿಗೆ (ಓ.ಬಿ.ಸಿ.) ಸೇರಿಸಲಾಗಿದೆ. ಇತ್ತೀಚೆಗೆ ಶಿಕ್ಷಣ ಪಡೆದು ಮೀಸಲಾತಿಯ ಸೌಲಭ್ಯ ಪಡೆದ ಕೆಲವು ಲಂಬಾಣಿಗರು ಸರ್ಕಾರದ ವಿವಿಧ ಇಲಾಖೆಗಳಲ್ಲಿ ಶಿಕ್ಷಕರಾಗಿ, ಅಧಿಕಾರಿಗಳಾಗಿ ಕೆಲಸ ಮಾಡುತ್ತಿದ್ದಾರೆ. ರಾಜಕೀಯ ಕ್ಷೇತ್ರದಲ್ಲಿಯೂ ಲಂಬಾಣಿಗರು ಪಾದಾರ್ಪಣೆ ಮಾಡಿದ್ದು, ಸ್ಥಳೀಯ ಗ್ರಾಮ ಪಂಚಾಯತ್, ತಾಲೂಕ್ ಪಂಚಾಯತ್, ಜಿಲ್ಲಾ ಪರಿಷತ್ ಹಾಗೂ ವಿಧಾನಸಭೆಗಳಲ್ಲಿ ಲಂಬಾಣಿ ನಾಯಕರು ಚುನಾಯಿತರಾಗುತ್ತಿದ್ದಾರೆ. ಹೀಗೆ ಉದ್ಯೋಗದಲ್ಲಿ ನಿರತರಾಗುತ್ತಿರುವ ಹಾಗೂ ಬಹುಸಂಖ್ಯಾತರ ಪ್ರವಾಹದಲ್ಲಿ ಸೇರಿಸಿಕೊಂಡು ಬದಲಾವಣೆ ಹೊಂದುತ್ತಿರುವ ಲಂಬಾಣಿಗರ ಸಂಖ್ಯೆ ಬಹಳ ಕಡಿಮೆ ಇದೆ. ಹೆಚ್ಚಿನ ಸಂಖ್ಯೆಯ ಲಂಬಾಣಿಗರು ಇಂದಿಗೂ ಕಾರ್ಮಿಕರಾಗಿದ್ದು, ತಮ್ಮ ಮೂಲ ಸ್ಥಳದಲ್ಲಿ ಕೆಲಸ ಸಿಗದೇ ಇರುವುದರಿಂದ ಗೋವಾ ರಾಜ್ಯಕ್ಕೆ ವಲಸೆ ಹೋಗುತ್ತಿದ್ದಾರೆ. ನಗರೀಕರಣ ಮತ್ತು ಕೈಗಾರೀಕರಣದ ಪ್ರಭಾವದಿಂದ, ವೇಷಭೂಷಣ, ಉದ್ಯೋಗ, ಸ್ಥಾನಮಾನ, ಜೀವನ ಕ್ರಮ, ಸಾಮಾಜಿಕ ಸಂಸ್ಥೆಗಳಲ್ಲಿ ಬದಲಾವಣೆಯಾಗುತ್ತಿರುವುದು ಕಂಡುಬರುತ್ತದೆ. ಇತ್ತೀಚೆಗೆ ಶಿಕ್ಷಣ, ಉದ್ಯೋಗ ಪಡೆದು ನಗರಗಳಲ್ಲಿ ನೆಲೆಸುತ್ತಿದ್ದು, ನಗರದಲ್ಲಿ ಇವರು ಒಂದು ಜಾತಿಯಾಗಿ ಹೊರಹೊಮ್ಮುತ್ತಿದ್ದಾರೆ. ಬಸವನ ಬಾಗೇವಾಡಿ ಪ್ರದೇಶದ ಶೇ.30ರಷ್ಟು ಲಂಬಾಣಿಗರು ನೆರೆಯ ರಾಜ್ಯಗಳಾದ ಗೋವಾ ಮತ್ತು ಮಹಾರಾಷ್ಟ್ರಕ್ಕೆ ಕೂಲಿ ಕೆಲಸ ಮಾಡಲು ವಲಸೆ ಹೋಗಿ ಅಲ್ಲಿಯ ನಗರ ಸಂಸ್ಕೃತಿಯ ಪ್ರಭಾವದಿಂದ ಬದಲಾವಣೆಗೊಳ್ಳುತ್ತಿದ್ದಾರೆ. ಹೀಗೆ ತಮ್ಮ ರಪ್ಪು ಕಾರ್ಯದ ಕೆಲಸವನ್ನು ಕಳೆದುಕೊಂಡ ಲಂಬಾಣಿಗರಿಗೆ ಆರ್ಥಿಕವಾಗಿ ಸುಧಾರಿಸಲು ಅನೇಕ ದಶಕಗಳು ಬೇಕಾದವು. ಇಂದು ಈ ಜನರು ಆರ್ಥಿಕವಾಗಿ ಸ್ವಲ್ಪ ಚೇತರಿಸಿಕೊಳ್ಳುತ್ತಿದ್ದಾರೆ. ಈ ಹಿನ್ನಲೆಯಲ್ಲಿ ಲಂಬಾಣಿ ಸಮುದಾಯ ಬದಲಾವಣೆಗೆ ಒಳಪಡುತ್ತಿದೆ. ಆದ್ದರಿಂದ ಪ್ರಸ್ತುತ ಅಧ್ಯಯನವು ವಲಸೆಯಿಂದ ಲಂಬಾಣಿ ಸಮುದಾಯದ ಮೇಲೆ ಆದ ಪರಿಣಾಮವನ್ನು ತಿಳಿಯುವ ಉದ್ದೇಶ ಹೊಂದಿದೆ.

**ಕೋಷ್ಟಕ 1 ಕರ್ನಾಟಕದಲ್ಲಿ ಲಂಬಾಣಿಗರ ಜನಸಂಖ್ಯೆ :**

ಈವರೆಗೆ ಕರ್ನಾಟಕ ರಾಜ್ಯದಲ್ಲಿ ನಡೆದ ಜನಗಣತಿ ವರದಿಗಳಲ್ಲಿ ಲಂಬಾಣಿಗರ ಜನಸಂಖ್ಯೆಯ ಬಗ್ಗೆ ಖಚಿತವಾದ ಮಾಹಿತಿ ದೊರೆಯುವುದಿಲ್ಲ ಹಾವನೂರು ವರದಿಯ ಪ್ರಕಾರ 1975ರಲ್ಲಿ ಕರ್ನಾಟಕದ ವಿವಿಧ ಜಿಲ್ಲೆಗಳಲ್ಲಿ ವಾಸವಾಗಿರುವ ಲಂಬಾಣಿಗರ ಜನಸಂಖ್ಯೆಯನ್ನು ಈ ಕೆಳಗಿನ ಕೋಸ್ಟಕದಿಂದ ತಿಳಿಯಬಹುದು.

| ಅ.ಸಂ | ಜಿಲ್ಲೆಗಳು | ಲಂಬಾಣಿಗರ ಜನಸಂಖ್ಯೆ |
|---|---|---|
| 1 | ಬೆಂಗಳೂರು | 13929 |
| 2 | ಚಿಕ್ಕಮಗಳೂರು | 17853 |

| | | |
|---|---|---|
| 3 | ಚಿತ್ರದುರ್ಗ | 38138 |
| 4 | ಹಾಸನ | 10462 |
| 5 | ಕೋಲಾರ | 3859 |
| 6 | ಮಂಡ್ಯ | 219 |
| 7 | ಮೈಸೂರು | 1417 |
| 8 | ಶಿವಮೊಗ್ಗ | 50627 |
| 9 | ತುಮಕೂರು | 16637 |
| 10 | ಬಳ್ಳಾರಿ | 35780 |
| 11 | ಕೊಡಗು | 233 |
| 12 | ದಕ್ಷಿಣ ಕನ್ನಡ | 00011 |
| 13 | ಬೆಳಗಾಂವ | 2927 |
| 14 | ವಿಜಾಪುರ | 44669 |
| 15 | ಧಾರವಾಡ | 26556 |
| 16 | ಉತ್ತರ ಕನ್ನಡ | 04181 |
| 17 | ಬೀದರ | 10938 |
| 18 | ಗುಲ್ಬರ್ಗ | 57820 |
| 19 | ರಾಯಚೂರ | 17632 |
| | ಒಟ್ಟು | **353882** |

(ಆಧಾರ: L.G.Havanur: Karnataka Backward Class Commission Report, Vol-II,)

ಮೇಲಿನ ಕೋಷ್ಟಕದ ಪ್ರಕಾರ ಕರ್ನಾಟಕ ರಾಜ್ಯದಲ್ಲಿ ಲಂಬಾಣಿಗರ ಒಟ್ಟು ಜನಸಂಖ್ಯೆ 353882 ಎಂದು ಉಲ್ಲೇಖಿಸಲಾಗಿದೆ. ಈ ಕೋಷ್ಟಕದಿಂದ ತಿಳಿದುಬರುವುದೇನೆಂದರೆ 1975ನೇ ಸಾಲಿನಲ್ಲಿ ಗುಲ್ಬರ್ಗ ಜಿಲ್ಲೆಯು 57820 ಜನಸಂಖ್ಯೆ ಹೊಂದಿ ಕರ್ನಾಟಕದಲ್ಲಿ ಮೊದಲ ಸ್ಥಾನ ಪಡೆದರೆ, ವಿಜಾಪುರ ಜಿಲ್ಲೆಯು 44669 ಜನಸಂಖ್ಯೆ ಹೊಂದಿ ಎರಡನೆಸ್ಥಾನ ಪಡೆದಿತ್ತು. ಚಿತ್ರದುರ್ಗ ಜಿಲ್ಲೆ 38138 ಜನಸಂಖ್ಯೆ ಹೊಂದಿ ಮೂರನೇ ಸ್ಥಾನ ಪಡೆದಿತ್ತು. ದಕ್ಷಿಣ ಕನ್ನಡ ಜಿಲ್ಲೆಯು ಕೇವಲ 11 ಜನರು ಮಾತ್ರ ವಾಸಿಸಿ ಅತ್ಯಂತ ಕಡಿಮೆ ಸಂಖ್ಯೆಯಲ್ಲಿ ಲಂಬಾಣಿಗರು ವಾಸಿಸುವ ಜಿಲ್ಲೆ ಎಂದು ಹೆಸರುವಾಸಿಯಾಗಿದೆ.

## 2. ಇದುವರೆಗೆನ ಸಾಹಿತ್ಯದ ಪರಿಶೀಲನೆ (Review of Literature)

ಲಂಬಾಣಿ ಜನಾಂಗವನ್ನು ಕುರಿತು ಈವರೆಗೆ ನಡೆದಿರುವ ಅಧ್ಯಯನಗಳನ್ನು ಅವಲೋಕಿಸಿದರೆ ಕೈಕೊಂಡ ಅಧ್ಯಯನಗಳು ಬಹಳ ಕಡಿಮೆ ಎಂಬುದು ಕಂಡುಬರುತ್ತದೆ. ಕೆಲವು ಸಂಶೋಧಕರು ಕೈಕೊಂಡ ಅಧ್ಯಯನಗಳು ಲಂಬಾಣಿಗರ ಸಂಸ್ಕೃತಿ, ವೇಷಭೂಷಣ, ಭಾಷೆ, ಸಾಹಿತ್ಯಗಳ ಬಗ್ಗೆ ವಿವರಿಸುತ್ತವೆ. ಈ ಜನಾಂಗದ ಸಾಮಾಜಿಕ ಸಮಸ್ಯೆಗಳು, ಧಾರ್ಮಿಕ, ಆರ್ಥಿಕತೆ, ಸಂಭವಿಸುತ್ತಿರುವ ಬದಲಾವಣೆ ಕುರಿತು ವಿವರಿಸುವುದಿಲ್ಲ.

ಲಂಬಾಣಿಗರನ್ನು ಕುರಿತು ಭಾರತೀಯ ಹಾಗೂ ವಿದೇಶಿ ಬರಹಗಾರರು ಪ್ರಕಟಿಸಿರುವ ಕೆಲವು ಲೇಖನಗಳು ಕಂಡುಬರುತ್ತವೆ. ದಕ್ಷಿಣ ಭಾರತದ ಬುಡಕಟ್ಟು ಮತ್ತು ಜನಾಂಗಗಳನ್ನು ಅಧ್ಯಯನ ಮಾಡಿದ ನಂಜುಂಡಯ್ಯ ಮತ್ತು ಅಯ್ಯರ್, ಎಡ್ಗರ್ ಥರ್ಸ್ಟನ್, ಜಿ.ಎ.ಗ್ರಿಯರ್ಸನ್, ಐರ್ವಿನ್, ಎಂ.ಚಿದನಂದಮೂರ್ತಿ, ಎಲ್.ಜಿ. ಹಾವನೂರ್, ಕೆಂಬರ್‌ಲೇಜ್ ಪ್ರಮುಖರಾಗಿದ್ದಾರೆ. ಇವರ ಬರಹಗಳು ಲಂಬಾಣಿಗರ ಭಾಷೆ, ಉದ್ಯೋಗ ಇತಿಹಾಸ, ಸಾಮಾಜಿಕ ಸಂಸ್ಥೆಗಳ ಮೇಲೆ ಬೆಳಕು ಚಲ್ಲುತ್ತವೆ. ಲಂಬಾಣಿ ಸಮುದಾಯವನ್ನು ಕುರಿತು ನಡೆದಿರುವ ಸಂಶೋಧನೆಗಳನ್ನು ಕೆಳಗಿನಂತೆ ಸಂಕ್ಷಿಪ್ತವಾಗಿ ಪರಿಶೀಲಿಸಲಾಗಿದೆ.

1975ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಮಾನವ ಶಾಸ್ತ್ರ ವಿಭಾಗದಲ್ಲಿ ಶ್ರೀ. ಬಿ.ಜಿ. ಹಳಬರರವರು 'ಉತ್ತರ ಕರ್ನಾಟಕದ ಲಂಬಾಣಿಗರಲ್ಲಿ ಆರ್ಥಿಕ ಬದಲಾವಣೆಯ ಸಾಮಾಜಿಕ ಪರಿಣಾಮ' ಎಂಬ ಅಧ್ಯಯನ ಕೈಕೊಂಡಿದ್ದು ಇದು ಲಂಬಾಣಿಗರ ಆರ್ಥಿಕ ಜೀವನವನ್ನು ಕುರಿತು ಪ್ರತಿಬಿಂಬಿಸುತ್ತದೆ ಮತ್ತು ಲಂಬಾಣಿಗರಲ್ಲಿ ಪ್ರಚಲಿತವಿರುವ ಆರ್ಥಿಕ ಸಾಧನಗಳು, ಒಕ್ಕಲುತನ ಕುರಿತು ವಿವರಿಸಲಾಗಿದೆ. ಸಾಮಾಜಿಕ ವಿಷಯಗಳನ್ನು ವಿವರಿಸಿರುವುದು ಕಂಡುಬರುವುದಿಲ್ಲ.

1976ರಲ್ಲಿ ಶ್ರೀ. ಎಚ್.ಡಿ.ಲಮಾಣಿ ಅವರು 'ಕರ್ನಾಟಕ ಲಂಬಾಣಿ ಜನಪದಗೀತೆಗಳ ಸಾಹಿತ್ಯದ ಅಧ್ಯಯನ' ಕೈಗೊಂಡದ್ದು, ಇದು ಲಂಬಾಣಿಗರಲ್ಲಿ ರೂಢಿಯಲ್ಲಿರುವ ಜಾನಪದ ಗೀತೆಗಳನ್ನು ಅವರ ಸಾಹಿತ್ಯವನ್ನು ವಿವರಿಸುತ್ತದೆ.

1984ರಲ್ಲಿ ಶ್ರೀ ಪಿ.ಕೆ.ಖಂಡೋಬಾ ಅವರು ಕರ್ನಾಟಕದ ಲಂಬಾಣಿಗರು ಒಂದು ಸಾಂಸ್ಕೃತಿಕ ಅಧ್ಯಯನ ಕೈಗೊಂಡಿದ್ದು, ಇದರಲ್ಲಿ ಲಂಬಾಣಿಗರ ಸಂಸ್ಕೃತಿ, ವೇಷಭೂಷಣ, ಆಚರಣೆಗಳನ್ನು ವಿವರಿಸಿದ್ದಾರೆ. ಇದೇ ಸಂಶೋಧಕರ ಇನ್ನೊಂದು ಸಂಶೋಧನಾ ಗ್ರಂಥ 'ಕರ್ನಾಟಕದ ಬುಡಕಟ್ಟಿನ ಲಂಬಾಣಿಗರು' ಇದರಲ್ಲಿ ಲಂಬಾಣಿಗರ ಸಾಮಾಜಿಕ ಸಂಸ್ಥೆಗಳು, ಅವರ ವಲಸೆಯ ಮಾರ್ಗ, ಆಚರಣೆಗಳು, ಸಾಹಿತ್ಯ, ಕಲೆಯನ್ನು ಕುರಿತು ವಿವರಿಸಿದ್ದಾರೆ. ಸಮಾಜಶಾಸ್ತ್ರೀಯ ಅಂಶಗಳನ್ನು ವಿವರಿಸಿದ್ದು ಕಂಡುಬರುವುದಿಲ್ಲ.

1991ರಲ್ಲಿ ಶ್ರೀ ಡಿ.ಬಿ.ನಾಯಕ್‌ರವರು ಕೈಕೊಂಡ ಉತ್ತರ ಕರ್ನಾಟಕದ ಲಂಬಾಣಿ ಜನಪದ ಸಾಹಿತ್ಯ, ಸಂಶೋಧನಾ ಪ್ರಬಂಧದಲ್ಲಿ ಲಂಬಾಣಿಗರ ಜನಪದ ಸಾಹಿತ್ಯ ಕುರಿತು ವಿವರಿಸಿದ್ದಾರೆ. ಇನ್ನೊಂದು ಪುಸ್ತಕ 'ಲಂಬಾಣಿ ಸಂಸ್ಕೃತಿ'ಯಲ್ಲಿ ಸಾಹಿತ್ಯ ಮತ್ತು ಸಂಸ್ಕೃತಿ ಕುರಿತು ವಿವರಿಸಿದ್ದಾರೆ.

1982ರಲ್ಲಿ ಶ್ರೀ ವಿ.ಎಚ್.ಬಾರಿಕೇರಿರವರು, 'ವಿಜಾಪುರ ಜಿಲ್ಲೆಯ ಆಡು ಭಾಷೆಯ ವರ್ಣನಾತ್ಮಕ ವಿಶ್ಲೇಷಣೆ' ಎಂಬ ಸಂಶೋಧನೆ ಕೈಕೊಂಡಿದ್ದು, ಇದು ಲಂಬಾಣಿ ಭಾಷೆಯನ್ನು ಕುರಿತು ವಿವರಿಸುತ್ತದೆ. ಈ ಹಿನ್ನೆಲೆಯಲ್ಲಿ ಲಂಬಾಣಿಗರ ಸಾಮಾಜಿಕ ಸಮಸ್ಯೆಗಳು, ಸಾಮಾಜಿಕ ಜೀವನ, ಆಧುನಿಕತೆಯ ಪರಿಣಾಮ, ಮುಂತಾದ ಸಮಾಜಶಾಸ್ತ್ರೀಯ ಅಂಶಗಳನ್ನು ವಿವರಿಸುವ ಅಧ್ಯಯನಗಳು ಹೆಚ್ಚಾಗಿ ನಡೆದಿಲ್ಲವಾದ್ದರಿಂದ ಪ್ರಸ್ತುತ, ಸಮಾಜಶಾಸ್ತ್ರೀಯ ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ. ಲಂಬಾಣಿ ಸಮುದಾಯವನ್ನು ಕುರಿತು ಈವರೆಗೆ ನಡೆದಿರುವ ಅಧ್ಯಯನಗಳನ್ನು ಸಮೀಕ್ಷಿಸಿದಾಗ ಈ ಕೆಳಗಿನ ಅಂಶಗಳು ಕಂಡುಬರುತ್ತವೆ.

1. ಈವರೆಗೆ ಲಂಬಾಣಿ ಸಮುದಾಯವನ್ನು ಕುರಿತು ನಡೆದಿರುವ ಸಂಶೋಧನೆಗಳು, ಲಂಬಾಣಿಗರ ಇತಿಹಾಸ, ಜಾನಪದ ಮತ್ತು ಸಾಂಸ್ಕೃತಿಕ ಜೀವನಕ್ಕೆ ಸಂಬಂಧಿಸಿವೆ.

2. ಲಂಬಾಣಿಗರು ಮೂಲತಹ ಅಲೆಮಾರಿ ಸಮುದಾಯದವರಾಗಿದ್ದು, ಈವರೆಗೆ ಅವರ ವಲಸೆಯನ್ನು ಕುರಿತು ಸಮಾಜಶಾಸ್ತ್ರೀಯ ಅಧ್ಯಯನ ನಡೆದದ್ದು ಕಂಡುಬರುವುದಿಲ್ಲ.

3. ಈವರೆಗಿನ ಅಧ್ಯಯನಗಳು ಲಂಬಾಣಿಗರ ಸಾಮಾಜಿಕ, ಆರ್ಥಿಕ ಜೀವನದಲ್ಲಿ ಆದ ಬದಲಾವಣೆಗಳನ್ನು ಗುರುತಿಸುವಲ್ಲಿ ಸಫಲರಾಗದಿರುವುದು ಕಂಡುಬರುತ್ತದೆ.

4. ವಲಸೆಯಿಂದ ಲಂಬಾಣಿಗರ ಸಾಮಾಜಿಕ ಜೀವನದಲ್ಲಿ ಬದಲಾವಣೆ ಆಗುತ್ತಿರುವುದನ್ನು ವಿಶ್ಲೇಷಿಸದೆ ಇರುವುದು ಕಂಡುಬರುತ್ತದೆ.

ಈ ಅಂಶಗಳನ್ನು ಗಮನದಲ್ಲಿಟ್ಟುಕೊಂಡು "ಲಂಬಾಣಿಗರ ಗೋವಾ ವಲಸೆ" ಎಂಬ ಸಮಾಜಶಾಸ್ತ್ರೀಯ ಅಧ್ಯಯನವನ್ನು ಕೈಗೊಳ್ಳಲಾಗಿದೆ.

## 3. ಪರಿಶೋಧಿಸಬೇಕಾದ ಸಮಸ್ಯೆ (Problem to be investigated)

ವಲಸೆಯ ಸಮಾಜ ಶಾಸ್ತ್ರೀಯ ಅಧ್ಯಯನವು ವಲಸೆಯಿಂದ ಸಮಾಜದ ವಿವಿಧ ಮಗ್ಗುಲುಗಳ ಮೇಲೆ ಬೀರುವ ಪರಿಣಾಮವನ್ನು ವಿವರಿಸುತ್ತದೆ. ಈ ಕಾರಣಕ್ಕಾಗಿ ಜನರು ತಮ್ಮ ದಿನನಿತ್ಯದ ಜೀವನ ಕ್ರಮದಲ್ಲಿ, ಧಾರ್ಮಿಕ ಜೀವನದಲ್ಲಿ ಬದಲಾವಣೆಗೊಳ್ಳುತ್ತಿದ್ದಾರೆ. ಆದ್ದರಿಂದ ವಲಸೆಯಿಂದ ಸಮಾಜದ ಮೇಲೆ ಅದರಲ್ಲಿಯೂ ಬುಡಕಟ್ಟು ಸಮಾಜದ ಮೇಲೆ ಬೀರುತ್ತಿರುವ ಪರಿಣಾಮವನ್ನು ತಿಳಿಯಲು ಸಮಾಜ ಶಾಸ್ತ್ರೀಯ ಅಧ್ಯಯನದ ಅವಶ್ಯಕತೆ ಇದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವು ಬಿಜಾಪುರ ಜಿಲ್ಲೆಯನ್ನು ಅನುಲಕ್ಷಿಸಿ ವಲಸೆಯಿಂದ ಲಂಬಾಣಿ ಸಮಾಜದ ಮೇಲೆ ಆದ ಸಾಮಾಜಿಕ ಪರಿಣಾಮವನ್ನು ಅಧ್ಯಯನಕ್ಕೊಳಪಡಿಸುವದಾಗಿದೆ.

## 4. ಅಧ್ಯಯನದ ವ್ಯಾಪ್ತಿ (Scope of the Study)

ಪ್ರಸ್ತುತ ಅಧ್ಯಯನಕ್ಕಾಗಿ ವಿಜಾಪುರ ಜಿಲ್ಲೆಯ ~~ಪೋಲಿಂದ ಮೇಲೆ~~ ಬರಗಾಲಕ್ಕೆ ತುತ್ತಾಗುತ್ತಿರುವ ಬಸವನ ಬಗೇವಾಡಿ ತಾಲೂಕಿನ ನರಸಲಗಿ ತಾಂಡಾವನ್ನು ಆಯ್ಕೆ ಮಾಡಿಕೊಂಡು ಸಮಗ್ರ ಹಾಗೂ ಆಳವಾದ ಅಧ್ಯಯನ ಮಾಡಲಾಗಿದೆ. ಇದರ ಜೊತೆಗೆ ವಿಜಾಪುರ ಜಿಲ್ಲೆಯ ಲಂಬಾಣಿ ತಾಂಡಾಗಳನ್ನು ಅವಲೋಕಿಸಿ ಮಾಹಿತಿ ಸಂಗ್ರಹಿಸಲಾಗಿದೆ. ಹಾಗೂ ವಿಜಾಪುರದ ಜಿಲ್ಲೆಯಿಂದ ಗೋವಾ ರಾಜ್ಯಕ್ಕೆ ವಲಸೆ ಹೋಗಿರುವ ಲಂಬಾಣಿಗರನ್ನು ~~ಗೋವಾದಲ್ಲಿ ಸಂದರ್ಶಿ~~ಸಿ ಮಾಹಿತಿ ಸಂಗ್ರಹಿಸಲಾಗಿದೆ.

## 5. ಅಧ್ಯಯನದ ಉದ್ದೇಶಗಳು (Objectives)

1. ವಿಜಾಪುರ ಜಿಲ್ಲೆಯ ಲಂಬಾಣಿಗರ ಜನಸಂಖ್ಯಾ, ಆರ್ಥಿಕ, ರಾಜಕೀಯ, ಸಮಾಜಿಕ, ಸಾಂಸ್ಕೃತಿಕ ರೂಪರೇಷಗಳನ್ನು ತಿಳಿದುಕೊಳ್ಳುವುದು

2. ಲಂಬಾಣಿಗರು ಗೋವಾಕ್ಕೆ ವಲಸೆ ಹೋಗಲು ಕಾರಣವಾದ ಅಂಶಗಳನ್ನು ತಿಳಿಯುವುದು.

3. ವಲಸೆಯು ದ್ವಿಮುಖ ಬದಲಾವಣೆಗೆ ಕಾರಣವಾಗಿದೆ ಅದು ಹೊರತಳ್ಳುವ ಸಮಾಜದ ಮೇಲೆಯೂ, ಬರಮಾಡಿಕೊಳ್ಳುವ ಸಮಾಜದ ಮೇಲೆಯೂ, ಪರಿಣಾಮ ಬೀರುತ್ತದೆ ಹೀಗಾಗಿ ಲಂಬಾಣಿಗರ

ಗೋವಾ ವಲಸೆಯು ಅವರನ್ನು ಬರಮಾಡಿಕೊಂಡ ಗೋವೆಯ ಪ್ರದೇಶದ (ಸಮಾಜದ) ಮೇಲೆ ಹಾಗೂ ಅವರನ್ನು ಹೊರತಳ್ಳಿದ ವಿಜಾಪುರ ಜಿಲ್ಲೆಯ ಲಂಬಾಣಿ ಸಮಾಜ ಹಾಗೂ ಲಂಬಾಣೇತರ ಸಮಾಜದ ಮೇಲೆ ಬೀರುವ ಪ್ರಭಾವವನ್ನು ತಿಳಿದುಕೊಳ್ಳುವುದು

4. ಶಿಕ್ಷಣ, ಮೀಸಲಾತಿ, ಯೋಜನೆಗಳು ಲಂಬಾಣಿ ಸಮಾಜದ ಮೇಲೆ ಬೀರಿದ ಪರಿಣಾಮ ತಿಳಿಯುವುದು
5. ವಲಸೆಯಿಂದ ಲಂಬಾಣಿಗರ ಸಾಮಾಜಿಕ, ಆರ್ಥಿಕ ಜೀವನದ ಮೇಲೆ ಉಂಟಾದ ಪರಿಣಾಮವನ್ನು ಗುರುತಿಸುವುದು.

## 6. ಅಧ್ಯಯನದ ಪ್ರಾಕಲ್ಪನೆ (Hypotheses)

1. ಬಡತನ, ಬರಗಾಲ, ಕಡಿಮೆ ಕೂಲಿದರ, ನಿರುದ್ಯೋಗ ಮುಂತಾದವುಗಳಿಂದಾಗಿ ಲಂಬಾಣಿಗರು ವಲಸೆ ಹೋಗುತ್ತಾರೆ.
2. ವಲಸೆಯಿಂದ ಲಂಬಾಣಿಗರ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ, ರಾಜಕೀಯ ಜೀವನದಲ್ಲಿ ಬದಲಾವಣೆಯಾಗುತ್ತದೆ.
3. ಗೋವಾದಲ್ಲಿ ಹೆಚ್ಚಿನ ಕೂಲಿದರ, ಹೆಚ್ಚಿನ ಉದ್ಯೋಗದ ಅವಕಾಶಗಳು, ಮನೋರಂಜನೆ ಮುಂತಾದವುಗಳು ಲಂಬಾಣಿಗರನ್ನು ವಲಸೆ ಬರಲು ಆಕರ್ಷಿಸುತ್ತವೆ.
4. ವಲಸೆಯಿಂದ ಲಂಬಾಣಿಗರ ಆರ್ಥಿಕ ಸ್ಥಿತಿಗತಿ ಸುಧಾರಿಸುತ್ತದೆ ಅಥವಾ ಸುಧಾರಿಸುತ್ತಿಲ್ಲ ಎಂಬ ಅಂಶ ತಿಳಿದುಕೊಳ್ಳುವುದು.
5. ವಲಸೆ ಹೋದ ಪ್ರದೇಶದಲ್ಲಿ ವಲಸಿಗರ ಕುಟುಂಬದ ಮೇಲೆ ಲಂಬಾಣಿ ಮತ್ತು ಲಂಬಾಣೇತರ ಸಮುದಾಯದ ಮೇಲೆ ಪರಿಣಾಮ ಬೀರುತ್ತದೆ.
6. ಲಂಬಾಣಿಗರು ಮುಖ್ಯವಾಹಿನಿಯಲ್ಲಿ ಸೇರಿಕೊಳ್ಳಲು ಅನುವಾಗುತ್ತದೆ. Leads Lambani's to join the mainstream.
7. ವಲಸೆ ಹೋದ ನಂತರ ಗೋವಾದಲ್ಲಿ ಲಂಬಾಣಿಗರ ಸಾಮಾಜಿಕ, ಅರ್ಥಿಕ, ಸ್ಥಿತಿಗತಿ, ಸಾಂಸ್ಕೃತಿಕ ಕಾರ್ಯಗಳಲ್ಲಿ ಭಾಗವಹಿಸುವಿಕೆ, ವಲಸಿಗರ ಮಕ್ಕಳ ಶೈಕ್ಷಣಿಕ ಸ್ಥಿತಿಗತಿಗಳಲ್ಲಿ ಬದಲಾವಣೆಯಾಗುತ್ತದೆ.

## 7. ಅಧ್ಯಯನದ ಸಂಶೋಧನಾ ವಿನ್ಯಾಸ ಮತ್ತು ವಿಧಾನಗಳು (Research Design and Methodology)

ಪ್ರಸ್ತುತ ಅಧ್ಯಯನಕ್ಕಾಗಿ ಮಾಹಿತಿಯನ್ನು ಸಂಗ್ರಹಿಸಲು ಮಾದರಿ ವಿಧಾನವನ್ನು (Sampling Method) ಬಳಸಿಕೊಳ್ಳಲಾಯಿತು. ಅಧ್ಯಯನಕ್ಕಾಗಿ ಆಯ್ಕೆ ಮಾಡಿದ ಪ್ರದೇಶದ ಕುಟುಂಬಗಳಿಂದ ಮಾಹಿತಿಯನ್ನು ಸಂದರ್ಶನ ವಿಧಾನದ ಮೂಲಕ ಸಂಗ್ರಹಿಸಲಾಯಿತು. ಸಂದರ್ಶನದಲ್ಲಿ ಲಂಬಾಣಿಗರಲ್ಲಿ ವಲಸೆಯಿಂದ ಆದ ಪರಿಣಾಮವನ್ನು ತಿಳಿಯಲು ಹೆಚ್ಚಿನ ಗಮನ ನೀಡಲಾಯಿತು. ಈ ವಿಧಾನದ ಜೊತೆಗೆ ಸಹಭಾಗಿತ್ವ

ಅವಲೋಕನಾ ವಿಧಾನ (Participant Observation Method) ಬಳಸಿಕೊಂಡು, ಮಾಹಿತಿ ಕಲೆ ಹಾಕಲಾಯಿತು. ಮಾಧ್ಯಮಿಕ ಮಾಹಿತಿಯನ್ನು (Secondary Data) ಹಳ್ಳಿಯ ದಾಖಲೆಗಳು, ಮಂಡಲ ಪಂಚಾಯಿತಿ ಕಛೇರಿ, ದಿನಪತ್ರಿಕೆ ಮುಂತಾದವುಗಳಿಂದ ಸಂಗ್ರಹಿಸಲಾಯಿತು. ಈ ಅಧ್ಯಯನದಲ್ಲಿ ವೈಯಕ್ತಿಕ ಅವಲೋಕನೆ ಮತ್ತು ಸಂದರ್ಶನ ವಿಧಾನದಲ್ಲಿ ತಪಶೀಲು (Interview Schedule) ಬಳಸಿ ಮಾಹಿತಿ ಸಂಗ್ರಹಿಸಲಾಯಿತು.

**8. ಅಧ್ಯಯನದ ಸಂಶೋಧನಾ ಸಾಧನಗಳು (Details of the Tools, etc., required for the Study)**

ಪ್ರಸ್ತುತ ಅಧ್ಯಯನಕ್ಕಾಗಿ ಕ್ಷೇತ್ರ ಕಾರ್ಯವನ್ನು ಕೈಕೊಳ್ಳಲಾಯಿತು. ಕ್ಷೇತ್ರ ಕಾರ್ಯದ ಮೂಲಕ ಮಾಹಿತಿ ಸಂಗ್ರಹಿಸಿ ದೃಢೀಕರಿಸಲು ಛಾಯಾಚಿತ್ರಗಳನ್ನು ತೆಗೆಯಲು ಕ್ಯಾಮರಾ, ಟೇಪ್‌ರೆಕಾರ್ಡರ್, ವಿಡಿಯೋ ಕ್ಯಾಮರಾ ಬಳಸಲಾಯಿತು.

**9. ಅಧ್ಯಯನದ ಶೈಕ್ಷಣಿಕ ಮಹತ್ವ (Academic Significance of the Study)**

ವಲಸೆಯನ್ನು ಕುರಿತು ಅನೇಕ ಸಮಾಜಶಾಸ್ತ್ರಜ್ಞರು ಅಧ್ಯಯನಗಳನ್ನು ಕೈಕೊಂಡು ಉಪಯುಕ್ತವಾದ ಮಾಹಿತಿಯನ್ನು ಸಂಗ್ರಹಿಸಿದ್ದಾರೆ. ಪ್ರಸ್ತುತ ಅಧ್ಯಯನವು ಬುಡಕಟ್ಟು ಸಮಾಜದ ವಲಸೆ ಪ್ರಕ್ರಿಯೆ ಕುರಿತು ಅಧ್ಯಯನ ಮಾಡುತ್ತದೆ. ಆದ್ದರಿಂದ ಪ್ರಸ್ತುತ ಅಧ್ಯಯನವು ಬುಡಕಟ್ಟು ಸಮಾಜದ ವಲಸೆಗೆ ಕಾರಣವಾದ ಅಂಶಗಳನ್ನು ಅವರ ಮೇಲೆ ಆಗಿರುವ ಪರಿಣಾಮವನ್ನು ಅಭ್ಯಸಿಸುವುದರಿಂದ ಶೈಕ್ಷಣಿಕ ಮಹತ್ವ ಪಡೆಯುತ್ತದೆ. ವಲಸೆಯನ್ನು ಕುರಿತು ಹೊಸ ವಿಷಯವನ್ನು ಆಳವಾಗಿ ತಿಳಿದುಕೊಳ್ಳಲು ಈ ಅಧ್ಯಯನ ಸಹಾಯವಾಗುತ್ತದೆ.

**10. ಸಮಕಾಲೀನ ಸಮಸ್ಯೆಗಳಿಗೆ ಪ್ರಸ್ತುತ ಅಧ್ಯಯನದ ಸಂಬಂಧ (Relevance to the present day problems)**

ಆಧುನಿಕ ಸಮಾಜವು ಬಡತನ, ನಿರುದ್ಯೋಗ, ಭಿಕ್ಷಾಟನೆ, ವೇಶ್ಯಾವೃತ್ತಿ, ಮುಂತಾದ ಸಾಮಾಜಿಕ ಸಮಸ್ಯೆಗಳನ್ನು ಎದುರಿಸುತ್ತಿದೆ. ಇಂತಹ ಸಮಕಾಲೀನ ಸಾಮಾಜಿಕ ಸಮಸ್ಯೆಗಳ ಪಟ್ಟಿಗೆ ವಲಸೆಯು ಸೇರಿಕೊಳ್ಳುತ್ತದೆ. ಔದ್ಯೋಗಿಕರಣದ ಪರಿಣಾಮವಾಗಿ ನಗರ ಪ್ರದೇಶದಲ್ಲಿ ಉದ್ಯೋಗದ ಅವಕಾಶಗಳು ಹೆಚ್ಚಾಗಿ ಸೃಷ್ಠಿಯಾಗಿದ್ದರಿಂದ ಗ್ರಾಮೀಣ ಪ್ರದೇಶದ ಜನರು ನಗರ ಪ್ರದೇಶಕ್ಕೆ ಉದ್ಯೋಗಕ್ಕಾಗಿ ವಲಸೆ ಹೋಗುತ್ತಿದ್ದಾರೆ. ಇದರ ಪರಿಣಾಮವಾಗಿ ನಗರಗಳು ತೀವ್ರವಾಗಿ ಬೆಳೆದು ಅನೇಕ ಸಮಸ್ಯೆಗಳ ತಾಣವಾಗುತ್ತಿವೆ. ಆದ್ದರಿಂದ ಪ್ರಸ್ತುತ ಅಧ್ಯಯನವು ಸಮಕಾಲೀನ ಸಮಸ್ಯೆಗಳ ಮೇಲೆ ಬೆಳಕನ್ನು ಚೆಲ್ಲುತ್ತದೆ.

**11. ಸಮಾಜ ಅಥವಾ ರಾಷ್ಟ್ರಕ್ಕೆ ಪ್ರಸ್ತುತ ಅಧ್ಯಯನದ ಅವಶ್ಯಕತೆ (Relevance to the needs of society/country)**

ಪ್ರಸ್ತುತ ಅಧ್ಯಯನವು ಸಮಾಜಕ್ಕೆ ಅವಶ್ಯಕವಾಗಿದೆ. ಏಕೆಂದರೆ ಲಂಬಾಣಿಗಳಂತಹ ಬುಡಕಟ್ಟಿನ ಸಮುದಾಯದ ಜನರು ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದು, ತಮ್ಮ ಮೂಲ ಉದ್ಯೋಗ ಕಳೆದುಕೊಂಡು

ಉದ್ಯೋಗಕ್ಕಾಗಿ ನಗರ ಪ್ರದೇಶಗಳಿಗೆ ವಲಸೆ ಹೋಗಿ ಅಲ್ಲಿಯ ಸಂಸ್ಕೃತಿಗೆ ಪ್ರಭಾವಿತರಾಗಿ ಬದಲಾವಣೆಗೊಳ್ಳುತ್ತಿದ್ದಾರೆ. ಆದ್ದರಿಂದ ಪ್ರಸ್ತುತ ಅಧ್ಯಯನದ ಸಹಾಯದಿಂದ ವಲಸೆಗೆ ಕಾರಣವಾದ ಅಂಶಗಳನ್ನು ಕಂಡು ಹಿಡಿದು ಲಂಬಾಣಿಗರ ವಲಸೆ ತಡೆಗಟ್ಟಲು, ಅವರ ಸಂಸ್ಕೃತಿ ರಕ್ಷಿಸಲು ನೆರವಾಗುತ್ತದೆ. ಸಂಸ್ಕೃತಿಗೆ ಹೆಚ್ಚಿನ ಪ್ರಾಧಾನ್ಯತೆ ನೀಡಿರುವ ಭಾರತಕ್ಕೆ ಇಂತಹ ಅಧ್ಯಯನಗಳು ಅಗತ್ಯವಾಗಿವೆ. ಹಾಗೂ ಈ ಅಧ್ಯಯನದ ಮಾಹಿತಿಯು ಸರ್ಕಾರಕ್ಕೆ ಆರ್ಥಿಕ ಅಭಿವೃದ್ಧಿ ಯೋಜನೆಗಳನ್ನು ರೂಪಿಸಲು ಸಹಾಯವಾಗುತ್ತದೆಂದು ಆಶಿಸಲಾಗಿದೆ.

**12. ಜ್ಞಾನ ಶಾಖೆಗೆ ಪ್ರಸ್ತುತ ಅಧ್ಯಯನದ ಕೊಡುಗೆ (Its likely contribution to knowledge)**

ವಲಸೆಯನ್ನು ಕುರಿತು ಅನೇಕ ಸಮಾಜಶಾಸ್ತ್ರಜ್ಞರು ಅಧ್ಯಯನಗಳನ್ನು ಕೈಕೊಂಡು ಮಾಹಿತಿ ನೀಡಿ ಜ್ಞಾನ ಶಾಖೆಗೆ ಕೊಡುಗೆಯನ್ನು ನೀಡಿದ್ದಾರೆ. ಪ್ರಸ್ತುತ ಅಧ್ಯಯನವು ಬುಡಕಟ್ಟು ಸಮಾಜಗಳ ವಲಸೆಯ ಮೇಲೆ ಬೆಳಕನ್ನು ಚೆಲ್ಲುತ್ತದೆ. ಆದ್ದರಿಂದ ಬುಡಕಟ್ಟು ಸಮಾಜಗಳಲ್ಲಿ ನಡೆಯುವ ವಲಸೆಯ ಪ್ರಕ್ರಿಯೆ ಕುರಿತು ತಿಳಿದುಕೊಳ್ಳಲು ಈ ಅಧ್ಯಯನ ಸಹಾಯವಾಗುತ್ತದೆ.

**13. ಅಧ್ಯಯನದ ಅಧ್ಯಾಯಗಳು (Contents/ Chapters)**

"ಲಂಬಾಣಿಗರ ಗೋವಾ ವಲಸೆ ಒಂದು ಸಮಾಜ ಶಾಸ್ತ್ರೀಯ ಅಧ್ಯಯನ" ಕುರಿತು ಸಿದ್ಧಪಡಿಸಿರುವ ಈ ಸಂಶೋಧನಾ ಮಹಾಪ್ರಬಂಧವನ್ನು ಅಧ್ಯಯನದ ಅನುಕೂಲಕ್ಕಾಗಿ ಬೇರೆ ಬೇರೆ ಅಧ್ಯಾಯಗಳಲ್ಲಿ ವಿಂಗಡಿಸಲಾಗಿದೆ.

1. ಒಂದನೆಯ ಅಧ್ಯಾಯದಲ್ಲಿ ಬಿಜಾಪುರ ಜಿಲ್ಲೆಯ ಲಂಬಾಣಿಗರ ಐತಿಹಾಸಿಕ ಹಿನ್ನೆಲೆ, ಅಧ್ಯಯನದ ಉದ್ದೇಶಗಳು, ವ್ಯಾಪ್ತಿ, ವಿಧಾನಗಳ ಬಗ್ಗೆ ಚರ್ಚಿಸಲಾಗಿದೆ. ಇವರಲ್ಲಿ ಪ್ರಚಲಿತವಿರುವ ವಿವಾಹ, ಧರ್ಮ, ಸಂಸ್ಕೃತಿ, ಭಾಷೆ, ವೇಷಭೂಷಣ ಮಂತಾದವುಗಳ್ನು ವಿವರಿಸಿ ಚರ್ಚಿಸಲಾಗಿದೆ. ಲಂಬಾಣಿ ಸಮುದಾಯ ಕುರಿತು ಈವರೆಗೆ ನಡೆದ ಅಧ್ಯಯನಗಳು, ಅಧ್ಯಯನದ ವಿಧಾನ ಮತ್ತು ವ್ಯಾಪ್ತಿಯನ್ನೂ ವಿವರಿಸಲಾಗಿದೆ.

2. ಎರಡನೆಯ ಅಧ್ಯಾಯದಲ್ಲಿ ವಿಜಾಪುರ ಜಿಲ್ಲೆಯಲ್ಲಿ ಬರುವ ಲಂಬಾಣಿ ತಾಂಡಾಗಳ ಸಾಮಾಜಿಕ ಮತ್ತು ಆರ್ಥಿಕ ಹಿನ್ನೆಲೆಯನ್ನು ವಿವರಿಸಲಾಗಿದೆ.

3. ಮೂರನೆಯ ಅಧ್ಯಾಯದಲ್ಲಿ "ವಲಸೆ" ಸಮಾಜ ಶಾಸ್ತ್ರೀಯ ದೃಷ್ಟಿಕೋನ-ವಲಸೆಯ ಅರ್ಥ, ವ್ಯಾಖ್ಯೆಗಳು, ಪ್ರಕಾರಗಳು, ವಲಸೆಗೆ ಕಾರಣವಾದ ಅಂಶಗಳು, ವಲಸೆ ಕುರಿತು ಅಧ್ಯಯನ ಕೈಕೊಂಡ ಸಮಾಜ ಶಾಸ್ತ್ರಜ್ಞರ ವಿಚಾರಗಳನ್ನು ವಿವರಿಸಲಾಗಿದೆ.

4. ನಾಲ್ಕನೆಯ ಅಧ್ಯಾಯದಲ್ಲಿ ವಿಜಾಪುರ ಜಿಲ್ಲೆಯ ಆರ್ಥಿಕ ಹಿನ್ನೆಲೆ ನರಸಲಗಿ ತಾಂಡಾದ ಜನರು ವಲಸೆ ಹೋಗಲು ಕಾರಣವಾದ ನಿರುದ್ಯೋಗ, ಕಡಿಮೆ ಕೂಲಿ ಮುಂತಾದ ತಳ್ಳುವ ಅಂಶಗಳನ್ನು ವಿವರಿಸಲಾಗಿದೆ.

5. ಐದನೆಯ ಅಧ್ಯಾಯದಲ್ಲಿ ಗೋವಾದಲ್ಲಿ ಲಂಬಾಣಿಗರನ್ನು ಸೆಳೆಯುವ ಶಕ್ತಿಗಳಾದ ಉದ್ಯೋಗಗಳು, ಹೆಚ್ಚಿನ ಕೂಲಿದರ, ಮನೋರಂಜನೆ ಇತ್ಯಾದಿ ಹಾಗೂ ವಲಸೆಯಿಂದ ಲಂಬಾಣಿ ಸಮುದಾಯದ ಮೇಲೆ ಹಾಗೂ ಗೋವಾ ಸಮುದಾಯದ ಮೇಲೆ ಆದ ಪರಿಣಾಮಗಳನ್ನು ವಿವರಿಸಲಾಗಿದೆ.

6. ಆರನೆಯ ಅಧ್ಯಾಯದಲ್ಲಿ ಗೋವಾಕ್ಕೆ ವಲಸೆ ಹೋದ ಲಂಬಾಣಿಗರ ಗೋವಾದಲ್ಲಿಯ ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ಜೀವನವನ್ನು ವಿವರಿಸಲಾಗಿದೆ.

7. ಏಳನೆಯ ಅಧ್ಯಾಯದಲ್ಲಿ ವಲಸೆಯಿಂದ ಲಂಬಾಣಿ ಸಮುದಾಯದ ಮೇಲೆ ಆದ ಪರಿಣಾಮ ಮತ್ತು ಸಂಶೋಧನೆಯಿಂದ ಕಂಡುಕೊಂಡ ಸತ್ಯಸಂಗತಿಗಳನ್ನು ವಿವರಿಸಲಾಗಿದೆ.

ಕೊನೆಯದಾಗಿ ಅಧ್ಯಯನಕ್ಕೆ ಆಧಾರ ಒದಗಿಸುವ ಗ್ರಂಥಗಳು ಮತ್ತು ಲೇಖನಗಳು, ಛಾಯಚಿತ್ರಗಳ ವಿವರಗಳನ್ನು ಕೊಡಲಾಗಿದೆ.

**ಲಂಬಾಣಿಗರ ಸಾಮಾಜಿಕ ಸಂಸ್ಥೆಗಳು ಮತ್ತು ಪದ್ಧತಿಗಳು :**

**ಕುಟುಂಬ ಮತ್ತು ವಿವಾಹ :**

ಹಿಂದುಗಳಲ್ಲಿ ಪ್ರಚಲಿತವಿರುವಂತೆ ಲಂಬಾಣಿಗರಲ್ಲಿ ಅವಿಭಕ್ತ ಕುಟುಂಬಗಳು ಕಂಡು ಬರುತ್ತವೆ. ತಂದೆ, ಅಥವಾ ಪುರುಷ ವ್ಯಕ್ತಿ ಯಜಮಾನನಾಗಿದ್ದು ಕುಟುಂಬದ ಎಲ್ಲಾ ವ್ಯವಹಾರಗಳನ್ನು ನೋಡಿಕೊಂಡು ಹೋಗುತ್ತಾನೆ. ತಂದೆ ಮರಣ ಹೊಂದಿದ ನಂತರ ಅವನ ಹಿರಿಯ ಮಗ ಕುಟುಂಬದ ಯಜಮಾನನಾಗುತ್ತಾನೆ. ಲಂಬಾಣಿಗರು ತಮ್ಮ ಕುಟುಂಬದ ಘನತೆ ಗೌರವಗಳಿಗೆ ಧಕ್ಕೆಯಾಗದಂತೆ ನೋಡಿಕೊಳ್ಳುತ್ತಾರೆ. ಕುಟುಂಬ ಮುನ್ನಡೆಸಲು ಎಲ್ಲಾ ಸದಸ್ಯರು ಕಷ್ಟಪಟ್ಟು ದುಡಿಯುತ್ತಾರೆ. ಆಸ್ತಿಯ ಮೇಲೆ ಎಲ್ಲಾ ಸದಸ್ಯರಿಗೆ ಸಮಾನ ಹಕ್ಕು ಇರುತ್ತದೆ. ಪೂಜಾಕಾರ್ಯಗಳಲ್ಲಿ ಎಲ್ಲರೂ ಸಮಾನವಾಗಿ ಪಾಲ್ಗೊಂಡು ಕುಲದೇವತೆಯನ್ನು ಆರಾಧಿಸುತ್ತಾರೆ. ಕುಟುಂಬದಲ್ಲಿ ಸ್ತ್ರೀಯರಿಗೆ ಪುರುಷನ ಸರಿಸಮಾನವಾದ ಸ್ಥಾನಮಾನ ನೀಡಲಾಗಿದ್ದು, ಸ್ತ್ರೀಯರು ಮುಕ್ತವಾಗಿ ಧಾರ್ಮಿಕ ಕಾರ್ಯಗಳಲ್ಲಿ ಪಾಲ್ಗೊಳ್ಳುವರು ಸ್ವತಂತ್ರವಾಗಿ ನಗರ ಪ್ರದೇಶಕ್ಕೆ ಹೋಗಿ ಕಟ್ಟಿಗೆ, ನೆಲ್ಲಿಕಾಯಿ, ಕವಳೆಕಾಯಿ ಮುಂತಾದ ಅರಣ್ಯ ಪದಾರ್ಥಗಳನ್ನು ಮಾರಿ ಕುಟುಂಬದ ಆರ್ಥಿಕತೆಯನ್ನು ಬಲಪಡಿಸುತ್ತಾರೆ. ಇವರಲ್ಲಿ ಏಕಪತ್ನಿತ್ವ ವಿವಾಹ ಪದ್ಧತಿ ಕಂಡುಬರುತ್ತದೆ. ಇತ್ತೀಚೆಗೆ ಶಿಕ್ಷಣ, ಆಧುನೀಕರಣ, ಔದ್ಯೋಗೀಕರಣಗಳ ಪ್ರಭಾವದಿಂದ ಅವಿಭಕ್ತ ಕುಟುಂಬಗಳು, ವಿಭಕ್ತ ಕುಟುಂಬಗಳಾಗಿ ಪರಿವರ್ತನೆಗೊಳ್ಳುತ್ತಲಿವೆ. ಲಂಬಾಣಿಗರು ಉದ್ಯೋಗಕ್ಕಾಗಿ ನಗರಗಳಿಗೆ ವಲಸೆ ಹೋಗುತ್ತಿದ್ದರೂ, ತಮ್ಮ ಮೂಲ ಕುಟುಂಬಗಳಿಗೆ ಆರ್ಥಿಕವಾಗಿ ಸಹಾಯ ಮಾಡುತ್ತಾರೆ. ಹಬ್ಬ, ವಿವಾಹ, ಆಚರಣೆಗಳ ಸಂದರ್ಭದಲ್ಲಿ ತಮ್ಮ ತಾಂಡಾಗಳಿಗೆ ಭೇಟಿ ಕೊಡುತ್ತಾರೆ.

**ವಿವಾಹ ಪದ್ಧತಿ :**

ವಿವಾಹವು ಸಾರ್ವತ್ರೀಕವಾದ ಸಾಮಾಜಿಕ ಸಂಸ್ಥೆಯಾಗಿದೆ. ಹಿಂದುಗಳಲ್ಲಿ ವ್ಯಕ್ತಿ ವಿವಾಹವಾಗಿ ಗಂಡು ಮಗು ಪಡೆದರೆ ಮಾತ್ರ ಮುಕ್ತಿಸಿಗುವದೆಂಬ ನಂಬಿಕೆಯಿರುವುದರಿಂದ ವಿವಾಹಕ್ಕೆ ಮಹತ್ವದ ಸ್ಥಾನ ನೀಡಿದ್ದಾರೆ. ವಿವಾಹದ ಮೂಲಕ ವ್ಯಕ್ತಿಗೆ ಲೈಂಗಿಕತೆಯನ್ನು ಈಡೇರಿಸಿಕೊಳ್ಳಲು, ಪುರುಷಾರ್ಥಗಳನ್ನು

ಸಾಧಿಸಲು ಸಾಧ್ಯವಿದೆ ಎಂಬ ನಂಬಿಕೆಯಿರುವುದರಿಂದ ವಿವಾಹ ಪವಿತ್ರ ಬಂಧನವಾಗಿದೆ. ಲಂಬಾಣಿಗರಲ್ಲಿ ವಿವಾಹಕ್ಕೆ ಸಂಬಂಧಿಸಿದಂತೆ ಅವರದೇ ಆದ ಆಚರಣೆಗಳು, ರೂಢಿ, ಸಂಪ್ರದಾಯಗಳು ಇರುವುದು ಕಂಡುಬರುತ್ತವೆ. ಇವರಲ್ಲಿ ವಿವಾಹ ಕಡ್ಡಾಯವಾಗಿದೆ. ವಿವಾಹವಾಗದಿರುವವರನ್ನು ಹೀಯಾಳಿಸುತ್ತಾರೆ. ಲಂಬಾಣಿಗರಲ್ಲಿ ಒಳಪಂಗಡ ವಿವಾಹ ಪದ್ಧತಿ ಇದ್ದು, ಹೊರಪಂಗಡ ವಿವಾಹಗಳು ಕಂಡುಬರುವುದಿಲ್ಲ. ಇವರ ವೈವಾಹಿಕ ಸಂಬಂಧಗಳು ರಾಠೋಡ, ಪಮ್ಮಾರ, ಚವ್ಹಾಣ್, ವಡತ್ಯಾ ಎಂಬ ನಾಲ್ಕು ಪಂಗಡಗಳಲ್ಲಿ ನಡೆಯುತ್ತವೆ. ಈ ಪಂಗಡಗಳಲ್ಲಿ ಮತ್ತೆ ಉಪಪಂಗಡಗಳಿದ್ದು, ಉಪಪಂಗಡದಲ್ಲಿರುವವರೆಲ್ಲರೂ ಸಹೋದರರೆಂದು ತಿಳಿಯುತ್ತಾರೆ. ಇವರಲ್ಲಿ ಸ್ವಗೋತ್ರ ವೈವಾಹಿಕ ಸಂಬಂಧಗಳನ್ನು ನಿಶೇಧಿಸಲಾಗಿದೆ. ರಾಠೋಡ ಪಂಗಡಗಳನ್ನು 'ಭೂಕಿಯಾ' ಎಂದೂ 'ಚವ್ಹಾಣ' ಹಾಗೂ 'ಪಮ್ಮಾರ' ಪಂಗಡಗಳನ್ನು 'ಜಾತ' ಎಂದು ವಿಂಗಡಿಸಲಾಗಿದೆ ವಡತಿಯಾ ಪಂಗಡವನ್ನು ಜಾತ ಪಂಗಡದೊಂದಿಗೆ ಸೇರಿಸಲಾಗಿದೆ. ಚವ್ಹಾಣ ಮತ್ತು ಪಮ್ಮಾರ ಪಂಗಡದವರು ರಾಠೋಡ ಪಂಗಡದವರೊಂದಿಗೆ ವೈವಾಹಿಕ ಸಂಬಂಧಗಳನ್ನು ಬೆಳೆಸಬಹುದು. ಒಟ್ಟಿನಲ್ಲಿ 'ಜಾತ' ಪಂಗಡದವರು 'ಭೂಕಿಯಾ' ಪಂಗಡಗಳ ಜೊತೆಗೆ ವೈವಾಹಿಕ ಸಂಬಂಧಗಳನ್ನು ಹೊಂದಲು ಅವಕಾಶವಿದೆ. 'ಒಬ್ಬ ವ್ಯಕ್ತಿ ಇಬ್ಬರು ಅಕ್ಕತಂಗಿಯರನ್ನು ವಿವಾಹವಾಗಲು ಅವಕಾಶವಿದೆ. ಆದರೆ ಒಬ್ಬ ಸ್ತ್ರೀ ಇಬ್ಬರು ಅಣ್ಣತಮ್ಮಂದಿರರನ್ನು ವಿವಾಹವಾಗಲು ಬರುವುದಿಲ್ಲ. ಇಬ್ಬರು ಅಣ್ಣತಮ್ಮಂದಿರು ಇಬ್ಬರು ಅಕ್ಕತಂಗಿಯರನ್ನು ವಿವಾಹವಾಗಬುಹುದು. ಹಾಗೂ ಪರಸ್ಪರ ವೈವಾಹಿಕ ಸಂಬಂಧಗಳನ್ನೂ ಬೆಳೆಸಲು ಅವಕಾಶವಿದೆ.'[24]

**ವಧು ದಕ್ಷಿಣೆ :** ವಿವಾಹದ ಸಂದರ್ಭದಲ್ಲಿ ವಧುದಕ್ಷಿಣೆ ಕೊಡುವುದು ಪ್ರಾಚೀನ ಕಾಲದಿಂದಲೂ ಹಿಂದೂ ಸಮಾಜದಲ್ಲಿ ರೂಢಿಯಲ್ಲಿದ್ದು, ಸಾಂಪ್ರದಾಯಿಕ ಹಿಂದೂ ವಿವಾಹ ಪ್ರಕಾರಗಳಲ್ಲಿ ಒಂದಾದ 'ಅಸುರ' ವಿವಾಹ ಪದ್ಧತಿಯಲ್ಲಿ ಕನ್ಯಾ ಪಿತೃವಿಗೆ ವಧು ದಕ್ಷಿಣೆಯನ್ನು ಹೆಣ್ಣಿನ ಅಧಿಕಾರಕೊಂಡುಕೊಳ್ಳಲು, ಅವಳಿಂದ ಮಕ್ಕಳನ್ನು ಪಡೆಯಲು, ತಂದೆ, ಮಗಳನ್ನು ಸಾಕಿ-ಬೆಳೆಸಿದ ಖರ್ಚನ್ನು ತುಂಬಲು ಮುಂತಾದ ಕಾರಣಗಳಿಗಾಗಿ ಕೊಡಲಾಗುತ್ತಿತ್ತು. ಅದೇ ರೀತಿ ಲಂಬಾಣಿಗರಲ್ಲಿಯೂ, ವಧುದಕ್ಷಿಣೆ ಪದ್ಧತಿ ರೂಢಿಯಲ್ಲಿದ್ದು, ಇದನ್ನು 'ಕರಾರ್' ಎಂದು ಕರೆಯುತ್ತಾರೆ. ವಧುದಕ್ಷಿಣೆಯನ್ನು ಹಣದ ರೂಪದಲ್ಲಿ ಕೊಟ್ಟರೆ 'ವಾಂಸಳೀಕರಾರ್' ಹಾಗೂ ಆಕಳುಗಳನ್ನು ಕೊಟ್ಟರೆ 'ರಾಂಸಡೀಕರಾರ್' ಎಂದೂ ಕರೆಯುತ್ತಾರೆ. ಇಂದು ವಧುದಕ್ಷಿಣೆ ಕೇವಲ ಹಣದ ರೂಪದಲ್ಲಿ ಕೊಡುವುದು ಕಂಡುಬರುತ್ತದೆ. ಲಂಬಾಣಿಗರಲ್ಲಿ 'ಕರಾರ್' ಕೊಟ್ಟರೆ ವೈವಾಹಿಕ ಸಂಬಂಧಗಳು ಏರ್ಪಟ್ಟ ಹಾಗೆ. ಇವರು ಸ್ತ್ರೀಯರ ಮೇಲೆ ಅಧಿಕಾರ ಹೊಂದಲು ವಧು ದಕ್ಷಿಣೆ ಕೊಡುತ್ತಾರೆ. 'ಜಾತ' ಪಂಗಡದ ಹೆಣ್ಣಿಗೆ ಹೆಚ್ಚು, 'ಭೂಕಿಯಾ' ಪಂಗಡದ ಹೆಣ್ಣಿಗೆ ಕಡಿಮೆ ವಧು ದಕ್ಷಿಣೆ ಕೊಡುತ್ತಾರೆ. 'ಜಾತ' ಪಂಗಡದಲ್ಲಿ ಹೆಣ್ಣಿನ ಸಂಖ್ಯೆ ಕಡಿಮೆಯಿರುವುದೇ ಇದಕ್ಕೆ ಕಾರಣವಾಗಿದೆ. ಹಿಂದೂ ಸಮಾಜದಲ್ಲಿ ಬಹುಪತ್ನಿತ್ವ ವಿಧವಾವಿವಾಹಕ್ಕೆ ಅವಕಾಶ ನೀಡಿಲ್ಲ ಕೆಲವು ಅನಿವಾರ್ಯ ಸಂದರ್ಭಗಳಲ್ಲಿ ಮಾತ್ರ ವ್ಯಕ್ತಿ ಒಬ್ಬರಿಗಿಂತ ಹೆಚ್ಚು ಜನ ಸ್ತ್ರೀಯರನ್ನು ವಿವಾಹವಾಗಬಹುದು ಲಂಬಾಣಿಗರಲ್ಲಿ ವಿಧವಾಪುನರ್ ವಿವಾಹಕ್ಕೆ ಅವಕಾಶವಿದೆ ಹಾಗೂ ಬಹು ಪತ್ನಿತ್ವ, ಅತ್ತಿಗೆ-ಮೈದುನ ವಿವಾಹಗಳು ರೂಢಿಯಲ್ಲಿವೆ.

---

24. Nanjundayya and Ananthayyar: (1928) 'The Mysore Tribes and Castes', Bangalore, Mysore Govt. Press, P-154.

**ವಿಧವಾಪುನರ್ ವಿವಾಹ :**

ಲಂಬಾಣಿಗರಲ್ಲಿ ವಿಧಾವಾಪುನರ್ ವಿವಾಹಕ್ಕೆ ಅವಕಾಶವಿದೆ. ಗಂಡಸತ್ತರೆ, ವಿವಾಹ ವಿಚ್ಛೇದನೆವಾಗಿದ್ದರೆ, ಸ್ತ್ರೀ ತಾನು ಇಷ್ಟಪಡುವ ವ್ಯಕ್ತಿಯೊಂದಿಗೆ ಪುನರ್ ವಿವಾಹವಾಗಬಹುದು. ಇಂತಹ ವಿವಾಹಗಳು ಸಾಮಾನ್ಯವಾಗಿ ವಿಧವೆ ಮತ್ತು ವಿಧರುವ ಮಧ್ಯದಲ್ಲಿ ನಡೆಯುತ್ತವೆ. ವಿಧವೆ ಅವಿವಾಹಿತ ಪುರುಷನೊಂದಿಗೆ ಪುನರ್ ವಿವಾಹವಾಗಲು ಅವಕಾಶವಿಲ್ಲ ಆದರೆ ವಿಧುರ ಕನ್ಯೆಯನ್ನು ವಿವಾಹವಾಗಬಹುದು. ಅವಿವಾಹಿತ ಯುವಕ ವಿಧವೆಯನ್ನು ವಿವಾಹವಾಗಬಹುದು. ಆದರೆ ಅವರು ಸಮುದಾಯದ ಜನರಿಂದ ಅಪಹಾಸ್ಯಕ್ಕೆ ಒಳಗಾಗುತ್ತಾರೆ.

**ಅತ್ತಿಗೆ-ಮೈದುನರ ವಿವಾಹ :**

ಹಿಂದೂ ಸಾಂಪ್ರದಾಯಿಕ ವಿವಾಹದ ಪ್ರಕಾರಗಳಲ್ಲಿ ಅತ್ತಿಗೆ-ಮೈದುನರ ವಿವಾಹಗಳು ಕಂಡುಬರುವುದಿಲ್ಲ. ಆದರೆ ಲಂಬಾಣಿಗರಲ್ಲಿ ಅತ್ತಿಗೆ-ಮೈದುನರ ಮಧ್ಯೆ ವಿವಾಹಗಳು ನಡೆಯುತ್ತವೆ. ಈ ವಿವಾಹಪದ್ಧತಿ ಹೇಗೆ ಬೆಳೆದು ಬಂದಿತು ಎಂದು ಹೇಳುವುದು ಪ್ರಯಾಸದ ಕೆಲಸವಾಗಿದೆ. ಕುಟುಂಬದಲ್ಲಿ ಹಿರಿಯ ಸಹೋದರ ಮರಣ ಹೊಂದಿದರೆ, ಅವನ ಪತ್ನಿ ಬೇರೆಯವರೊಡನೆ, ಅನೈತಿಕ ಲೈಂಗಿಕ ಸಂಬಂಧ ಹೊಂದಬಾರದೆಂದು, ಹಾಗೂ ವಿಧವೆಯಾಗಿ ಕಷ್ಟಕ್ಕೀಡಾಗಬಾರದೆಂದು ಅವಳ ಮಕ್ಕಳಿಗೆ ರಕ್ಷಣೆ ದೊರೆಯದೆ ಬೀದಿಪಾಲಾಗಬಾರದೆಂದು, ಹಾಗೂ ಮನೆತನದ ಗೌರವ ಕಾಪಾಡಿಕೊಳ್ಳುವ ಉದ್ದೇಶದಿಂದ ಅತ್ತಿಗೆ-ಮೈದುನರ ವಿವಾಹ ಮಾಡುತ್ತಾರೆ. ಆದರೆ ಕುಟುಂಬದಲ್ಲಿ ತಮ್ಮ ಮರಣ ಹೊಂದಿದರೆ ಅಣ್ಣನಾದವನು ತಮ್ಮನ ಹೆಂಡತಿಯನ್ನು ವಿವಾಹವಾಗಲು ಬರುವುದಿಲ್ಲ. ಅತ್ತಿಗೆ-ಮೈದುನರ ವಿವಾಹಗಳು ಒತ್ತಾಯಪೂರ್ವಕವಾಗಿ ನಡೆಯುವುದಿಲ್ಲ. ಪರಸ್ಪರ ಒಪ್ಪಿಗೆಯಿಂದ ನಡೆಯುತ್ತವೆ. ಒಂದು ವೇಳೆ ಮೈದುನನಿಗೆ ಮೊದಲೆ ವಿವಾಹವಾಗಿದ್ದರೆ, ಕುಟುಂಬದ ಸದಸ್ಯರು ಅನುಮತಿ ನೀಡಿದರೆ ವಿಧವೆ ಕೂಡಾ ಇಷ್ಟಪಟ್ಟರೆ ಬೇರೆ ಪುರುಷನೊಂದಿಗೆ ವಿವಾಹ ಮಾಡಿಕೊಳ್ಳಬಹುದು ಹಾಗೆ ಮಾಡಿದರೆ ಸ್ತ್ರೀಗೆ ಮೊದಲಿನ ಗಂಡನ ಆಸ್ತಿಯಲ್ಲಿ ಭಾಗಕೊಡುವುದಿಲ್ಲ ಹಾಗೂ ತನ್ನ ಮಕ್ಕಳನ್ನು ಬಿಟ್ಟುಹೋಗಬೇಕಾಗುತ್ತದೆ. ವಿಧವೆ ವಿವಾಹವಾಗಲು ಬಯಸದಿದ್ದರೆ ತನ್ನ ಗಂಡನ ಆಸ್ತಿಯನ್ನು ಅನಭೋಗಿಸುತ್ತಾ ವಿಧವೆಯಾಗಿ ಜೀವನ ಸಾಗಿಸಲು ಅವಕಾಶ ನೀಡಲಾಗುತ್ತದೆ.

**ವಿವಾಹ ವಿಚ್ಛೇಧನೆ (Divorce)**

ಹಿಂದೂ ವಿವಾಹದಲ್ಲಿ ವಿವಾಹ ವಿಚ್ಛೇಧನೆಗೆ ಅವಕಾಶವಿಲ್ಲ ಕೆಲವು ಅನಿವಾರ್ಯ ಪರಿಸ್ಥಿತಿಯಲ್ಲಿ ಮಾತ್ರ ವಿಚ್ಛೇಧನೆ ಮಾಡಬಹುದು. ಲಂಬಾಣಿಗರಲ್ಲಿ ವಿವಾಹ ವಿಚ್ಛೇಧನಕ್ಕೆ ಅವಕಾಶವಿಲ್ಲ ಕೆಲವೊಂದು ಸಂದರ್ಭಗಳಲ್ಲಿ ಅನಿವಾರ್ಯ ಕಾರಣಗಳಿಂದ ಬದುಕು ಅಸಾಧ್ಯವೆನಿಸದಾಗ ಮಾತ್ರ ಸ್ತ್ರೀ-ಪುರುಷರು ವಿವಾಹ ವಿಚ್ಛೇಧನೆ ಪಡೆಯಬಹುದು. ಹಾಗೂ ವಿಚ್ಛೇದಿತರು ತಮಗೆ ಇಷ್ಟವಾದವರೊಡನೆ ಪುನರ್ ವಿವಾಹವಾಗಬಹುದು. ಇದನ್ನು ಅವರು 'ಕೂಡಾವಳಿ' ವಿವಾಹ ಎಂದು ಕರೆಯುತ್ತಾರೆ. ಸಾಮಾನ್ಯವಾಗಿ ಕೂಡಾವಳಿ ವಿವಾಹಗಳು ವಿಚ್ಛೇದಿತ ಸ್ತ್ರೀ, ಮತ್ತು ವಿಧುರನ ಮಧ್ಯೆ, ವಿಚ್ಛೇದಿತ ಸ್ತ್ರೀ ಪುರುಷರ ಮಧ್ಯೆ ನಡೆಯುತ್ತವೆ.

ಪುನರ್‌ವಿವಾಹವಾಗುವ ವಿಚ್ಛೇದಿತ ಸ್ತ್ರೀಗೆ ಮೊದಲಿನ ಗಂಡನಿಗೆ ಹುಟ್ಟಿದ ಮಕ್ಕಳು ಇದ್ದರೆ ತನ್ನೊಂದಿಗೆ ಕರೆದುಕೊಂಡು ಹೋಗುಲು ಅವಕಾಶವಿಲ್ಲ ಗಂಡು ಮಾತ್ರ ತನ್ನ ಮೊದಲಿನ ಹೆಂಡತಿಗೆ ಹುಟ್ಟಿದ ಮಕ್ಕಳನ್ನು ತನ್ನೊಂದಿಗೆ ಇಟ್ಟುಕೊಳ್ಳಲು ಅವಕಾಶ ನೀಡಲಾಗಿದೆ.

ವಿಧವಾ ವಿವಾಹ ಹಾಗೂ ವಿಚ್ಛೇದಿತ ವಿವಾಹಗಳು ತಾಂಡಾದ ನಾಯಕ ಮತ್ತು ಕಾರಭಾರಿ (ಕಾರ್ಯದರ್ಶಿ) ಹಾಗೂ ಹಿರಿಯರ ಸಮ್ಮುಖದಲ್ಲಿ ಸರಳವಾಗಿ ನಡೆಯುತ್ತವೆ. ವಿಧುರ ವಿಧವೆಯನ್ನು ವಿವಾಹವಾಗಲು ನಿರ್ಧರಿಸಿದರೆ ಮಾಂಗಲ್ಯ ಸೂಚಕಗಳಾದ ಚೂಡಿ, ಘುಗರಿ, ಹಾಗೂ ಕಾಂಚಳಿ (ದಂತದ ಬಳೆಗಳು, ಲಂಘ ಮತ್ತು ಕುಪ್ಪಸ) ಮೊದಲಾದ ಉಡುಗೆ ತೊಡಿಗೆಗಳನ್ನು ಕೊಡಬೇಕಾಗುತ್ತದೆ. ವಿವಾಹ ವಿಚ್ಛೇದಿತ ಸ್ತ್ರೀಯಾದರೆ ಈಗಾಗಲೆ ಮೊದಲಿನ ಗಂಡ ನೀಡಿದ ಉಡಿಗೆ ತೊಡಿಗೆಗಳು ಅವಳ ಮೈಮೇಲೆ ಇರುವುದರಿಂದ ಅವುಗಳನ್ನು ಕೊಡುವುದು ಅಗತ್ಯವಿಲ್ಲ ಆದರೆ ಅವಳ ಮೊದಲಿನ ಗಂಡನಿಗೆ 125 ರೂಪಾಯಿ, ಪರಿಹಾರ ಹಾಗೂ ಪಂಚಾಯ್ತಿ ಖರ್ಚು ಕಡ್ಡಾಯವಾಗಿ ಕೊಡಬೇಕಾಗುತ್ತದೆ. ವ್ಯಭಿಚಾರದ ಕಾರಣಗಳಿಂದ ಗಂಡ-ಹೆಂಡತಿ ವಿಚ್ಛೇಧನೆ ಪಡೆಯಬಹುದು. ಇಂತಹ ಸಂದರ್ಭಗಳಲ್ಲಿ ವ್ಯಭಿಚಾರದಲ್ಲಿ ತೊಡಗಿ ವಿಚ್ಛೇಧನೆಗೊಳಿಸಿ ಸ್ತ್ರೀಯನ್ನು ವಿವಾಹವಾಗುವ ಪುರುಷ, ಅವಳ ಗಂಡಕೊಟ್ಟಿರುವ ವಧುದಕ್ಷಿಣೆ ಮರಳಿ ಕೊಡಬೇಕಾಗುತ್ತದೆ ಹಾಗೂ ಜಾತಿ ಪಂಚಾಯ್ತಿ ನಿಗದಿ ಪಡಿಸಿದ ಖರ್ಚನ್ನು ಕೊಡಬೇಕಾಗುತ್ತದೆ.

**ವಿವಾಹದ ಪದ್ಧತಿಗಳು ಮತ್ತು ಕ್ರೀಯಾವಿಧಿಗಳು :**

ಲಂಬಾಣಿಗರು ವರ್ಷವಿಡೀ ದನಕರುಗಳ ಮೇಲೆ ದವಸಧಾನ್ಯಗಳವ್ಯಾಪಾರ ಮಾಡುತ್ತ ಅಲೆದಾಡುತ್ತಿದ್ದರು, ಒಮ್ಮೆ ಪರಸ್ಪರ ಭೇಟಿಯಾದ ಲಂಬಾಣಿ ಜನರ ಗುಂಪುಗಳು ಮತ್ತೊಮ್ಮೆ ಭೇಟಿಯಾಗುವುದು ಅಸಂಭವವಾಗಿತ್ತು. ಈ ಕಾರಣಕ್ಕಾಗಿ ಲಂಬಾಣಿ ಸ್ತ್ರೀಯರು ವಿವಾಹದ ಸಂದರ್ಭದಲ್ಲಿ, ಅಳುವ ಸಂಪ್ರದಾಯ ರೂಢಿಸಿಕೊಂಡಿದ್ದಾರೆ. ಸದಾ ವ್ಯಾಪಾರದಲ್ಲಿ ನಿರತರಾಗುತ್ತಿದ್ದ ಲಂಬಾಣಿಗರು ಮಳೆಗಾಲದಲ್ಲಿ ಬಿಡುವು ಮಾಡಿಕೊಂಡು ತಮ್ಮ ಮಕ್ಕಳ ವಿವಾಹ, ಧಾರ್ಮಿಕ ಆಚರಣೆಗಳನ್ನು ಆಚರಿಸಿಕೊಳ್ಳುತ್ತಿದ್ದರು. ಆದರೆ ಇಂದು ಶಾಶ್ವತವಾಗಿ ನೆಲೆಸಿರುವ ಇವರು ಶಾಸ್ತ್ರೋಕ್ತವಾಗಿ ವೈವಾಹಿಕ ಆಚರಣೆಗಳನ್ನು ಆಚರಿಸುವದು ಕಂಡುಬರುತ್ತದೆ.

**ವಧುವಿನ ಆಯ್ಕೆ :**

ಲಂಬಾಣಿಗರಲ್ಲಿ ತಮ್ಮ ಮಕ್ಕಳ ವೈವಾಹಿಹ ನಿರ್ಧಾರಗಳನ್ನು ತಂದೆ, ತಾಯಿಗಳು ತೆಗೆದುಕೊಳ್ಳುತ್ತಾರೆ. ಮೊದಲಿನ ಕಾಲದಲ್ಲಿ ಕನ್ಯೆಯನ್ನು ಹುಡುಕುವುದು ಬಹಳ ಕಷ್ಟದ ಕೆಲಸವಾಗಿತ್ತು ಏಕೆಂದರೆ ಲಂಬಾಣಿಗರು ತಮ್ಮ ಜೀವನೋಪಾಯಕ್ಕಾಗಿ ವ್ಯಾಪಾರ ಮಾಡುತ್ತ ಗುಂಪು ಗುಂಪುಗಳಲ್ಲಿ ಚದುರಿಹೋಗುತ್ತಿದ್ದರು ಇಂತಹ ಸಂದರ್ಭದಲ್ಲಿ ಲಂಬಾಣಿಗರ ವೃತ್ತಿಗಾಯಕ 'ಧಾಡಿ'ಗಳು ಲಂಬಾಣಿ ಭಜನೆಯ ಗೀತೆಗಳನ್ನು ಹಾಡುತ್ತ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಅಲೆದಾಡುತ್ತಿದ್ದರು. ಅವರು ವೈವಾಹಿಕ ಸಂಬಂಧಗಳನ್ನು ಬೆಸೆಯುತ್ತಿದ್ದರು. ಇಂದು ಈ ಕಾರ್ಯವನ್ನು ಹಿರಿಯರು ನೆರವೇರಿಸುತ್ತಿದ್ದಾರೆ. ಕನ್ಯೆಯನ್ನು ನೋಡಲು ಗಂಡಿನ ತಂದೆ-ತಾಯಿಗಳು ಮತ್ತು ತಾಂಡಾದ ನಾಲ್ಕೈದು ಜನ ಹಿರಿಯರು ಕೂಡಿ ಹೋಗುತ್ತಾರೆ. ಕನ್ಯೆ

ಮನಸ್ಸಿಗೆ ಬಂದರೆ ತಾಂಡಾದ ನಾಯಕನಿಗೆ ಒಂದು ರೂಪಾಯಿ ಕೊಡುತ್ತಾರೆ. ಇದನ್ನು 'ಸಾಂಕೆರೋರಪಿಯಾ' ಎನ್ನುತ್ತಾರೆ. ಹೀಗೆ ಮಾಡುವದರಿಂದ ವೈವಾಹಿಕ ಸಂಬಂಧಗಳು ಗಟ್ಟಿಯಾದಂತೆ ಇದನ್ನು ಲಂಬಾಣಿಗರು 'ಕಾನಸಾಮಳಿ' ಎಂದೂ ಕರೆಯುತ್ತಾರೆ.

**ನಿಶ್ಚಯಕಾರ್ಯ (ಸಗಾಯಿಕರೇರೊ) :**

ಗಂಡುಹೆಣ್ಣಿನ ನಿಶ್ಚಯಕಾರ್ಯ ಮಾಡಲು ಗಂಡಿನ ಕಡೆಯಿಂದ ಎಂಟು ಹತ್ತು ಜನರು ಕೂಡಿಕೊಂಡು ಹೆಣ್ಣಿನ ಮನೆಗೆ ಹೋಗುತ್ತಾರೆ. ಹೋಗುವಾಗ ಜೊತೆಯಲ್ಲಿ ನಾಲ್ಕು ಚೀಲಗಳನ್ನು (ಕೊತಳಿ) ತೆಗೆದುಕೊಂಡು ಹೋಗುತ್ತಾರೆ. ಪ್ರತ್ಯೇಕವಾಗಿ ಒಂದೊಂದು ಚೀಲಗಳಲ್ಲಿ ಮೆಂತೆಕಾಳು, ಬಡೆಸೋಪು ಮತ್ತು ಒಂದು ರೂಪಾಯಿ ನಾಣ್ಯ, ಕೊಬ್ಬರಿ ಬೆಲ್ಲ ಮತ್ತು ಜೋಳ, ಇಪ್ಪತ್ತೈದು ಪೈಸೆ ಹಾಕಿದ್ದು, ಆ ತಾಂಡಾದ ನಾಯಕ ಈ ಚೀಲಗಳನ್ನು ಹೆಣ್ಣು ಮತ್ತು ಗಂಡಿನವರಿಗೆ ಸಮನಾಗಿ ಹಂಚುತ್ತಾನೆ. ಮೆಂತೆ ಬಡೆಸೋಪು ಮತ್ತು ಕೊಬ್ಬರಿ ಹಾಕಿರುವ ಚೀಲಗಳನ್ನು ಹೆಣ್ಣಿನ ಕಡೆಯವರಿಗೆ ಜೋಳ ಮತ್ತು ಬೆಲ್ಲ ಹಾಕಿದ ಚೀಲಗಳನ್ನು ಗಂಡಿನ ಕಡೆಯವರಿಗೆ ಹಸ್ತಾಂತರಿಸುತ್ತಾನೆ. ಹೀಗೆ ಮಾಡುವುದರಿಂದ ವಿವಾಹದ ನಿಶ್ಚಯಕಾರ್ಯವಾದಂತೆ ನಂತರ ವೈವಾಹಿಕ ಸಂಬಂಧಗಳನ್ನು ಮುರಿಯಲು ಬರುವುದಿಲ್ಲ. ಈ ಸಂದರ್ಭದಲ್ಲಿ ನೆರೆದ ಸಭೆಯಲ್ಲಿ ಅನುಭವಿ ವ್ಯಕ್ತಿ ನಿಶ್ಚಯದ ಕಸಳಾತ ಹೇಳುತ್ತಾನೆ.

"ಪಂಚಪಂಚಾತ್ ರಾಜಾ ಭೋಚೇರ ಸಭಾ
ಸಗಳ ಕಚೇರಿ ಪಚಾರೆ ಲಾಖ್, ಆನ್ ಪಚಾರೆ ಸವ್ವಾಲಾಖ್
ಕೇ ಸಗ ಸಗ ಕಾಡೇ ಮೋಡ
ಪಾಂಚಿ ಬೇಸನ ದಿನೇ ಜೋಡ
ಸಗೋ ಸಗಾಯಿ ಪರಕಿಯ
ದೂದ ಧೋಯಿಲಿ ವಾತರ ನಾಯಕ
ಲಕ್ಕಣ ಹರಾ ಲಕ್ಕಗಯೇ, ಕುಕ್ಕಣ ಅಂಬಾ ವೋರ
ಲಕ್ಕಪರ ಬಾನಾ ಜಲಮ ಕೋಯಿಜ ಕೋನಿ ದಿಟೋ
ಭಾಶಿಯಾನ ಭೇಜಿ ಕಸ್ತೂರಿ ಜಬ್ ತೋಲತೋ
ಪುರಿಜ ಪರಿಮಳ ಘಣ ವೇರಿರ ನಾಯಕ
ಸೋ ಪಣಿಯಾರಿರ ಲೇರ ತಾರಿ
ಗಂಗಣ ಮಂಗಣ ಡೋರ
ಆಕಾಶೇತಿ ಪಡಿಬುಂದ, ಹೇಟ ಹೂಗಿ ಪೂಯೇರ ಭಾಜಿ
ವೋನ ಸಗಾಸೆಣ ಖಾನ ವೆಗೇ ರಾಜಿರ ನಾಯಕ
ರುಮ ಟಾಕ ಗೋರುಮ, ಸಾಂಕ ಕೆರಾಯಿಚ
ಅಂಗಾಡಿ ವೆಯವತ ಗಂಗಾ ವೋಮ ಖೋದೆ ವೇರಿ
ಜೇರಮಾಯಿ ತೇಜಿ ಪಿದಿ ಪಾಣೆರ ನಾಯಕ

ಅಂಗಾಡಿ ಖಾದೇ ಸಕ್ಕರ, ಲಾರೇತಿ ಖಾದೇ ಮಿಠಾಯಿ

ಸೇ ಮಿಟೋಜ ಮಿಟೋರ ನಾಯಕ

ಏಕ ದಾಗೆರೋ ಸಿಡಿ, ಏಕ ಚಾಮಡೆರೋ ಸಿಡಿ

ಚಾಮಡೆರೋ ರೆಜಾಯ, ದಾಗೆರೋ ಖಲಜಾಯ

ದೇಕನ ಕರಜೋ ವಳಕನ ವೇಪಾರ

ಸಗಾಯಿ ಹುಯಿ ಗೋರೂರ ಪಚಾರೆಮಾಯಿ

ಹೀರಾದೇನ ಮೋತಿ ಲೇಜಾವೋ

ಏರೋ ಸರಮಾ ತೋನ ರೇದರ ನಾಯಕ

ಈ ಕೇಣ ಹಮಾರ ಛ"

**ಸಾರಾಂಶ :** ಭೋಜರಾಜನ ಸಭೆಯ ಸಮಾನವಾಗಿರುವ ಈ ಸಭೆಯಲ್ಲಿ ವಿನಂತಿಸಿಕೊಳ್ಳುವುದೇನೆಂದರೆ ನಾವಿಬ್ಬರು (ಮದುಮಕ್ಕಳ ತಾಯಿತಂದೆಯರು) ಮನಃಪೂರ್ವಕವಾಗಿ ಒಪ್ಪಿಕೊಂಡು ವಿವಾಹದ ನಿಶ್ಚಯ ಕಾರ್ಯವನ್ನು ಮಾಡುತ್ತಿದ್ದೇವೆ. ಒಂದು ಗುಂಪಿನೊಳಗಿಂದ ಒಳ್ಳೆಯ ಕನ್ಯೆಯನ್ನು ತಾವು ಆರಿಸಿಕೊಡುತ್ತಿದ್ದೀರಿ. ಈ ಸಂಬಂಧ ಹಾಲುಜೇನಿನಂತೆ ಮಧುರವಾಗಿರಲಿ ಹಣೆಬರಹ ನಿರಾಸೆಯಾಗಬಾರದು. ಮುಂದಿನ ಜನ್ಮ ಬಲ್ಲವರಾರು? ಎಲೆಮರೆಯ ಕಾಯಿ ಮಾವಿನ ಹಣ್ಣಿನಂತೆ ಈ ಸಂಬಂಧ ಸಿಹಿಯಾಗಲಿ. ರಾಜನಿಗೆ ಕಳುಹಿಸಿದ ಕಸ್ತೂರಿಯು ಪರಿಮಳವಾಗಿತ್ತು. (ವಧು-ವರರ ರೂಪಲಕ್ಷಣಗಳು ಸಮಾನವಾಗಿವೆ) ಆಕಾಶದಿಂದ ಮಳೆ ಸುರಿಯಿತು. ಭೂಮಿ ಮೇಲೆ ಫಲವತ್ತಾದ ಸೊಪ್ಪು ಬೆಳೆಯಿತು. ಅದನ್ನು ಬೀಗರು ತಿಂದು ರಾಜಿಯಾದರು, ಕನ್ಯೆಗೆ ಕೊಡುವ ನಿಶ್ಚಿತಾರ್ಥದ ರೂಪಾಯಿ ಲಂಬಾಣಿಗರಲ್ಲಿ ಮಹತ್ವದ್ದು ಗಂಗೆಯಲ್ಲಿ ಹಡ್ಡಿದ ವರತೆಯಲ್ಲಿ ಎರಡು ಕುದುರೆಗಳು ನೀರು (ವಧು-ವರರು) ಕುಡಿದವು. ಮೊದಲಿಗೆ ಸಕ್ಕರೆ ನಂತರ ಮಿಠಾಯಿ ತಿಂದರು. ಎರಡರಲ್ಲೂ ಒಂದೇ ರುಚಿ ನಾಯಕರೆ ನಾವಿಬ್ಬರೂ ಸೇರಿ ಒಂದು ದಾರದಿಂದ ಮತ್ತೊಂದು ಚರ್ಮದಿಂದ ಹೊಲೆದದ್ದು ನೋಡಿದೆವು. ಆದರೆ ಚರ್ಮದಿಂದ ಹೊಲದಿದ್ದು ನಿರಂತರವಾಗಿ ಉಳಿಯುವಂತಹದ್ದು. ತಿಳಿದು ಕೊಡುಕೊಳೆಯ ಸಂಬಂಧ ಮಾಡಿಕೊಳ್ಳುತ್ತಿದ್ದೇವೆ. ಮುತ್ತು ಕೊಟ್ಟು ರತ್ನ ಪಡೆಯುತ್ತಿದ್ದೇವೆ. ಈ ಆಗು ಹೋಗು ನಿಮಗೆ ಸೇರಿದ್ದು. ಈ ಅರಕೆ ನನ್ನದಾಗಿದೆ. (ಡಾ.ಹರಿಲಾಲ್ ಪವಾರ 1996-13) ಈ ಮೇಲಿನ 'ಕಸಳಾತ'ದ ಪ್ರಕಾರ ಪತಿ ಪತ್ನಿಯರ ವೈವಾಹಿಕ ಸಂಬಂಧಗಳು ನಿರಂತರವಾಗಿ ಮುಂದುವರಿಯಲಿ ಎಂಬುವುದನ್ನು ವಿವರಿಸುತ್ತದೆ.

**ಬೆಲ್ಲ ತಿನ್ನುವ ಕಾರ್ಯ (ಗೋಳಖಾಯೇರೊ) :**

ನಿಶ್ಚಯಕಾರ್ಯ ಮುಗಿದ ಕೆಲವು ದಿನಗಳ ನಂತರ ಬೆಲ್ಲ ತಿನ್ನುವ ಕಾರ್ಯಕ್ರಮ ಹಮ್ಮಿಕೊಳ್ಳುತ್ತಾರೆ. ಇದಕ್ಕಾಗಿ ಗಂಡಿನ ತಂದೆತಾಯಿಗಳು ಹಾಗೂ 8-10 ಜನ ಹಿರಿಯರು ಸೇರಿ ಹೆಣ್ಣಿನ ಮನೆಗೆ ಹೋಗುತ್ತಾರೆ. ಅಲ್ಲಿ ತಾಂಡಾದ ನಾಯಕ ಮತ್ತು ಕೆಲವು ಜನ ಹಿರಿಯರು ಸೇರಿಕೊಂಡು 8-10 ಕಿ.ಲೊ. ಬೆಲ್ಲ ಮತ್ತು 5 ಬಾಟಲಿ ಸೆರೆ ತೆಗೆದುಕೊಂಡು ಹೋಗಿ ತಾಂಡಾದ ಸಮೀಪದ ಸ್ಥಳದಲ್ಲಿ ಕುಳಿತು ಮೊದಲು ಬೆಲ್ಲ

ತಿನ್ನುತ್ತಾರೆ. ಬೆಲ್ಲ ವಿತರಿಸಿದ ಮೇಲೆ ಹೆಣ್ಣು ಗಟ್ಟಿಯಾದಂತೆ ನಂತರ ಒಬ್ಬ ಹಿರಿಯ ವ್ಯಕ್ತಿ ಮುಂದಿನಂತೆ ಕಸಳಾತ ಹೇಳುತ್ತಾನೆ.

'ಪಂಚ ಪಂಚಾತ್ ರಾಜಾ ಭೋಜೆರ ಸಭಾ
ಸಗಳ ಕಚೇರಿ ಪಚಾರೇ ಭಾಯಿಸಂಗ
ಪಚಾರೆ ಜಗತ್ ಏಕೇತಿ ಏಕ ಸವಾಯಿರ
ಗಡೇ ಗಡೇರ ಭೀರೂ ನಾಯಕ
ಜಬ್ ಧೂರತೆ ಜಬ್ ಡುಂಗರತೆ
ಅಬುಕಿ ಪಡಿ ಪಚಾಣರ ನಾಯಕ
ಕೇ ಟಾಕಿ ಲಾಗಿ ಬ್ರಹ್ಮೇರಿ, ಜಲ್ಮ ಹೀರಾಖಾಂಡ
ಕೋಟುಪರ ಕಾಂಗಣಾ ಹಾತಿ ಮಸ್ತಕ ಢಾಲ
ವೂಂಚ ಕಾಂಟೋ ಪರೇಲಾಮಾಯಿ
ಧೋಳೋ ರಾಣಾ ಕೆರಾವರ ನಾಯಕ
ಜಾಗಾದೇಕನ ಪಾಗಾ ಭಾಂದೆ
ವತನ ದೇಕನ ನಾತಾ ಕಿದೆ
ರಕಾಡಜೋ ನಾತೋ ಮತ್ ಕರೋ ತಗಾತ
ಭಾಯಿತಿ ಭಾಯಿ ಬರೋಬ್ಬರ
ಸಗೇತಿ ಸಗೊ ಬರೋಬ್ಬರ
ತೇಜಿರ ಕಾನ ಬರೋಬ್ಬರ ಕ ನಾಯಕ
ಮನ ತೂ, ತೋನ ಮ ನಾಯಕ
ತಾರಿ ಪೇಟೇಮ ತಾರಿ ಆಂತರೆ
ಮಾರಿ ಪೇಟೇಮ ಮಾರಿ ಆಂತರೆ
ವಲ್ಬಿ ಸಲ್ಬಿ ಕೇರಾಯಿರ ನಾಯಕ
ಏಕವಾಟ ಕಾಟಾರ, ಏಕವಾಟ ಭಾಟಾರ
ವಾಡ ಖಡಕಗೀ ಮಾಟಿರ ವಾಡ ರೇಣಚ
ಬರಗಡಾರಿ ವೇನ ದಿಟೋ
ಭೋಳೋ ಢಾಳೋ ಬೇಟಾ
ತಾರೇ ಖೋಳೇಮ ಘಾಲೇ
ಏರ ಸರಮಾ ತೋನ ರೇದರ ನಾಯಕ
ಈ ಕೇಣ ಹಮಾರ ಛ'

**ಸಾರಾಂಶ :** ಭೋಜರಾಜನ ಸಭೆಯ ಸಮಾನವಾಗಿರುವ ಈ ಸಭೆಯಲ್ಲಿ ವಿವಿಧ ಕಡೆಯಿಂದ ಬಂದ ನಾಯಕರುಗಳಲ್ಲಿ ವಿನಂತಿಸಿಕೊಳ್ಳುವುದೇನೆಂದರೆ ನಿಮ್ಮೆಲ್ಲರ ಪರಿಚಯದಿಂದ ಆತ್ಮ ಸಂತೋಷವಾಗಿದೆ. ಬ್ರಹ್ಮ ನಮ್ಮ ಹಣೆಬರಹ ಬರೆದನು. ಯಾರ‍್ಯಾರ ದೈವ ಹೇಗೆ? ಬಲ್ಲವರಾರು? ಆನೆಯ ಮೇಲೆ ರಾಜಾವೇಷದಿಂದ ಕುಳಿತು ಬರುವಂತ ಮಗ ಒಳಗೆ ಕುಳಿತ್ತಿದ್ದಾನೆ. ಗುಣ ನೋಡಿ ಸಂಬಂಧ ಬೆಳೆಸುತ್ತಿದ್ದೇವೆ. ಇದನ್ನು ಕೊನೆಯವರೆಗೂ ಉಳಿಸಿಕೊಂಡು ಹೋಗುವ ಹೊಣೆಗಾರಿಕೆ ಎರಡು ಕುಟುಂಬಕ್ಕೆ ಸೇರಿದ್ದು. ನಮ್ಮಲ್ಲಿ ಯಾವುದೇ ಭಿನ್ನಾಭಿಪ್ರಾಯ ಬರಬಾರದು. ಸಹೋದರನಿಗೆ ಸಹೋದರ ಸರಿಸಮ. ಬೀಗರಿಗೆ ಬೀಗರು ಸರಿಸಮ. ಕುದುರೆಯ ಕಿವಿಗಳು ಸರಿಸಮ (ಈ ಪದ್ಯದಲ್ಲಿ ವಧುವರರಿಗೆ ಕುದುರೆಗಳು ಎಂದು ಸಾಂಕೇತಿಕವಾಗಿ ಕರೆಯಲಾಗಿದೆ.) ನಮ್ಮಿಬ್ಬರ ಕರಳುಗಳು ಒಂದಕ್ಕೊಂದು ಬೆಸೆದುಕೊಂಡಿವೆ. ಒಂದು ಕಲ್ಲಿನಿಂದ ಕೂಡಿದ ದಾರಿ, ಮತ್ತೊಂದು ಮುಳ್ಳಿನಿಂದ ಕೂಡಿದ ದಾರಿ ಇವೆರಡು ಸುಳ್ಳಾಗಿ ಮನುಷ್ಯನ ದಾರಿಯೇ ಕೊನೆಯದು ತೂಕ ಕಟ್ಟಿ ನನ್ನ ಮುಗ್ಧಮಗನಿಗೆ ನಿಮ್ಮ ಆಶ್ರಯದಲ್ಲಿ ಕೊಡುತ್ತಿದ್ದೇನೆ. ಇವನ ಆಗುಹೋಗುಗಳ ಜವಾಬ್ದಾರಿ ನಿಮ್ಮದು. ಈ ಅರಿಕೆ ನನ್ನದಾಗಿದೆ. (ಡಾ.ಹರಿಲಾಲ್ ಪವಾರ 1996-17) ಈ ಮೇಲಿನ ಕಸಳಾತ ಹೇಳಿದ ಬಳಿಕ ಗಂಡಿನವರ ಮೈಮೇಲೆ ಕೆಂಪುಬಣ್ಣ ಹಾಕುತ್ತಾರೆ. ಕೂಡಿದ ಜನರಿಗೆ ಮದ್ಯ ವಿತರಿಸುತ್ತಾರೆ. ಹಾಗೂ ವಿವಾಹದ ದಿನಾಂಕವನ್ನು ನಿರ್ಧರಿಸುತ್ತಾರೆ. ಈ ಕಾರ್ಯಕ್ರಮವಾದ ಮೇಲೆ ಗಂಡು ಮತ್ತು ಹೆಣ್ಣಿನ ಕಡೆಯವರು ಪರಸ್ಪರ ಹೋಗಿ ಬರಲು ಯಾವುದೇ ನಿರ್ಭಂಧವಿರುವುದಿಲ್ಲ.

**ಹಂದರ ಹಾಕುವುದು (ಸಾಡಿತಾಣೆರೋ) :**

ಲಂಬಾಣಿಗರ ವಿವಾಹ ಕಾರ್ಯಗಳಲ್ಲಿ ಸಾಡಿತಾಣೆರೋ ಒಂದು ಪ್ರಮುಖವಾದ ಆಚಾರವಿಧಿಯಾಗಿದೆ. ಬ್ರಾಹ್ಮಣ ಜೋತಿಷ್ಯರ ಮನೆಗೆ ಹೋಗಿ ವಿವಾಹದ ಮೂಹೂರ್ತ ನೋಡಿಕೊಂಡು ಒಳ್ಳೆಯ ಶುಭದಿನವನ್ನು ವಿವಾಹಕ್ಕಾಗಿ ಆಯ್ಕೆ ಮಾಡುತ್ತಾರೆ. ನಂತರ ಗಂಡಿನ ಮನೆಯ ಮುಂದೆ ಸರಳ ರೀತಿಯಲ್ಲಿ ಹಂದರ ಹಾಕುತ್ತಾರೆ ಈ ಕಾರ್ಯಕ್ರಮದಲ್ಲಿ ಬಂಧು-ಬಾಂಧವರು ಪಾಲ್ಗೊಳ್ಳುತ್ತಾರೆ. ಹಂದರವನ್ನು ಮಾವಿನಹಸಿರು ಎಲೆಗಳು, ತೆಂಗಿನ ಗರಿ, ಬಾಳೆಯ ಕಂಬಗಳನ್ನು ಕಟ್ಟಿ ಶೃಂಗರಿಸುತ್ತಾರೆ. ಹಂದರದ ಮಧ್ಯಭಾಗದಲ್ಲಿ ಹಿಟ್ಟಿನಿಂದ (ಚೊಕೊ) ರಂಗೋಲಿ ಹಾಕಿ ಅದರ ಮಧ್ಯೆ ಪವಿತ್ರ ನೀರು ತುಂಬಿದ ಕೊಡವನ್ನು ಉಣ್ಣೆಯ ಬಟ್ಟೆಯಿಂದ ಮುಚ್ಚಿಡುತ್ತಾರೆ. ಈ ಕಾರ್ಯಕ್ರಮದಲ್ಲಿ ತಾಂಡಾದನಾಯಕ, ಕಾರಭಾರಿ, ಬಂಧು-ಬಾಂಧವರು, ಹಿರಿಯರು ಪಾಲ್ಗೊಳ್ಳುತ್ತಾರೆ. ಇಲ್ಲಿಂದಲೆ ಇವರ ವಿವಾಹ ಕಾರ್ಯಗಳು ಪ್ರಾರಂಭವಾಗುತ್ತವೆ.

**ಕಾಯ್ದಿ ಸೂಜಿಯಿಂದ ಮುದ್ರೆ ಹಾಕುವ ಸಂಸ್ಕಾರ (ವದಾಯಿ) :**

ಗಂಡಿನ ಮನೆಯ ಮುಂದೆ ಹಂದರ ಹಾಕಿದ ಮೇಲೆ ಅದೇ ದಿನ ರಾತ್ರಿ 'ವದಾಯಿ' ಸಂಸ್ಕಾರವನ್ನು ಆಚರಿಸುತ್ತಾರೆ. ಮನೆಯನ್ನು ಆಕಳಸಗಣಿಯಿಂದ ಬಳಿದು, ಅದರ ಮೇಲೆ ಜೋಳದ ಹಿಟ್ಟಿನಿಂದ ರಂಗೋಲಿ ಹಾಕಿ, ಮಧ್ಯದಲ್ಲಿ ನೀರು ತುಂಬಿದ ಕಳಸ ಇಟ್ಟು, ಮುಂದೆ ಪವಿತ್ರ ದೀಪಗಳನ್ನು ಹಚ್ಚಿಡುತ್ತಾರೆ. ತಾಂಡಾದ ನಾಯಕ ಮದುಮಗನಿಗೆ ಮತ್ತು ಅವನ ತಮ್ಮನಿಗೆ ಕಾಯ್ದ ಸೂಜಿಯಿಂದ ಬಲಭುಜಕ್ಕೆ ಬರೆ ಹಾಕುತ್ತಾನೆ. ಬರೆ ಹಾಕುವದರಿಂದ ಅಣ್ಣ-ತಮ್ಮಂದಿರು ವಿವಾಹವಾಗಲು ಅರ್ಹತೆ ಪಡೆಯುತ್ತಾರೆ. ಈ ಸಂದರ್ಭದಲ್ಲಿ ನಾಯಕ ಏಳುಸಲ ಈ ಮುಂದಿನಂತೆ ಮಂತ್ರ ಹೇಳುತ್ತಾನೆ.

'ಕೋಳಿ ಆವ ಕೋಳಿ ಜಾವ
ಕೋಳಿಮಾಯಿ ಜೋಗ ಸಮಾಳ
ಮುಂಗೆ ಅವಡಾ ಮೊಗರಾ
ತಲ್ಲಿ ಅವಡಾ ಬಾಣ ಥ
ಲಾವರಿಯಾ ಬಂದೂಕ ಥ
ಧೋಳೋ ಘೋಡೋ ಹಾಂಸಲೋ
ಕಾಮಕರ ಕಾಜಕರ ಗೋಸಾಯಿ ಬಾವಾ
ಸದಾ ಸದಾ'

**ಸಾಂರಾಂಶ :** ಕೋಳಿ ಬರುತ್ತದೆ ಕೋಳಿ ಹೋಗುತ್ತದೆ. ವರನ ತಾಯಿಗೆ ಏಳು ಕೋಳಿಗಳು, ತಾಂಡಾದ ನಾಯಕನಿಗೆ ಏಳು ಕೋಳಿಗಳು ಹೋಗುತ್ತವೆ. ಇದರ ಮಧ್ಯದಲ್ಲಿ ಜ್ಯೋತಿ ಆರದಂತೆ ನೋಡಿಕೊಳ್ಳಬೇಕು. ಹೆಸರುಕಾಳಿನ ಗಾತ್ರದ ಬರೆ, ಎಳ್ಳುಕಾಳಿನ ಗಾತ್ರದ ಸೂಜಿ ಬರೆ, ಬಿಳಿ ಕುದುರೆ ಹತ್ತಿ ಸವಾರಿ ಮಾಡು, ಬಂದೂಕಿನ ಗುಂಡಿನಂತೆ ಚಾಕಚಕ್ಯತೆಯಿಂದ ಕೆಲಸ ಮಾಡು. ನಿನಗೆ ಸದಾ ಗುರುವಿನ ಆಶೀರ್ವಾದವಿದೆ ಎಂದು ವರನಿಗೆ ಉಪದೇಶಿಸುತ್ತಾರೆ. (ಡಾ.ಹರಿಲಾಲ್ ಪವಾರ 1996-17) ಬರೆ ಹಾಕಿದ ನಾಯಕನಿಗೆ ಒಂದು ಮಾದಲಿಯ ಉಂಡೆ ಮತ್ತು ಒಂದು ರೂಪಾಯಿ ಇಪ್ಪತ್ತೈದು ಪೈಸೆ ಕಾಣಿಕೆ ಕೊಡುವ ವಾಡಿಕೆ ಇದೆ. ನಂತರ ಕೂಡಿದ ಜನರಿಗೆ ಮಾದಲಿಯ ಉಂಡೆ ಹಂಚುತ್ತಾರೆ.

**ಬೆಲ್ಲದ ಪಾನಕ ಹಂಚುವ ಕಾರ್ಯ (ಘೋಟಾದೇರೊ) :**

'ವದಾಯಿ' ಸಂಸ್ಕಾರ ಮುಗಿದ ಮೇಲೆ ಮದುಮಗ ಹಾಗೂ ಅವನ ಸಂಗಡಿಗರು ಸೇರಿ, ಬಡೆಸೋಪ, ಕಸಕಸಿ, ಯಾಲಕ್ಕಿ, ಕರಿಮೆಣಸು ಮತ್ತು ಬೆಲ್ಲವನ್ನು ಅರೆದು ನೀರಿನಲ್ಲಿ ಸೇರಿಸಿ ಪಾನಕ ತಯಾರಿಸುತ್ತಾರೆ. (ಘೋಟಾ) ಇದನ್ನು ಮಣ್ಣಿನ ಬಿಂದಿಗೆಯಲ್ಲಿ ಹಾಕಿ ಅದರಲ್ಲಿ ಒಂದು ರೂಪಾಯಿ, ಇಪ್ಪತ್ತೈದು ಪೈಸೆ ಹಾಕಿ, ಉಣ್ಣೆಯ ಬಟ್ಟೆಯಿಂದ ಮುಚ್ಚಿ ಹಂದರದ ಮಧ್ಯಭಾಗದಲ್ಲಿ ಇಡುತ್ತಾರೆ. ಇದಕ್ಕೆ "ಕಳಸೆರ ಬಿಂದಗಾ" ಕಳಸದ ಬಿಂದಿಗೆ ಎನ್ನುತ್ತಾರೆ.

**ಮದುಮಗನನ್ನು ಮನೆಯಿಂದ ಹೊರತರುವುದು (ವೆತಡುನ ಭಾರ ಕಾಡೆರೊ) :**

ಬೆಲ್ಲದ ಪಾನಕ ತಯಾರಿಸಿ ಹಂದರದಲ್ಲಿ ಇಡುವ ಕಾರ್ಯ ಮುಗಿದ ಮೇಲೆ ಮದುಮಗನಿಗೆ ಸ್ನಾನ ಮಾಡಿಸಿ ವಿವಾಹದ ವಿಶೇಷ ಉಡಿಗೆ ತೊಡಿಗೆಗಳನ್ನು ತೊಡಿಸಿ ಅಲಂಕರಿಸುತ್ತಾರೆ. ನಂತರ ಮದುಮಗ ತನ್ನ ಕುಲದೇವತೆಗೆ, ಪೂರ್ವಜರಿಗೆ ಪೂಜೆ ಸಲ್ಲಿಸುತ್ತಾನೆ. ಅವನ ತಾಯಿ ಮತ್ತು ನಾಲ್ಕೈದು ಹೆಣ್ಣು ಮಕ್ಕಳು ಸೇರಿ ಮದಮಗನನ್ನು ತಬ್ಬಿಕೊಂಡು ಅಳುತ್ತಾರೆ. (ಇವತ್ತಿನಿಂದ ನೀನು ಪರರ ವಶವಾಗುವೆ ಎಂಬುದು ಈ ದುಃಖಕ್ಕೆ ಕಾರಣವಾಗಿದೆ.) ಇದಾದ ಮೇಲೆ ಲಂಬಾಣಿ ಸ್ತ್ರೀಯರು ಧಾರ್ಮಿಕ ಗೀತೆಗಳನ್ನು ಹಾಡುತ್ತ ಮದುಮಗನನ್ನು ಮನೆಯಿಂದ ಹೊರಗೆ ಕರೆದುಕೊಂಡು ಬರುತ್ತಾರೆ. ಮದುಮಗ ಅಂಗಳದಲ್ಲಿ ಹಾಸಿದ

ಗೋಣಿಚೀಲದ ಮೇಲೆ ಕುಳಿತುಕೊಳ್ಳುತ್ತಾನೆ. ನಂತರ ಕೂಡಿದ ಜನರಿಗೆ ಬೆಲ್ಲದ ಪಾನಕವನ್ನು ಹಂಚುತ್ತಾರೆ. ನಾಯಕ ಪಾನಕವನ್ನು ಸ್ವೀಕರಿಸಿ ಈ ಕೆಳಗಿನಂತೆ ನುಡಿ ಮುತ್ತುಗಳನ್ನು ಹೇಳುತ್ತಾನೆ.

'ಕಸಮಸ್ ಕಸೆ ಕಸ್ತೂರಿ
ಘುಸನ ಕಾಡೆ ಘೋಟಾ
ಸಾಂದಾ ಸಾಂದಾ ಲೋಟಾಮಾರೆ
ಲೋ ಸಗೆನ್ ಭಾಯಿ ಘೋಟಾ'

**ಸಾರಾಂಶ :** ಕಸಕಸಿ ಕಸ್ತೂರಿ ಮುಂತಾದವುಗಳನ್ನು ಅರೆದು ಪಾನಕವನ್ನು ತಯಾರಿಸಿದೆ. ಈ ಪಾನಕ ತುಂಬಿದ ಲೋಟಗಳಿಂದ ಸಂದು, ಸಂದುಗಳಿಗೆ ಹೊಡೆಯಲಾಗಿದೆ. ಆದ್ದರಿಂದ ನೆರದಂಥ ಬಂಧು-ಬಾಂಧವರೆ ಈ ಪಾನಕವನ್ನು ಸ್ವೀಕರಿಸಿ (ಡಾ.ಪಿ.ಕೆ.ಖಂಡೋಬಾ 1991-139) ಈ ಮೇಲಿನಂತೆ ಹೇಳಿ ಕೂಡಿದ ಜನರು ಮದುಮಗನಿಗೆ ಶುಭ ಹಾರೈಸುತ್ತಾರೆ.

**ಮದುಮಗನಿಗೆ ಮದುಮಗಳ ಮನೆಗೆ ಬೀಳ್ಕೊಡುವದು :**

ಲಂಬಾಣಿಗರ ಬಹುತೇಕ ವಿವಾಹ ಕಾರ್ಯಕ್ರಮಗಳು ಹೆಣ್ಣಿನ ಮನೆಯ ಮುಂದೆ ನಡೆಯುತ್ತವೆ. ಮದುಮಗನನ್ನು ಮನೆಯಿಂದ ಹೊರ ಕರೆದುಕೊಂಡು ಬಂದು ತಾಂಡಾದ ಜನರು ಕಾಣಿಕೆ ಸಲ್ಲಿಸುತ್ತಾರೆ. ತಾಂಡಾದಿಂದ ಹೊರಡುವ ಮದುಮಗ ವಿವಾಹವಾಗಿ ಮದುಮಗಳ ಜೊತೆ ಮರಳಿ ಬರಬೇಕು. ಒಬ್ಬಂಟಿಗ ಬರುವಂತಿಲ್ಲ ಎಂದು ವಿಧಿಸುತ್ತಾರೆ. ಮದುಮಗನ ಜೊತೆಯಲ್ಲಿ ಒಬ್ಬ ಚತುರ ವ್ಯಕ್ತಿಯನ್ನು ಕಳುಹಿಸುವ ಪರಿಪಾಠವಿದ್ದು, ಅವನನ್ನು 'ಲೇರಿಯಾ' ಎಂದು ಕರೆಯುತ್ತಾರೆ. ವಿವಾಹ ಮಾಡಿಕೊಳ್ಳಲು ಹೊರಟ ಮದುಮಗನ ಕೈಯಲ್ಲಿ ಲಿಂಬೆಹಣ್ಣು, ಕಠಾರಿ ಕೊಡುತ್ತಾರೆ. ಹಾಗೂ ತಾಂಡಾದ ನಾಯಕ ಅವನ ವಸ್ತ್ರದ ಮೇಲೆ ಒಂದು ರೂಪಾಯಿ ನಾಣ್ಯ ಕಟ್ಟುತ್ತಾನೆ. ಹೀಗೆ ಒಬ್ಬ ವೀರ ಯೋಧನಂತೆ ಮದುಮಗನನ್ನು ಶೃಂಗರಿಸಿ ತಾಂಡಾದ ಜನರು ಬೀಳ್ಕೊಡುತ್ತಾರೆ.

ಗಂಡಿನ ಮನೆಯಿಂದ ಹೊರಟ ವಿವಾಹ ದಿಬ್ಬಣ ಹೆಣ್ಣಿನ ತಾಂಡಾವನ್ನು ಹಗಲಿನಲ್ಲಿ ಪ್ರವೇಶಿಸಲು ಪರವಾನಿಗೆ ಇಲ್ಲದ್ದರಿಂದ ರಾತ್ರಿ ವೇಳೆಯಲ್ಲಿ ತಲುಪಿ ತಾಂಡಾದ ಮಧ್ಯಭಾಗದಲ್ಲಿರುವ "ಸೀತಲಾದೇವಿ" (ಲಂಬಾಣಿಗರ ದೇವತೆ) ಗುಡಿಯ ಹತ್ತಿರ ಕೂಡುತ್ತಾರೆ. ಲೇರಿಯಾ ಮದುವೆ ದಿಬ್ಬಣ ಬಂದು ಸುದ್ದಿಯನ್ನು ನಾಯಕನಿಗೆ ತಿಳಿಸುತ್ತಾನೆ. ಆಗ ನಾಯಕನ ಹೆಂಡತಿಯು (ನಾಯಕಣ) ಕೆಲವು ಯುವತಿಯರೊಂದಿಗೆ, ನೀರು ಮತ್ತು ಆರತಿ ತೆಗೆದುಕೊಂಡು ಹಾಡುಗಳನ್ನು ಹಾಡುತ್ತ ಮದಮಗನಿರುವ ಸ್ಥಳಕ್ಕೆ ಬಂದು ಅವನ ಮುಂದೆ ನೀರಿನ ಚರಿಗೆ ಇಟ್ಟು ಯೋಗಕ್ಷೇಮ ಕೇಳುತ್ತಾಳೆ. ಆಗ ಲೇರಿಯಾ ಈ ಕೆಳಗಿನ ಕಸಳಾತ ಹೇಳುತ್ತಾನೆ.

'ಪಂಚ ಪಂಚಾತ್ ರಾಜಾ ಭೋಜೇರ ಸಭಾ
ಪಚಾರಿ ಲಾಖ್ ಅನ್ ಪಚಾರಿ ಸವ್ವಾಲಾಖ್
ಕಚ್ಚನಕಿ ಕಾಯಾ ಕಪ್ಪರಕಿ ಭಾತಿ
ತಮ್ ಹಮ್ ಮಲಗೆ ಸಿತಳವೇಗಿ ಭಾತಿ

ದಲ್ ದಮೇರಾ ಅಕ್ಕಲ್‌ಫೇಮ,
ರಜಕ್ ಮೋತ್ ಮುಲಾಖಾತ್
ಮರಣ ಧರಣ ಭಗವಾನೇರ ಹಾತ
ಮನಮೇ ಚಂಗಾತೋ ಕಾಟೋಟಿಮೆ ಗಂಗಾ
ಗಂಗಾರ ಅಸ್ನಾನ ತೀರ್ಥೇರೋ ಮೇಳೋ
ಸಗೇರ ಅಣದ ಭಾಯಿರ ಕಳಸ್
ಸಗಾಸೆಣ ಅಜಾತ್, ಲೋ ಜಳಭಾಯಿ'

**ಸಾರಾಂಶ :** ರಾಜಭೋಜನ ಸಭೆಯ ಸಮಾನವಾಗಿರುವ ಈ ಸಭೆಯಲ್ಲಿ ವಿನಂತಿಸಿಕೊಳ್ಳುವುದೇನೆಂದರೆ ನಮ್ಮ ನಿಮ್ಮ ಭೇಟಿಯಿಂದ ಆತ್ಮ, ಮನಸ್ಸು ಪುಳಕಿತಗೊಂಡಿದೆ. ಒಬ್ಬರಿಗೊಬ್ಬರ ಪರಿಚಯದಿಂದ ಮತ್ತಷ್ಟು ಸಂತೋಷವಾಗಿದೆ. ನಮ್ಮ ಅಳಿವು ಉಳಿವು ಭಗವಂತನ ಕೈಯಲ್ಲಿ. ಮನಸ್ಸು ಒಳ್ಳೆಯದಿದ್ದರೆ ನಮ್ಮ ಮುಂದೆಯೇ ಗಂಗಾನದಿ ಹರಿದಂತೆ. ಆ ಪವಿತ್ರ ಗಂಗೆಯ ಸ್ನಾನ ಇಲ್ಲಿಯೇ ಆದಂತೆ. ಮದುವೆ ಪಾವನ. ಎಲ್ಲರೂ ಕ್ಷೇಮವಾಗಿದ್ದಾರೆ. ನಿಮ್ಮ ಒಪ್ಪಿಗೆಯ ಮೇರೆಗೆ ಸಂತೋಷದಿಂದ ನೀರು ಸ್ವೀಕರಿಸುತ್ತೇನೆ.[25] ನಾಯಕನ ಹೆಂಡತಿ ನಂತರ ಎಲ್ಲರಿಗೆ ನೀರು ಕೊಟ್ಟು ಮದುಮಗ ತಂದ ಸಿಹಿಯನ್ನು ಕೂಡಿದ ಜನರಿಗೆ ವಿತರಿಸಿ ಹೆಣ್ಣಿನ ಮನೆಗೆ ಕರೆದುಕೊಂಡು ಹೋಗುತ್ತಾಳೆ. ಹೆಣ್ಣಿನಮನೆ ಪ್ರವೇಶಿಸುವ ಮುನ್ನ ಮದುಮಗ ಹೆಣ್ಣಿನ ಹಿರಿಯ ಸಹೋದರನಿಗೆ ಎರಡು ರೂಪಾಯಿ ಕಾಣಿಕೆ ನೀಡಿ ಮನೆ ಪ್ರವೇಶಿಸುತ್ತಾನೆ. ಆಗ ಅವರಿಗೆ ಊಟೋಪಚಾರದ ವ್ಯವಸ್ಥೆ ಮಾಡಲಾಗಿರುತ್ತದೆ. ಊಟ ಮುಗಿದ ಮೇಲೆ ಇಡೀ ರಾತ್ರಿ ವಿವಾಹದ ರೂಢಿ ಸಂಪ್ರದಾಯಗಳು ನೆರವೇರುತ್ತವೆ.

**ರಾತ್ರಿ ವೇಳೆಯಲ್ಲಿ ನಡೆಯುವ ವಿವಾಹದ ಕಾರ್ಯಕ್ರಮಗಳು :**

ಮಧ್ಯಯುಗದಲ್ಲಿ ಮೊಗಲ ಸೈನಿಕರು ವಿವಾಹವಾಗುವ ಲಂಬಾಣಿ ಕನ್ಯೆಯರನ್ನು ಹಗಲಿನಲ್ಲಿ ಅಪಹರಿಸುತ್ತಿದ್ದರಿಂದ ಲಂಬಾಣಿಗರ ವಿವಾಹಗಳು ರಾತ್ರಿ ವೇಳೆಯಲ್ಲಿ ಜರುಗುತ್ತಿದ್ದವು. (ರಾಂಪುರೆ;1975: 150)[26] ಈ ಕಾರಣಕ್ಕಾಗಿ ಲಂಬಾಣಿಗರು ರಾತ್ರಿ ವೇಳೆಯಲ್ಲಿ ವಿವಾಹ ನೆರವೇರಿಸುತ್ತಾರೆ. ಹಾಗೂ ವಿವಾಹ ಕಾರ್ಯಗಳು ನಡೆಯುವ ಸಂದರ್ಭದಲ್ಲಿ ಯಾವುದೇ ವಾದ್ಯಗಳನ್ನು ಬಾರಿಸುವುದಿಲ್ಲ ವಿವಾಹ ಕಾರ್ಯ ಮುಗಿಯುವವರೆಗೆ ಸ್ತ್ರೀಯರು ಹಾಡುವುದು ಕುಣಿಯುವುದು ಕಂಡುಬರುತ್ತದೆ. ಇತ್ತೀಚೆಗೆ ಇತರರಂತೆ ಲಂಬಾಣಿಗರು ವಿವಾಹದ ಸಂದರ್ಭದಲ್ಲಿ ವಾದ್ಯಗಳನ್ನು ಬಾರಿಸುವುದು ರೂಢಿಸಿಕೊಂಡಿದ್ದಾರೆ.

**ತಿಲಕ ಹಚ್ಚುವದು (ಟಿಕೋಲಗಾಡೆರೊ) :**

ಅರಿಶಿಣ ನೀರಿನಲ್ಲಿ ಬೆರೆಸಿ ಮದುಮಗಳ ಹಣೆಗೆ ಅವಳ ಹಿರಿಯ ಸಹೋದರ ತಿಲಕ ಇಡುತ್ತಾನೆ. ಆಗ ಮದುಮಗಳು ಸಹೋದರನೆ ನಾನು ಈಗ ಬೇರೆಯವರ ಮನೆಯವಳಾದೆ ಎಂದು ದುಃಖಿಸುತ್ತಾ ತನ್ನ ಭಾವನೆಗಳನ್ನು ಈ ರೀತಿ ವ್ಯಕ್ತಪಡಿಸುತ್ತಾಳೆ.

---

25. ಡಾ. ಹರಿಲಾಲ ಪವಾರ: (1996) 'ಲಂಬಾಣಿಗರಲ್ಲಿ ಮದುವೆ ಸಂಪ್ರದಾಯಗಳು' ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
26. ಡಾ. ಪುಷ್ಪಲತಾ ಬಿ. ರಾಂಪುರೆ, (1975) ಬಂಜಾರ ಲೋಕ ಸಾಹಿತ್ಯಕ ಮೌಲ್ಯಾಂಕನ

'ಮತ ಲಗಾಡೋರೆ ಈರೇಣಾ
ಇಣೆಚುಣೆ ಹಳದಿರೋ ಟಿಕೋ
ತಮಜೆ ಲಗಾಡಿಯತೋ
ತಮಾರಿ ಭೇನ ವೆರಾಣಿ ದಿಸ
ಮತಜೆ ಲಗಾಡೋರೆ ಈರೇಣಾ
ತಾರಿ ಮುಪಳಿಸಿ ಆಂಗಳಿನ ಈಟಿಕಬೂಲ ಕರೂ
ತಮಜೆ ಲಗಾಡಿಯತೋ ತಮಾರಿ ಭೇನ
ವೆರಾಣಿ ದಿಸ ಭೀಯಾ
ತಾರೇಜ ಕಾನೇನ ಕನಿಯಾ, ಕಬೂಲ ಕರಿಯತೋ
ಹಾತೇಮ ಕಳ್ಡಾ ಕಬೂಲ ಕರೂ ಈರಾ
ತೋನ ಕಬೂಲ ಕರೂಚು, ಈಟಿಕೋ ಲಗಾಡಮತ ಈರಾ'

ಸಾರಾಂಶ : ಸಹೋದರನೆ ಹಚ್ಚಬೇಡ ಆರಿಸಿ ತಂದ ಹಳದಿ ತಿಲಕ ನೀವು ತಿಲಕ ಹಚ್ಚಿದರೆ ನಿಮ್ಮ ಸಹೋದರಿ ಬೇರೆಯವರ ಮನೆಯವಳಾಗುತ್ತಾಳೆ. ನೀನು ಹಚ್ಚಿದ ಬೆರಳೇ ಸಾಕ್ಷಿ, ನೀವು ಹಚ್ಚಿದರೆ ನಿಮ್ಮ ಸಹೋದರಿ ಆಧಾರವಿಲ್ಲದವಳಾಗುತ್ತಾಳೆ. ನನ್ನ ಕಿವಿಯಲ್ಲಿರುವ ಓಲೆ ಇದಕ್ಕೆ ಸಾಕ್ಷಿ. ನನ್ನ ಕೈಬಳೆ ಸಾಕ್ಷಿ. ನಿನಗೆ ಉಂಗುರ ಹಾಕುವೆ ನನಗೆ ತಿಲಕ ಹಚ್ಚಬೇಡ. ಮದುಮಗಳಿಗೆ ತಿಲಕ ಹಚ್ಚಿದ ಮೇಲೆ ತನ್ನ ಅಂತರಂಗದ ನೋವನ್ನು ಹಾಡಿನ ಮುಖಾಂತರ ಹೇಳಿಕೊಳ್ಳುತ್ತಾಳೆ. (ಡಾ.ಹರಿಲಾಲ ಪವಾರ್ ಪುಟ-29) ನಂತರ ಮದುಮಗಳನ್ನು ಸಮಾಧಾನಗೊಳಿಸಿ ಕೂಡಿದ ಜನರಿಗೆ ಬೆಲ್ಲದ ಪಾನಕ ಮತ್ತು ಕಿಚಡಿ ಹಂಚುತ್ತಾರೆ. ಮದುಮಗ ಎಲ್ಲರಿಗೆ 'ಹೋಕಾ' ಸೇದಲು ಕೊಟ್ಟು, ನಮಸ್ಕರಿಸುತ್ತಾನೆ. ಇಲ್ಲಿಗೆ ತಿಲಕ ಹಚ್ಚುವ ಕಾರ್ಯ ಮುಗಿಯುತ್ತದೆ.

**ಅರಿಶಿಣ ಹಚ್ಚುವುದು (ಹಳದ ಲಗಾಡೆರೊ) :**

ಮುತ್ತೈದೆ ಸ್ತ್ರೀಯರೆಲ್ಲರೂ ಕೂಡಿಕೊಂಡು ಅರಿಶಿಣ, ಮದರಂಗಿ, ಹೆಸರುಬೇಳೆ, ಬೀಸಿ ಪುಡಿಮಾಡಿ ಎಣ್ಣೆಯಲ್ಲಿ ಬೆರೆಸಿ ಮದುಮಕ್ಕಳಿಗೆ ಹಚ್ಚುವುದೇ (ಹಳದ ಲಗಾಡೆರೊ) ಕಾರ್ಯವಾಗಿದೆ. ಇದು ಹಿಂದೂ ವಿವಾಹದಲ್ಲಿಯೂ ಕಂಡುಬರುತ್ತದೆ. ಈ ಸಂದರ್ಭದಲ್ಲಿ ಹೆಣ್ಣಿನ ಮತ್ತು ಗಂಡಿನ ಕಡೆಯ ಸ್ತ್ರೀಯರು ಹಾಡುಗಳನ್ನು ಹಾಡುತ್ತ ಮದುಮಕ್ಕಳಿಗೆ ಅರಿಶಿಣ ಹಚ್ಚುತ್ತಾರೆ.

**ವಿವಾಹ ಬಂಧನ (ವಾಯಾಭಾಂದೇರೊ) :**

ಲಂಬಾಣಿಗರ ವಿವಾಹದ ಬಹುಮುಖ್ಯವಾದ ಭಾಗವು ಮಧ್ಯರಾತ್ರಿಯಲ್ಲಿ ನೆರವೇರುತ್ತದೆ. 7 ಹೊಸ ಮಣ್ಣಿನ ಪಾತ್ರೆಗಳನ್ನು ತಂದು, ಸುಣ್ಣ, ಬಣ್ಣ ಬಳಿದು ಅಲಂಕರಿಸಿ ಒಂದರ ಮೇಲೊಂದರಂತೆ ಇಟ್ಟು ಎಕ್ಕೆಗಿಡದಿಂದ ಮುಚ್ಚಿ ಹಂದರದ ನಾಲ್ಕು ದಿಕ್ಕಿನಲ್ಲಿ ಇಡುತ್ತಾರೆ. ನಂತರ ಮನೆಯ ಬಾಗಿಲಿಗೆ ನೇರವಾಗಿ ಐದು ಇಂಚು ಅಂತರದಲ್ಲಿ ಎರಡು ಒನಕೆಗಳನ್ನು ನಿಲ್ಲಿಸಿ ಅವುಗಳ ತುದಿಗೆ ಎರಡೆರಡು ಅರಿಶಿಣಕೊಂಬು

ಮತ್ತು ಕೇರ, ಕವಡೆಗಳನ್ನು ಕರಿದಾರದಲ್ಲಿ ಪೋಣಿಸಿ ಕಟ್ಟುತ್ತಾರೆ. ಹಾಗೆಯೇ ಹಂದರದ ನಾಲ್ಕೂ ದಿಕ್ಕಿನಲ್ಲಿಯೂ ಅರಿಶಿಣ ಪೋಣಿಸಿದ ದಾರಗಳನ್ನು ಕಟ್ಟುತ್ತಾರೆ. ಮರದ ಹಲಗೆಯನ್ನು ಒನಕೆಗಳ ಸಮೀಪ ಇಟ್ಟು ಅದರ ಮೇಲೆ ಮದುಮಕ್ಕಳನ್ನು ಕೂಡಿಸಿ ಮೊದಲು ಮದುಮಗಳನ್ನು ಸ್ನಾನಮಾಡಿಸಿ ನಂತರ ಮದುಮಗನನ್ನು ಸ್ನಾನ ಮಾಡಿಸುವಾಗ ಮದುಮಗನ ತಲೆಯ ಮೇಲಿಂದ ಬೀಳುವ ನೀರನ್ನು ಸಂಗ್ರಹಿಸಿ ಅತ್ತೆ ಕುಡಿಯುತ್ತಾಳೆ. ಇದನ್ನು 'ಚೋಟಿರಪಾಣಿಪಿಯೆರೊ' ಎನ್ನುತ್ತಾರೆ. ಸ್ನಾಮಾಡಿಸುವಾಗ ಮದುಮಗನನ್ನು ಸ್ತ್ರೀಯರು ತಮಾಶೆಗಾಗಿ ಎಳೆದಾಡಿ ಬೀಳಿಸಲು ಪ್ರಯತ್ನಿಸತ್ತಾರೆ. ಇದನ್ನು ಲೇರಿಯಾ ತಡೆಯುತ್ತಿರುತ್ತಾನೆ. ನಂತರ ಮದುಮಗಳ ಚಿಕ್ಕ ಸಹೋದರಿ ಮದುಮಗನ ಕಾಲಿಗೆ ಕೆಂಪುಬಟ್ಟೆ ಕಟ್ಟುತ್ತಾಳೆ ಏಕೆಂದರೆ ಲಂಬಾಣಿಗರ ದೇವತೆಯ ಸಂಕೇತ ಕೆಂಪುಬಟ್ಟೆ, ಇದು ಎಲ್ಲರನ್ನು ರಕ್ಷಿಸುತ್ತದೆ ಎಂದು ಲಂಬಾಣಿಗರು ನಂಬಿದ್ದರಿಂದ ಮದುಮಕ್ಕಳಿಗೆ ಒಳ್ಳೆಯದಾಗಲೆಂದು ಕೆಂಪುಬಟ್ಟೆ ಮದುಮಗನ ಕಾಲಿಗೆ ಕಟ್ಟುತ್ತಾರೆ. ಇದನ್ನು 'ಖಾಸಡಾಭಾಂದೆರೊ' ಎನ್ನುತ್ತಾರೆ ಸ್ನಾನ ಮುಗಿದ ಮೇಲೆ ಕಾಲಿಗೆ ಕಟ್ಟಿದ ಕೆಂಪು ಬಟ್ಟೆಯನ್ನು ಬಿಚ್ಚಿ ಮನೆಯ ಮೇಲ್ಛಾವಣಿಗೆ ಕಟ್ಟುತ್ತಾರೆ.

**ಕಂಕಣ ಕಟ್ಟುವುದು (ಡೊರಣೊಭಾಂದೇರೊ) :**

ಮದುಮಕ್ಕಳಿಗೆ ಸ್ನಾನ ಮಾಡಿಸಿದ ನಂತರ ಕಟ್ಟಿಗೆಯ ಮಣೆಯ ಮೇಲೆ ಅಕ್ಕಪಕ್ಕದಲ್ಲಿ ಕೂಡ್ರಿಸಿ ಸುತ್ತಲೂ ಏಳು ತಾಮ್ರದ ಚರಿಗೆಗಳನ್ನಿಟ್ಟು ಮೂರು ಚರಿಗೆ ನೀರಿನಿಂದ ನಾಲ್ಕನ್ನು ಹಿಟ್ಟಿನಿಂದ ತುಂಬಿರುತ್ತಾರೆ. ಈ ಚರಿಗೆಗಳ ಬಾಯಿಯನ್ನು ಮದುಮಕ್ಕಳ ಕೈಗಳಿಂದ ಹಿಡಿಸುತ್ತಾರೆ. ಸುತ್ತಲೂ ಏಳು ಜನ ಮುತ್ತೈದೆ ಸ್ತ್ರೀಯರು ಕುಳಿತು ಚರಿಗೆಗಳ ಸುತ್ತ ದಾರವನ್ನು 7 ಸುತ್ತು ಸುತ್ತಿ ದಾರಕ್ಕೆ ಅರಿಶಿಣಹಚ್ಚಿ ಮದುಮಕ್ಕಳ ಕೈಗೆ ಕಟ್ಟುತ್ತಾರೆ. ಇದನ್ನು ಡೊರಣೊಭಾಂದೇರೊ, (ಕಂಕಣಕಟ್ಟುವುದು) ಎನ್ನುತ್ತಾರೆ. ನಂತರ ಒನಕೆಗಳ ಸುತ್ತಲೂ ಏಳು ಸಲ ಪ್ರದಕ್ಷಣೆ ಹಾಕುತ್ತಾರೆ. ಇದು ಸಪ್ತಪದಿ ಕಾರ್ಯವಾಗಿದೆ.

**ತಿಪ್ಪೆಶಾಸ್ತ್ರ (ಅಕೊಲ್ಡಿಧೊಗೇರೊ) :**

ಸಪ್ತಪದಿಯ ಕಾರ್ಯ ಮುಗಿದ ನಂತರ ಮದುಮಕ್ಕಳನ್ನು ತಿಪ್ಪೆಯ ಹತ್ತಿರ ಕರೆದುಕೊಂಡು ಹೋಗಿ ನಿಲ್ಲಿಸಿ ಲಿಂಬೆಹಣ್ಣು ಹಸಿರುಗಾಜಿನ ಬಳೆಗಳನ್ನು ಏಳುಸಲ ಅವರ ಮೇಲೆ ಇಳಿಸಿ ಎಸೆಯುತ್ತಾರೆ. ಲಂಬಾಣಿಗರು ತಮ್ಮ ಸಂಪತ್ತನ್ನು ಕಸದ ತಿಪ್ಪೆಗಳಲ್ಲಿ ಬಚ್ಚಿಡುತ್ತಿದ್ದರಿಂದ ಸಂಪತ್ತಿನ ಮೂಲವಾದ ತಿಪ್ಪೆಯನ್ನು ನಮಸ್ಕರಿಸಿಸುತ್ತಾರೆ. ನಂತರ ಕೊಡಲಿಯಿಂದ ಗೆರೆಕೊರೆದು ಹಿಂತಿರುಗುತ್ತಾರೆ. ಹೀಗೆ ಮಾಡುವುದನ್ನು 'ಅಕೊಲ್ಡಿಧೊಗೇರೊ' ಎಂದು ಕರೆಯುತ್ತಾರೆ.

**ಮಣ್ಣಿನ ಪ್ಲೇಟನ್ನು ಒಡೆಯುವುದು (ಧೋಸಕ್ಯಾಪೋಡೆರೊ) :**

ತಿಪ್ಪೆಶಾಸ್ತ್ರ ಕಾರ್ಯ ಮುಗಿದ ಮೇಲೆ ಮದುಮಗನಿಗೆ ಮರದ ಹಲಗೆಯ ಮೇಲೆ ನಿಲ್ಲಿಸಿ ಅವನ ಸೊಸೆಯು ಪಾದರಕ್ಷೆಗಳನ್ನು ಬಿಚ್ಚಿ 5 ರೂಪಾಯಿ ಕಾಣಿಕೆಯನ್ನು ಪಡಿಯುತ್ತಾಳೆ. ನಂತರ ಇದೆ ರೀತಿ ನಾಲ್ಕೈದು ಸ್ತ್ರೀಯರು ಮಾಡುತ್ತಾರೆ. ಇದಾದ ಮೇಲೆ ಅವನ ಸೊಸೆ ಪಾದರಕ್ಷೆಗಳನ್ನು ಹಾಕಿಕೊಳ್ಳಲು ಕೊಟ್ಟು ಮತ್ತೆ 5 ರೂಪಾಯಿ ಮದುಮಗನಿಂದ ಪಡೆಯುತ್ತಾಳೆ. ನಂತರ ಅವಳು ಒಂದು ಮಣ್ಣಿನ ಪ್ಲೇಟನ್ನು

ತಂದು ಮದುಮಗನ ಕಾಲಿನ ಹತ್ತಿರ ಹಿಡಿಯುತ್ತಾಳೆ ಮದುಮಗ ಕಾಲನ್ನು ನೆಲಕ್ಕೆ ತಾಕಿಸದೆ ಪ್ಲೇಟನ್ನು ಒಂದೆ ಏಟಿಗೆ ಕಾಲಿನಿಂದ ಹೊಡೆದು ಒಡೆಯುವುದನ್ನು 'ಡೊಸಕ್ಯಾಫೋಡೆರೋ' ಎನ್ನುತ್ತಾರೆ. ನಂತರ ಅತ್ತೆ ಎರಡು ಕಲ್ಲಿನ ಹರಳುಗಳಿಂದ ಮದಮಗನ ಕಿವಿಗೆ ಒತ್ತಿಹಿಡಿದು ತನ್ನ ಮಗಳಿಗೆ ತೊಂದರೆಯಾಗದಂತೆ ನೋಡಿಕೊಳ್ಳಬೇಕೆಂದು ಪ್ರಮಾಣ ಮಾಡಿಸಿ ಅವನಿಂದ ನಾಲ್ಕೈದು ರೂಪಾಯಿ ಕಾಣಿಕೆ ಪಡೆಯುತ್ತಾಳೆ. ಇದಾದ ಮೇಲೆ ಮದುಮಕ್ಕಳನ್ನು ಕೂಡ್ರಿಸಿ ಪರಸ್ಪರರಿಂದ ಕಂಕಣಗಳನ್ನು ಬಿಚ್ಚಿಸುತ್ತಾರೆ. ಇದನ್ನು 'ಡೊರಣಭೋಡಾಯೇರೊ' ಎನ್ನುತ್ತಾರೆ. ನಂತರ ಕೂಡಿದ ಜನರ ಮುಂದೆ ನೀರಿನ ಆಟ ಆಡಿಸುತ್ತಾರೆ. ಒಂದು ತಟ್ಟೆಯಲ್ಲಿ ಅಕ್ಕಿಗಂಜಿಯ ನೀರು. ನಾಣ್ಯ ಹಾಕಿ, ಅದನ್ನು ಮದುಮಕ್ಕಳಿಬ್ಬರಿಗೂ ಹುಡುಕಲು ಹಚ್ಚುವದನ್ನು 'ಮಾಂಡ' ಆಡಿಸುವದು ಎನ್ನುತ್ತಾರೆ. ಈ ಆಟ ಬಹಳ ಸಂತಸಮಯವಾಗಿರುತ್ತದೆ.

**ಮಾಂಗಲ್ಯಧಾರಣ (ತಾಳಿಭಾಂದೆರೊ) :**

ಲಂಬಾಣಿಗರ ವಿವಾಹದ ಹಲವು ಹಂತಗಳಲ್ಲಿ ಮಾಂಗಲ್ಯ ಧಾರಣವು ಮಹತ್ವದ ಸ್ಥಾನ ಪಡೆದಿದೆ. ಇವರಲ್ಲಿ ಮಾಂಗಲ್ಯಧಾರಣ ಬೇರೆ ಸ್ವರೂಪದ್ದಾಗಿದೆ. ಕೂದಲಿಗೆ ಇಳಿಬಿಟ್ಟ ಘುಗರಿ, ಮತ್ತು ತೋಳುಗಳಿಗೆ ಹಾಕಿರುವ ಚೂಡೋ (ದಂತದ ಬಳೆಗಳು) ಮಾಂಗಲ್ಯ ಸೂಚಕವಾಗಿವೆ. ಇವುಗಳನ್ನು ಮದುಮಗಳಿಗೆ ಹಾಕುತ್ತಾರೆ. ಆಗ ಮದುಮಗಳು ಕುಟುಂಬದ ಸದಸ್ಯರನ್ನು ಗುಣಗಾನ ಮಾಡಿ ಅಳುತ್ತಾಳೆ. ನಂತರ ಮದುಮಗ ತಂದ ಉಡುಪುಗಳನ್ನು ತೊಡಿಸುತ್ತಾರೆ. ಆಗ ಬಂಧುಭಾಂಧವರು ಕಾಣಿಕೆಗಳನ್ನು ಸಲ್ಲಿಸಿ ಎಲ್ಲರಿಗೆ ಸಿಹಿಊಟ ಹಾಕುತ್ತಾರೆ. ಇತ್ತೀಚೆಗೆ ಲಂಬಾಣಿಗರು ಹಿಂದೂ ವಿವಾಹದಲ್ಲಿ ಮಾಂಗಲ್ಯಧಾರಣ ಮಾಡುವ ಪದ್ಧತಿ ಅನುಸರಿಸುತ್ತಿದ್ದಾರೆ.

**ಗೋಟ ಸಂಪ್ರದಾಯ :**

ವಿವಾಹ ಮುಗಿಸಿ ಮದುಮಗಳನ್ನು ಗಂಡನ ಮನೆಗೆ ಕಳುಹಿಸುವ ಮೊದಲದಿನ ರಾತ್ರಿ ವಿವಾಹವಾದ ಮದುಮಕ್ಕಳಿಗೆ ಒಳ್ಳೆಯದಾಗಲೆಂದು ಪೂರ್ವಜರ ಹೆಸರಿನ ಮೇಲೆ ಒಂದು ಆಡಿನ ಮರಿಯನ್ನು ಬಲಿಕೊಟ್ಟು ಪೂಜಿಸಿ ತಾಂಡಾದ ಜನರಿಗೆ ಮಾಂಸದೂಟ ಹಾಕಿ ಮದುಮಕ್ಕಳು ಆಶೀರ್ವಾದ ಪಡೆಯುತ್ತಾರೆ. ಇದಕ್ಕೆ ತಗುಲುವ ಖರ್ಚು ವೆಚ್ಚಗಳನ್ನು ಮದುಮಗ ಭರಿಸುತ್ತಾನೆ.

**ಮದುಮಕ್ಕಳಿಗೆ ಬೀಳ್ಕೊಡುವ ಸಮಾರಂಭ (ತಾಂಗಡಿವಳಾಯೆರೊ) :**

ಹೆಣ್ಣಿನ ಮನೆಯಲ್ಲಿ ವಿವಾಹದ ಎಲ್ಲಾ ಕಾರ್ಯಗಳು ಮುಗಿದ ಮೇಲೆ ಕೊನೆಯದಾಗಿ ತಾಂಡಾದ ಜನರೆಲ್ಲರೂ ಸೇರಿ ಮದುಮಕ್ಕಳನ್ನು ಬೀಳ್ಕೊಡುವ ಸಮಾರಂಭ ಅತ್ಯಂತ ದುಃಖದಿಂದ ಕೂಡಿರುತ್ತದೆ. ದುಃಖಿತಳಾದ ಮದುಮಗಳನ್ನು ಮನೆಯಿಂದ ಹೊರತಂದು, ಅವಳ ಅವಶ್ಯಕ ವಸ್ತುಗಳನ್ನು ಒಂದು ಪೆಟ್ಟಿಗೆಯಲ್ಲಿ ಹಾಕಿ ಎತ್ತಿನ ಮೇಲೆ ಕೂಡಿಸಿ ಬೀಳ್ಕೊಡುತ್ತಾರೆ. ಮದುಮಗಳು ತನ್ನ ಎರಡೂ ಕೈಗಳನ್ನು ಮೇಲಕ್ಕೆ ಎತ್ತಿ ತಾನು ಹುಟ್ಟಿ ಬೆಳೆದ ತಾಂಡಾದ ನಾಯಕ ಹಾಗೂ ಬಂಧು-ಬಾಂಧವರನ್ನು ಗುಣಗಾನ ಮಾಡಿ ಅಳುವುದನ್ನು 'ಹವೇಲಿ' ಎನ್ನುತ್ತಾರೆ. ಮದುಮಗಳು ಹವೇಲಿ ಮಾಡುವುದನ್ನು ಮುಂದಿನಂತೆ ನೋಡಬಹುದು.

'ಹವೇಲಿಯೇ ಯಾ ಅಹಿಯಾss
ಹೋಟೋ ಘರ ಆಂವುತೋ
ಮಾರೇ ನಾಯಕ ಬಾಪುರಿ ನಂಗರಿ
ಹರಿವೇಸ ಹರಿಯಾಳಿರೇಸ
ಹವೇಲಿಯೇ ಯಾ ಅಹಿಯಾss
ಘುಲರಾಸು ವದೇಸ, ವಡಲಾಸು ಫೇಲೇಸ
ಕಡಿಯಾದೇಕ ಪೇರಿ ಉಬನಾದೇಕ ಓಡಿ
ತೋಡಾ ತೋಡಾ ಕರ ಸಾಸಿ
ಕೋಡಿ ಕೋಡಿ ಕರ ಮಾಯಾ ಜೋಡಿ
ಹವೇಲಿಯೇ ಯಾ ಅಹಿಯಾss
ಚಾಂದಾ ಸೂರಿಯಾರಿ ಜೋಡಿ
ಕೂಂ ತಪ ಜೂ ಮಾರೇ
ಪಾಂಚಿನ ಪಾಂಚಿ ದಸಿ ಭಾಯಿರಿ
ಜೋಡಿ ತಪೇಸ
ಹವೇಲಿಯೇ ಯಾ ಅಹಿಯಾss

**ಸಾರಾಂಶ :** ಓನನ್ನ ಹಡೆದ ತಾಯೆ, ಹಿಂತಿರುಗಿ ಬಂದರು ನನ್ನ ನಾಯಕ ತಂದೆಯ ತಾಂಡೆ ಹಸಿರು ಹುಲ್ಲಿನಂತೆ ನಿತ್ಯ ಹಸಿರಾಗಿರು. ಓನನ್ನ ಹಡೆದ ತಾಯೆ, ಅತ್ತಿಯ ಗಿಡದಂತೆ ಬೆಳೆದು ಆಲದಮರದಂತೆ ಪಸರಿಸು. ಹೊಸಬಟ್ಟೆ ತೊಟ್ಟಿಕೊಂಡು ಓಢಣೆ ಹೊದ್ದಿಕೊಂಡೆ ವಿವಿಧ ದಾರಗಳಿಂದ ಉಡುಪು ಸಿದ್ಧಪಡಿಸಿದೆ. ಪ್ರೀತಿ ವಿಶ್ವಾಸಗಳಿಂದ ಮನವೊಲಿಸಿದೆ. ಓನನ್ನ ಹಡೆದ ತಾಯೇ, ಚಂದ್ರ ಸೂರ್ಯರ ಜೋಡಿಯಂತೆ ನನ್ನ ಐದು ಹತ್ತು ಸಹೋದರರು ಕೂಡಿರಲಿ. ಅವರಿಗೆ ತುಷ್ಟಿ, ಪುಷ್ಟಿ, ಸಂತುಷ್ಟಿ ದೊರೆಯಲೆಂದು ದೇವರಲ್ಲಿ ಪ್ರಾರ್ಥಿಸುವೆ. (ಡಾ.ಹರಿಲಾಲ ಪವಾರ್ 1996 ಪುಟ-47) ದುಃಖಿತಳಾದ ಮದುಮಗಳನ್ನು ಸಮಾಧಾನಗೊಳಿಸಿದ ನಂತರ ತಂದೆ ತಾಯಿಗಳು ಬಂಧುಬಾಂಧವರು, ಮದುಮಕ್ಕಳನ್ನು ಆಶೀರ್ವದಿಸಿ ಬೀಳ್ಕೊಡುತ್ತಾರೆ. ಈ ರೀತಿ ಹೊರಟ ನಿಬ್ಬಣ ಸಾಯಂಕಾಲ ಗಂಡಿನ ಊರನ್ನು ಸೇರುತ್ತದೆ. ಇದನ್ನು 'ತಾಂಗಡಿ' ಎನ್ನುತ್ತಾರೆ. ವಿವಾಹವಾಗಿ ಬಂದ ಮದುಮಕ್ಕಳನ್ನು ಕುಟುಂಬದ ಸದಸ್ಯರು, ಹಾಗೂ ತಾಂಡಾದ ಜನರು ಬರಮಾಡಿಕೊಂಡು ಐದು ಜನ ಮುತ್ತೈದೆ ಸ್ತ್ರೀಯರು ಮದುಮಗಳನ್ನು ಬಲಗಾಲಿರಿಸಿ ಮನೆಯೊಳಗೆ ಪ್ರವೇಶ ಮಾಡಿಸುತ್ತಾರೆ. ನಂತರ ಕಂಬಳಿಯ ಮೇಲೆ ಕೂಡಿಸಿ ತುಪ್ಪದ ಲೋಟದಲ್ಲಿ ಏಳು ಬಾರಿ ಕೈಹಾಕಿಸುತ್ತಾರೆ ನಂತರ ಮದುಮಕ್ಕಳ ಮಡಿಲಲ್ಲಿ ಸಣ್ಣ ಮಕ್ಕಳನ್ನು ಕೂಡಿಸುತ್ತಾರೆ.

ಮಾರನೆಯ ದಿನ ಮದುಮಗಳು ಬೆಳಿಗ್ಗೆ ತಾಂಡಾದ ಪ್ರತಿಯೊಂದು ಮನೆಗೆ ಹೋಗಿ, ಹಿರಿಯರಿಗೆ ನಮಸ್ಕರಿಸಿ ಹಲ್ಲುಜ್ಜಲು ಬೇವಿನ ಕಡ್ಡಿಗಳನ್ನು ಕೊಟ್ಟು ಬರುತ್ತಾಳೆ. ವಿವಾಹವಾಗಿ ಬಂದ ಮದುಮಗಳನ್ನು ತಾಂಡಾದ ಜನರಿಗೆ ಪರಿಚಯಿಸುವ ಉದ್ದೇಶದಿಂದ ಹೀಗೆ ಮಾಡುತ್ತಾರೆ. ಸಾಯಾಂಕಾಲ ಮದುಮಗಳು

ತನ್ನ ಜೊತೆ ತಂದ ಸಾಮಾನುಗಳನ್ನು ತಾಂಡಾದ ಜನರಿಗೆ ತೋರಿಸುತ್ತಾರೆ. ಇದನ್ನು 'ತಾಂಗಡಿಯೋಳೇರೊ' ಎಂದು ಕರೆಯುತ್ತಾರೆ. ನಂತರ ಹೆಣ್ಣಿನ ಮನೆಯಿಂದ ಕಳುಹಿಸಿಕೊಟ್ಟ ಕೊಬ್ಬರಿ-ಬೆಲ್ಲ ಕೂಡಿದ ಜನರಿಗೆ ಹಂಚುವದರೊಂದಿಗೆ ಲಂಬಾಣಿಗರ ವಿವಾಹದ ಕಾರ್ಯಗಳು ಕೊನೆಗೊಳ್ಳುತ್ತವೆ.

**ಧಾರ್ಮಿಕ ಆಚರಣೆಗಳು (Religious Practices) :**

ಭಾರತದಲ್ಲಿ ವಾಸಿಸುವ ಪ್ರತಿಯೊಂದು ಜನಾಂಗಕ್ಕೆ ತಮ್ಮದೆ ಆದ ಧರ್ಮವಿದೆ. ಆಯಾ ಧರ್ಮಕ್ಕೆ ಅನುಗುಣವಾಗಿ ಆಚಾರ-ವಿಚಾರಗಳು, ಸಂಪ್ರದಾಯಗಳು, ಕಂಡುಬರುತ್ತವೆ. ಧರ್ಮವು ಜನರ ಸಾಮಾಜಿಕ ಜೀವನದ ಮೇಲೆ ಆಳವಾದ ಪ್ರಬಾವ ಬೀರುತ್ತದೆ. ಅಲೆಮಾರಿಗಳಾದ ಲಂಬಾಣಿಗರು ತಮ್ಮದೆ ಆದ ಧಾರ್ಮಿಕ ಆಚರಣೆಗಳನ್ನು ಹೊಂದಿದ್ದು, ಅವುಗಳನ್ನು ಇವತ್ತಿಗೂ ಮುಂದುವರಿಸಿಕೊಂಡು ಹೋಗುತ್ತಿದ್ದಾರೆ. ಸಮಾಜ ಬದಲಾಗುತ್ತಿದ್ದರೂ ಇವರು ತಮ್ಮ ಮೂಲ ಸಂಸ್ಕೃತಿಯಲ್ಲಿ ಬದಲಾಗಿಲ್ಲ. ಇವರು ಹಿಂದೂಧರ್ಮ ಅವಲಂಬಿಸಿದ್ದರೂ, ಭಿನ್ನವಾದ ಆಚಾರ-ವಿಚಾರ, ಸಂಪ್ರದಾಯಗಳನ್ನು ಹೊಂದಿದ್ದಾರೆ. ಹಿಂದೂಗಳು ಪೂಜಿಸುವ ವೆಂಕಟೇಶ್ವರ, ಹನುಮಂತ, ಶಿವ, ವಿಷ್ಣು, ಕೃಷ್ಣ, ಲಕ್ಷ್ಮಿ ಮುಂತಾದ ದೇವಾನು ದೇವತೆಗಳನ್ನು ಅವರದೇ ಆದ ವಿಧಾನದಲ್ಲಿ ಪೂಜಿಸುತ್ತಾರೆ. ಮೊದಲಿನಿಂದಲೂ ಇವರು ಸ್ತ್ರೀ ದೇವತೆಗಳಾದ ತುಳಜಾಭವಾನಿ, ಮರಿಯಮ್ಮ, (ಮಾರಿಕಾಂಬಾ) ಕಂಕಾಳಿ, (ಚಾಮುಂಡಿ) ಹುಲಿಗೆಮ್ಮ, ದುರ್ಗಾದೇವಿ, ಇಂಗಳಭವಾನಿ, ಈ ದೇವತೆಗಳನ್ನು ತಮ್ಮ ಕುಲದೇವತೆಗಳೆಂದು ಪರಿಗಣಿಸಿ ಪೂಜಿಸುತ್ತಾರೆ. ಲಂಬಾಣಿಗರು ಪೂರ್ವಜರ ಆತ್ಮಗಳಲ್ಲಿ ನಂಬಿಕೆ ಇರಿಸಿದ್ದರಿಂದ ಪೂರ್ವಜರಿಗೆ ಪೂಜೆ ಸಲ್ಲಿಸುತ್ತಾರೆ. ಇವುಗಳ ಜೊತೆಗೆ ಲಂಬಾಣಿಗರ ಗುರು ಎಂದೇ ಪ್ರಸಿದ್ಧಿ ಪಡೆದ ಸೇವಾಲಾಲರನ್ನು ಪೂಜಿಸುತ್ತಾರೆ. ಇವರು ದೀಪಾವಳಿ, ಹೋಳಿಹಬ್ಬ, ಸಸಿಹಬ್ಬ, (ಗೋದಿಹಬ್ಬ) ದಸರಾ ಮುಂತಾದವುಗಳನ್ನು ಅತಿ ಸಂಭ್ರಮದಿಂದ ಆಚರಿಸುತ್ತಾರೆ. ಪ್ರತಿಯೊಂದು ಲಂಬಾಣಿ ತಾಂಡಾಗಳಲ್ಲಿ ಸೇವಾಲಾಲರ ಮತ್ತು ಮರಿಯಮ್ಮ ದೇವಿಯ ದೇವಾಸ್ಥಾನಗಳು ಕಂಡುಬರುತ್ತವೆ. ಇವುಗಳ ಮೇಲೆ ಕೆಂಪು, ಮತ್ತು ಬಿಳಿ ಬಣ್ಣದ ಧ್ವಜಗಳಿದ್ದು, ಕೆಂಪುಧ್ವಜ ಮರಿಯಮ್ಮ ದೇವಿಗೆ ಸೇರಿದ್ದು ಬಿಳಿಯ ಬಣ್ಣದ ಧ್ವಜ ಸೇವಾಲಾಲರಿಗೆ ಸೇರಿದ್ದಾಗಿದೆ. ಈ ಧ್ವಜಗಳು ತಾಂಡಾದ ಜನರನ್ನು ವಿವಿಧ ಸಾಂಕ್ರಮಿಕ ರೋಗಗಳಿಂದ ರಕ್ಷಿಸುತ್ತವೆಂದು ನಂಬಿದ್ದಾರೆ. ಸಾಂಕ್ರಮಿಕ ರೋಗ ಬಂದರೆ, ಗೂಬೆ ಕೂಗಿದರೆ ಲಂಬಾಣಿಗರು ಈ ದೇವಾಲಯಗಳಿಗೆ ಪೂಜೆ ಸಲ್ಲಿಸುತ್ತಾರೆ. ಈ ಮೇಲಿನ ದೇವರ್ತೆಗಳನ್ನು ಆರಾಧಿಸುವದಲ್ಲದೆ ಸಾತಿಸತ್ತಿ, ಹಾಗೂ ಸಾತಿಭವಾನಿ, (ಏಳುಜನ ಸಹೋದರಿಯರು) ದೇವತೆಗಳನ್ನು ಪೂಜಿಸುತ್ತಾರೆ. 'ಸಾತಿಸತ್ತಿ' ಎಂಬ ಏಳು ಸಹೋದರಿಯರು ರಾಜನ ಹೆಂಡತಿಯರಾಗಿದ್ದು ಏಳು ಸಹೋದರಿ ದೇವತೆಗಳೆಂದರೆ ಹೊನಾಸತ್ತ, ಸೀತಾಸತ್ತಿ, ಕೇಸಿರಾಣಿ, ಭೀಮಾಸತ್ತಿ, ತಳಜಾಸತ್ತಿ, ತೋಳಾಸತ್ತಿ, ರೂಪಸತ್ತಿ ಈ ಒಬ್ಬೊಬ್ಬ ಸಹೋದರಿ ದೇವತೆಗಳನ್ನು ತಮ್ಮ ಕುಲದೇವತೆಗಳೆಂದು ಪರಿಗಣಿಸಿ, ಸಿಹಿ ನೈವೇದ್ಯ ಮಾಡಿ ಪೂಜಿಸುತ್ತಾರೆ.

ಸಾತಿಸತ್ತಿಯರನ್ನು ಪೂಜಿಸುವಂತೆ ಸಾತಿಭವಾನಿ ಎಂಬ ದೇವತೆಗಳನ್ನು ಆದಿಶಕ್ತಿಗಳು ಎಂದು ತಿಳಿದು ಹೊಲಗದ್ದೆ ಮತ್ತು ತಾಂಡಾದ ಮಧ್ಯಭಾಗದಲ್ಲಿ ಏಳು ಚಿಕ್ಕ ಚಿಕ್ಕ ಕಲ್ಲುಗಳನ್ನಿಟ್ಟು, ಪ್ರತಿಷ್ಠಾಪಿಸಿ ಪೂಜಿಸುತ್ತಾರೆ. ತುಳಜಾದೇವಿ, ಬೋಜರಿಮಾತಾ, ಶೀತಲಾಭವಾನಿ, ಮತರಾಲಭವಾನಿ, ವಾಗ್ದಾಯಿಭವಾನಿ, ಮಸೂರಭವಾನಿ ಮತ್ತು ಹಿಂಗಳಾದೇವಿ, ಈ ದೇವತೆಗಳು ಸಹೋದರಿಯರಾಗಿದ್ದು, ಶಕ್ತಿದೇವತೆಗಳೆಂದು

ಪರಿಗಣಿಸಿ ಬಲಿಕೊಟ್ಟು ಪೂಜಿಸುತ್ತಾರೆ. ಸಾತಿಸತ್ತಿ ಮನೆದೇವತೆ ಎಂದು ಪರಿಗಣಿಸಿ ಪೂಜಿಸುತ್ತಾರೆ, ಸಾತಿಭವಾನಿ, ಗ್ರಾಮದೇವತೆ ಎಂದು ಪರಿಗಣಿಸಿ ಇಡೀ ತಾಂಡಾದ ಜನರು ಸಾಮೂಹಿಕವಾಗಿ ಪೂಜಿಸುತ್ತಾರೆ.

**ಸೇವಾಭಾಯಾ :**

ಪ್ರತಿಯೊಂದು ಲಂಬಾಣಿ ತಾಂಡಾಗಳಲ್ಲಿ ಸೇವಾಲಾಲರನ್ನು ಪವಾಡಪುರುಷ ಗುರು, ಎಂದು ನಂಬಿ ದೇವಸ್ಥಾನ ನಿರ್ಮಿಸಿ ಪೂಜಿಸುತ್ತಾರೆ. ಬ್ರಹ್ಮಚಾರಿಯಾದ ಸೇವಾಲಾಲನ ಜನ್ಮಸ್ಥಳ ಕರ್ನಾಟಕದ ಮಂಗಳೂರು ಜಿಲ್ಲೆಯ 'ಗುತ್ತಿವಲ್ಲಾರಿ' ಎಂದು ಲಂಬಾಣಿಗರ ಅಭಿಪ್ರಾಯವಾಗಿದೆ. ಭೀಮಾನಾಯಕ ಮತ್ತು ಧರ್ಮಿಣಿಬಾಯಿ ಸೇವಾಲಾಲರ ತಂದೆ-ತಾಯಿಗಳು ಇವರಿಗೆ ವಿವಾಹವಾಗಿ 40 ವರ್ಷಕಳೆದರೂ ಮಕ್ಕಳಾಗುವುದಿಲ್ಲ. ಜನರು ಇವರನ್ನು ಬಂಜೆ ಎಂದು ಹೀಯಾಳಿಸುತ್ತಾರೆ. ಇದರಿಂದ ಬೇಸರಗೊಂಡ ಭೀಮಾನಾಯಕ, ಸಂತಾನ ಪ್ರಾಪ್ತಿಗಾಗಿ ಹನ್ನೆರಡು ವರ್ಷ ತಪಸ್ಸು ಮಾಡುತ್ತಾನೆ. ತಪಸ್ಸು ಮುಗಿಯುವ ಸಂದರ್ಭದಲ್ಲಿ ಶಿರಸಿಯ ಮಾರಿಕಾಂಬಾದೇವಿ ಪ್ರತ್ಯಕ್ಷಳಾಗಿ ನಿನಗೆ ನಾಲ್ಕು ಮಕ್ಕಳನ್ನು ನೀಡುತ್ತೇನೆ ಅವರಲ್ಲಿ ಹಿರಿಯ ಮಗನಿಗೆ ಸೇವಾಲಾಲ ಎಂದು ಹೆಸರಿಟ್ಟು ನನ್ನ ಸೇವೆ ಮಾಡಲು ಬಿಡಬೇಕು ಎಂದು ನುಡಿಯುತ್ತಾಳೆ. ದೇವಿ ನುಡಿದಂತೆ ನಾಲ್ಕು ಮಕ್ಕಳು ಜನಿಸುತ್ತಾರೆ. ಅವರಲ್ಲಿ ಮೊದಲು ಹುಟ್ಟಿದ್ದ ಮಗನಿಗೆ ದೇವಿಯ ಸೇವಕನನ್ನಾಗಿ ಮಾಡಲು ನಿರ್ಧರಿಸಿ ಸೇವಾಲಾಲ ಎಂದು ಹೆಸರಿಡುತ್ತಾರೆ. "ಭೀಮಾನಾಯಕನು ಸ್ವಲ್ಪ ಸಮಯ ಕಳೆದ ನಂತರ ಗುತ್ತಿವಲ್ಲಾರಿಯಿಂದ ವ್ಯಾಪಾರಕ್ಕಾಗಿ ಶಿರಸಿಗೆ ವಲಸೆ ಬಂದು ಅಲ್ಲಿ ವ್ಯಾಪಾರದಲ್ಲಿ ತೊಡಗಿದನು."[27] ಈ ಹೊತ್ತಿಗೆ ಸೇವಾಲಾಲ ದೊಡ್ಡವನಾಗಿ ಬೆಳೆದಿದ್ದ, ದೇವಿಯ ಆಜ್ಞೆಯಂತೆ ಸೇವಕನಾಗದೆ ಸಾಕ್ಯಾ, ಪಟ್ಯಾ, ಎಂಬ ಸಂಗಡಿಗರ ಜೊತೆ ದನಕಾಯಲು ತೊಡಗುತ್ತಾನೆ. ಒಮ್ಮೆ ದೇವಿ ಪ್ರತ್ಯಕ್ಷಳಾಗಿ ಶಾಪ ನೀಡಿದ್ದರಿಂದ ದನಕರುಗಳು, ಸೇವಾಲಾಲನ ಸಹೋದರರು ಸಾಯುತ್ತಾರೆ.

ಆಗ ಸೇವಾಲಾಲ ದುಃಖದಲ್ಲಿ ಕುಳಿತಾಗ ಮಾರಿಕಾಂಬಾದೇವಿ ಪ್ರತ್ಯಕ್ಷಳಾಗಿ 'ನೀನು ನನ್ನ ಸೇವಕನಾಗುವದಾದರೆ ನಿನ್ನ ತಮ್ಮಂದಿರನ್ನು ಮತ್ತು ಸತ್ತ ಜಾನುವಾರುಗಳನ್ನು ಮರಳಿ ಪಡೆಯಬಹುದು' ಎಂದಾಗ ಸೇವಾಲಾಲ ದೇವಿಯ ಮಾತಿಗೆ ಒಪ್ಪುತ್ತಾನೆ. ಸತ್ತ ಜಾನುವಾರುಗಳ, ಮತ್ತು ಸಹೋದರರ ಪ್ರಾಣ ಮರಳಿ ಪಡೆದು ದೇವಿಯ ಸೇವಕನಾಗುತ್ತಾನೆ. ನಂತರ ಇವರನ್ನು ಸೇವಾಲಾಲ ಎಂಬ ಹೆಸರಿನ ಬದಲಾಗಿ ಸೇವಾಭಾಯಾ ಎಂದು ಕರೆಯುತ್ತಾರೆ. ಸಮಯ ಗತಿಸಿದಂತೆ, ಸೇವಾಭಾಯಾನ ಪವಾಡಗಳಿಗೆ ಪ್ರಭಾವಿತರಾಗಿ ಲಂಬಾಣಿಗರು ಮಾರಿಕಾಂಬಾದೇವಿಯನ್ನು ಬಿಟ್ಟು ಸೇವಾಭಾಯಾರನ್ನು ಆರಾಧಿಸಲು ಪ್ರಾರಂಭಿಸುತ್ತಾರೆ. ಈ ಬೆಳವಣಿಗೆಯಿಂದ ಸಿಟ್ಟಿಗೆದ್ದ ದೇವಿ ಸೇವಾಭಾಯಾನ ಬ್ರಹ್ಮಚಾರಿ ವ್ರತ ಮುರಿಯಲು ಸಂಚುಹೂಡಿ ಸೇವಾಭಾಯಾನನ್ನು ವಿವಾಹವಾಗಲು ಆದೇಶಿಸುತ್ತಾಳೆ. ಇದನ್ನು ಒಪ್ಪದ ಸೇವಾಭಾಯಾ ಜಗತ್ತಿನಲ್ಲಿರುವ ಸ್ತ್ರೀಯರೆಲ್ಲರೂ ನನ್ನ ಸಹೋದರಿಯರು ಆದ್ದರಿಂದ ವಿವಾಹವಾಗುವುದಿಲ್ಲ ಎಂದು ಹೇಳುತ್ತಾನೆ. ಆಗ ಈ ನ್ಯಾಯ ತೀರ್ಮಾನಿಸಲು ದೇವಿ ದೇವಲೋಕಕ್ಕೆ ಹೋಗೋಣ ಎಂದು ಕೇಳಿಕೊಂಡಾಗ, ಸೇವಾಭಾಯಾ ಒಪ್ಪಿಕೊಂಡು ತನ್ನ ಸಹೋದರರಿಂದ ಬೇವಿನ ತಪ್ಪಲು ತರಿಸಿ ತಪ್ಪಲಿನ

27. ಡಾ. ಹರಿಲಾಲ ಪವಾರ, (1998) 'ಸಂತ ಸೇವಾಲಾಲ', ಗದಗ ಪ್ರಿಂಟಿಂಗ್ ಪ್ರೆಸ್, ಗದಗ, ಪುಟ.-55

ಹಾಸಿಗೆಯ ಮೇಲೆ ಮಲಗುತ್ತಾನೆ. ತನ್ನಿಂದ ತಾನೆ ಮೇಲೆ ಏಳುವವರೆಗೆ ತನ್ನನು ಯಾರೂ ಮುಟ್ಟಬಾರದೆಂದು, ಹಾಗೂ ಮೂರು ದಿನಗಳು ಕಳೆದ ಮೇಲೆ ಮರಳಿಬರುತ್ತೇನೆಂದು, ಬರುವ ತನಕ ನನ್ನ ದೇಹದ ನಾಲ್ಕೂ ಮೂಲೆಗಳಲ್ಲಿ ದೀಪಗಳನ್ನು ಹಚ್ಚಬೇಕು, ಮತ್ತು ಭಜನೆ ಮಾಡುತ್ತಿರಬೇಕೆಂದು, ಈ ವಿಷಯ ತನ್ನ ತಾಯಿಗೆ ತಿಳಿಸಕೂಡದೆಂದು ಹೇಳಿ ಬೇವಿನ ತಪ್ಪಲ ಹಾಸಿಗೆಯ ಮೇಲೆ ಮಲಗುತ್ತಾನೆ. ದೇವಿಯ ಜೊತೆಗೂಡಿ ಸೇವಾಲಾಲನ ಆತ್ಮ ದೇವಲೋಕ ಪ್ರವೇಶಿಸುತ್ತದೆ. ಬ್ರಹ್ಮನ ನ್ಯಾಯ ತೀರ್ಮಾನದಲ್ಲಿ ಸೇವಾಭಾಯಾನಿಗೆ ನ್ಯಾಯ ದೊರೆಯುತ್ತದೆ. ಇದರಿಂದ ಕೋಪಗೊಂಡ ಮಾರಿಕಾಂಬಾದೇವಿ ಕೊರವಂಜಿ ವೇಶಧರಿಸಿ ಸೇವಾಭಾಯಾನ ತಾಯಿಯ ಹತ್ತಿರ ಬಂದು ಸೇವಾಭಾಯಾ ಸತ್ತು ಮೂರುದಿನಗಳಾಗಿವೆ ಎಂಬ ವಿಷಯ ತಿಳಿಸುತ್ತಾಳೆ. ಆಗ ಆವೇಶದಲ್ಲಿ ಬಂದು ಧರಮಣಿಬಾಯಿ ಮಗನ ದೇಹವನ್ನು ಮುಟ್ಟುತ್ತಾಳೆ. ಆಗ ದೇಹದಿಂದ ಪ್ರಾಣಹಾರಿಹೋಗುತ್ತದೆ. ಹೀಗೆ ಮಹಾರಾಷ್ಟ್ರದ ಪೌರಾಗಡ ಎಂಬ ಸ್ಥಳದಲ್ಲಿ ಸೇವಾಭಾಯಾ ಪ್ರಾಣ ಬಿಡುತ್ತಾನೆ. ಅಂತ್ಯಸಂಸ್ಕಾರ ಮಾಡುವಾಗ ಬೆಂಕಿಯಿಂದ ಪ್ರತ್ಯಕ್ಷನಾಗಿ ನಾನು ಏಳನೆಯ ತಲೆಮಾರಿನಲ್ಲಿ ಮತ್ತೆ ಜನ್ಮತಾಳಿ ಬರುತ್ತೇನೆ ಹಾಗೂ ಹದಿನಾಲ್ಕನೆಯ ತಲೆಮಾರಿನಲ್ಲಿ 'ಗುತ್ತಿವಲ್ಲಾರಿ'ಯಲ್ಲಿ ಪುನರ್‌ಜನ್ಮ ಪಡೆಯುತ್ತೇನೆ ಎಂಬ ಸಂದೇಶ ನೀಡಿದನು. ಇದೇ ಪ್ರಕಾರ ಏಳನೆಯ ಅವತಾರ ಪುರುಷನಾಗಿ ಸೇವಾಭಾಯಾ ಮಹಾರಾಷ್ಟ್ರರಾಜ್ಯದಲ್ಲಿ ಕಾಣಿಸಿಕೊಂಡಿದ್ದಾನೆ. ಇಂದು ಪ್ರತಿಯೊಂದು ತಾಂಡಾದಲ್ಲಿ ಸೇವಾಭಾಯಾ ಲಂಬಾಣಿಗರಿಗೆ ಬರುವ ಕಷ್ಟ-ಕಾರ್ಪಣ್ಯಗಳನ್ನು ದೂರಮಾಡುವನೆಂದು ನಂಬಿ ಭಕ್ತಿಯಿಂದ ಪೂಜಿಸುತ್ತಾರೆ.

**ದೀಪಾವಳಿ ಹಬ್ಬ ಆಚರಣೆ :**

ಭಾರತೀಯ ಹಬ್ಬಗಳಲ್ಲಿ ದೀಪಾವಳಿ ಅತ್ಯಂತ ಪ್ರಮುಖವಾದ ರಾಷ್ಟ್ರೀಯ ಹಬ್ಬವಾಗಿದ್ದು ಭಾರತದಾದ್ಯಂತ ಇದನ್ನು ವಿಜೃಂಭಣೆಯಿಂದ ಆಚರಿಸುತ್ತಾರೆ. ಇದು ದೀಪಗಳ ಹಬ್ಬವಾಗಿದೆ. ದೀಪಗಳನ್ನು ಅಲಂಕರಿಸಿ ಲಕ್ಷ್ಮೀದೇವಿಯನ್ನು ಆರಾಧಿಸುತ್ತಾರೆ. ದೀಪಾವಳಿ ಹಬ್ಬವನ್ನು ಲಂಬಾಣಿಗರು ಬೇರೆ ವಿಧಾನದಲ್ಲಿ ಆಚರಿಸುತ್ತಾರೆ. ಇವರು ದೀಪಾವಳಿಯನ್ನು 'ದವಾಳಿ' 'ಕಾಳಿ ಅಮಾವಾಸ' (ಕಾಳಿಕಾದೇವಿಯ ಅಮಾವಾಸ್ಯೆ) ಎಂದು ಕರೆಯುತ್ತಾರೆ. ದೀಪಾವಳಿಯ ದಿನ ಲಂಬಾಣಿ ಜನರು ಸಾಮೂಹಿಕವಾಗಿ 'ಕಂಕಾಳಿಗೆ' (ಲಂಬಾಣಿಗರ ದೇವತೆ) ಹೋತಮರಿಯನ್ನು ಬಲಿಕೊಟ್ಟು ಪೂಜಿಸುತ್ತಾರೆ. ಹಿಂದೂ ಸಂಪ್ರದಾಯದಂತೆ ರಾತ್ರಿ ಲಕ್ಷ್ಮೀದೇವಿಗೆ ಕಾಯಿ, ಕರ್ಪೂರ ಇಟ್ಟು ಪೂಜಿಸುತ್ತಾರೆ. ರಾತ್ರಿ ತಾಂಡಾದ ಅವಿವಾಹಿತ ಯುವತಿಯರು ಸೇರಿ ಕೈಯಲ್ಲಿ ಹಣತೆ ಹಿಡಿದುಕೊಂಡು ಮೊದಲು ತಾಂಡಾದ ನಾಯಕನ ಮನೆಯ ಮುಂದೆ ದೀಪ ಬೆಳಗಿಸಿ ಮೇರಾ (ಆರತಿ) ಮಾಡಿ ನಂತರ ತಮ್ಮ ಬಂಧು-ಭಾಂಧವರ ಮೆನೆ-ಮನೆಗೆ ಹೋಗಿ ಆಯಾ ಮನೆಯ ಕುಲದೇವತೆ, ಗುರುಹಿರಿಯರಿಗೆ ಬಂಧು-ಬಳಗದವರ ಪ್ರತಿಯೊಬ್ಬರ ಹೆಸರನ್ನು ಕರೆದು ಹಾಡುತ್ತ ಸಾಮೂಹಿಕವಾಗಿ ಆರತಿ ಮಾಡುತ್ತಾರೆ. ಇದನ್ನು 'ಮೇರಾ ಕರೇರೋ' ಎಂದು ಕರೆಯುತ್ತಾರೆ. ನಂತರ ಕಾಣಿಕೆಯ ರೂಪದಲ್ಲಿ ಬಂಧು-ಬಾಂಧವರು ಯುವತಿಯರ ಹಣತೆಯಲ್ಲಿ ಹಣ ಹಾಕುತ್ತಾರೆ. ಮುಂದಿನ ದೀಪಾವಳಿ ಬರುವುದರೊಳಗಾಗಿ ತಾವು ವಿವಾಹವಾಗಿ ಹೋಗಿ ಬಿಡಬಹುದು. ನಂತರ ಮೇರಾ ಮಾಡಲು ಅನರ್ಹರಾಗುತ್ತೇವೆಂದು ಯುವತಿಯರು ಈ ಸಂದರ್ಭದಲ್ಲಿ ದುಃಖಿಸುತ್ತಾರೆ.

ಮಾರನೆಯ ದಿನ ಬೆಳಿಗ್ಗೆ ಲಂಬಾಣಿಗರು ತಮ್ಮ ಕುಟುಂಬದಲ್ಲಿ ಮರಣ ಹೊಂದಿದ ಪೂರ್ವಜರಿಗೆ ಅಗ್ರಪೂಜೆ ಸಲ್ಲಿಸುತ್ತಾರೆ. ಗೋದಿಯ ಹಿಟ್ಟಿನಿಂದ ಪಾಯಸ ತಯಾರಿಸಿ (ಲಾಪಸಿ) ಒಲೆಯ ಮುಂದೆ ಆಕಳಸಗಣಿ ಬಳಿದು ಪವಿತ್ರಗೊಳಿಸಿ ಪಾಯಸಕ್ಕೆ ತುಪ್ಪ ಬೆರೆಸಿ ಪೂರ್ವಜರ ಹೆಸರು ಹೇಳಿ ಎರಡು ಬಾರಿ ಉರಿಯುತ್ತಿರುವ ಅಗ್ನಿಯಲ್ಲಿ ಹೋಮ ಹಾಕುವುದನ್ನು 'ಧಬುಕಾರದೇರೊ' ಎನ್ನುತ್ತಾರೆ. ಕುಟುಂಬದ ಸದಸ್ಯರಿಗೆ ಒಳ್ಳೆಯದಾಗಲೆಂದು ಪ್ರಾರ್ಥಿಸುತ್ತಾರೆ. ಇನ್ನೊಂದು ಕಡೆ ತಾಂಡಾದ ಅವಿವಾಹಿತ ಯುವತಿಯರು ಗೋವುಗಳ ಹೆಸರಿನಲ್ಲಿ ಉಪವಾಸ ವ್ರತದಲ್ಲಿದ್ದು, ಬೆಳಿಗ್ಗೆ ಕಾಡಿಗೆ ಹೋಗಿ, ವಿವಿಧ ಬಗೆಯ ಹೂವುಗಳನ್ನು ತಂದು ಮನೆ, ಮನೆಗೆ ಹೋಗಿ ದನದ ಕೊಟ್ಟಿಗೆಯಲ್ಲಿ ಸಂಗ್ರಹಿಸಿ ಇಟ್ಟಿರುವ ಸಗಣಿಯಿಂದ 'ಗೋದಣ' ತಯಾರಿಸಿ ಅದನ್ನು ಹೂವುಗಳಿಂದ ಶೃಂಗರಿಸಿ ಪೂಜಿಸುತ್ತಾರೆ. ಮೊದಲು ಅಸಂಖ್ಯಾತ ದನಕರುಗಳನ್ನು ಹೊಂದಿದ್ದ ಲಂಬಾಣಿಗರಿಗೆ ದನ-ಕರುಗಳೇ ಅವರ ಸಂಪತ್ತಿನ ಮೂಲವಾಗಿದ್ದರಿಂದ ಗೋವುಗಳನ್ನು ಪೂಜಿಸುವುದು ಕಂಡುಬರುತ್ತದೆ.

**ಹೋಳಿಹಬ್ಬ ಆಚರಣೆ :**

ಭಾರತೀಯರ ರಂಗುರಂಗಿನ ಹಬ್ಬವೇ ಹೋಳಿ, ಇದನ್ನು ಭಾರತೀಯರೆಲ್ಲ ಅತಿ ಸಂಭ್ರಮದಿಂದ ಆಚರಿಸುತ್ತಾರೆ. ಲಂಬಾಣಿಗರಲ್ಲಿ ಹೋಳಿಹಬ್ಬವನ್ನು ಸ್ತ್ರೀ-ಪುರುಷರು ಕೂಡಿ ಭಿನ್ನವಾದ ರೀತಿಯಲ್ಲಿ ಆಚರಿಸುತ್ತಾರೆ. ಹೋಳಿಹಬ್ಬ ಆಚರಿಸಲು ತಾಂಡಾದ ಯುವಕರು ಹತ್ತು ಹದಿನೈದು ದಿನಗಳ ಮುಂಚಿತವಾಗಿ ಸಿದ್ಧತೆ ನಡೆಸುತ್ತಾರೆ. ಈ ಹಬ್ಬದಲ್ಲಿ ಅಶ್ಲೀಲಗೀತೆಗಳನ್ನು ಹಾಡಲು ಕುಣಿದಾಡಲು ಸ್ವಾತಂತ್ರ್ಯ ನೀಡಲಾಗಿದೆ. ಹೋಳಿಹಬ್ಬ ಆಚರಿಸಲು ತಾಂಡಾದ ನಾಯಕನ ಅನುಮತಿ ಅಗತ್ಯವಾಗಿದ್ದು, ತಾಂಡಾದ ಜನರ ಆರ್ಥಿಕ ಸ್ಥಿತಿ-ಗಿತಿಗಳು ಒಳ್ಳೆಯದಿದ್ದರೆ ಮಾತ್ರ ನಾಯಕ ಅನುಮತಿ ನೀಡುತ್ತಾನೆ. ಹಬ್ಬವನ್ನು ಶಾಂತ ರೀತಿಯಿಂದ ಆಚರಿಸಲು ಇಬ್ಬರು ಯುವಕರನ್ನು ಮುಖಂಡರನ್ನಾಗಿ ಆಯ್ಕೆ ಮಾಡುತ್ತಾರೆ. ಈ ಮುಖಂಡರನ್ನು (ಗೇರಿಯಾ)ಗಳೆಂದು ಕರೆಯುತ್ತಾರೆ. ಇವರ ಮುಂದಾಳತ್ವದಲ್ಲಿ ಹಬ್ಬದ ಎಲ್ಲಾ ಆಚರಣೆಗಳು ನೆರವೇರುತ್ತವೆ. ದಿನಂಪ್ರತಿ ರಾತ್ರಿ ತಾಂಡಾಗಳಲ್ಲಿ ಯುವಕರು ಸೇರಿ ಅಶ್ಲೀಲ ಪದಗಳನ್ನು ಹಾಡುವುದು, ಕುಣಿದಾಡುವದು, ಕಾಮದಹನ ಮಾಡಲು ಕಟ್ಟಿಗೆ ಸಂಗ್ರಹಿಸಿ ಒಂದು ಕಡೆ ಸಂಗ್ರಹಿಸುವುದನ್ನು ಮಾಡುತ್ತಾರೆ.

ಹೋಳಿಹಬ್ಬದ ದಿನ ಲಂಬಾಣಿಗರಲ್ಲಿಯ 'ಭುಕ್ಯಾ' ಪಂಗಡದವರು ತಮ್ಮ ಗಂಡು ಮಕ್ಕಳ ಜನ್ಮದಿನವನ್ನು ಆಚರಿಸಿಕೊಳ್ಳುವ ಪರಿಪಾಠವಿದ್ದು ಇದನ್ನು 'ದೂಂಡ್' ಎನ್ನುತ್ತಾರೆ. ಕಾಮದಹನವನ್ನು ಲಂಬಾಣೇತರ ಜನರು ರಾತ್ರಿ ವೇಳೆಯಲ್ಲಿ ನೆರವೇರಿಸಿದರೆ ಲಂಬಾಣಿಗರು ಮಾರನೆಯ ದಿನ ನಸುಕಿನಲ್ಲಿ ನೆರವೇರಿಸುತ್ತಾರೆ. ನಸುಕಿನಲ್ಲಿ ಹೋಳಿಹಬ್ಬದ ಮುಖಂಡರು ಹೆಗಲಮೇಲೆ ಕೆಂಪುಶಾಲು ಹಾಕಿಕೊಂಡು ಕಾಮದಹನ ಮಾಡಲು ತಾಂಡಾದ ನಾಯಕ ಮತ್ತು ಮುಖಂಡರನ್ನು ಆಹ್ವಾನಿಸುತ್ತಾರೆ. ಎಲ್ಲರೂ ಸೇರಿ ಕಟ್ಟಿಗೆಗಳನ್ನು ಗೋಪುರದ ಆಕಾರದಲ್ಲಿ ಜೋಡಿಸಿಟ್ಟಿರುವ ಸ್ಥಳಕ್ಕೆ ಬಂದು ಮುಖಂಡರು ಕಾಮನಿಗೆ ಬೆಂಕಿ ಹಚ್ಚಿ ತಾಂಡಾದ ಸಮೀಪವಿರುವ ಭಾವಿ ಅಥವಾ ಕೆರೆಗೆ ಓಡಿಹೋಗಿ ನೀರಿನಲ್ಲಿ ವಸ್ತ್ರ ತೋಯಿಸಿಕೊಂಡು, ಕಾಮದಬೆಂಕಿ ಆರುವುದರೊಳಗೆ ತಿರುಗಿ ಬರಬೇಕೆಂಬ ನಿಯಮವಿರುತ್ತದೆ. ಇದನ್ನು 'ದಾಂಡೋಕಾಡೆರೊ' ಎನ್ನುತ್ತಾರೆ. ಕಾಮದಹನವಾದ ಮೇಲೆ ಹೋಳಿಹಬ್ಬದ ಮುಖಂಡರು ತಾಂಡಾದ ಯುವಕರೊಂದಿಗೆ ಅಶ್ಲೀಲ ಪದಗಳನ್ನು

ಹಾಡುತ್ತ ಮಕ್ಕಳ ಹುಟ್ಟುಹಬ್ಬ ಆಚರಿಸಿಕೊಳ್ಳುತ್ತಿರುವವರ ಮನೆಗೆ ಹೋಗುತ್ತಾರೆ. ಅಲ್ಲಿ ಮಗುವಿನ ತಾಯಿ, ಬಂಧು ಬಳಗದ ಹೆಣ್ಣುಮಕ್ಕಳಿಗೆ ಅಶ್ಲೀಲ ಪ್ರೇಮಗೀತೆಗಳಿಂದ ರೇಗಿಸುತ್ತಾರೆ. ಆಗ ಸ್ತ್ರೀಯರು ಕಟ್ಟಿಗೆಗಳಿಂದ ಹೊಡೆಯುವಂತೆ ನಟಿಸುತ್ತಾರೆ. ಈ ಸಂದರ್ಭದಲ್ಲಿ ಅಶ್ಲೀಲ ಪ್ರೇಮಗೀತೆ ಹಾಡಿದರೂ, ಯಾರು ತಪ್ಪಾಗಿ ತಿಳಿಯುವದಿಲ್ಲ ನಂತರ ಕೂಡಿದ ಜನರ ಮುಂದೆ ಮಗುವನ್ನು ಕೂಡ್ರಿಸಿ ಹೋಳಿ ಮುಖಂಡರು ಹಾಗೂ ಸಂಗಡಿಗರು ಮಗುವಿಗೆ ಒಳ್ಳೆಯದಾಗಲೆಂದು ಹಾಡಿನ ಮುಖಾಂತರ ಆಶೀರ್ವದಿಸುತ್ತಾರೆ. ನಂತರ ಕೂಡಿದ ಜನರಿಗೆ ಪುರಿಹಂಚುತ್ತಾರೆ. ತಾಂಡಾದಲ್ಲಿ ಮಕ್ಕಳ ಹುಟ್ಟುಹಬ್ಬದ ಆಚರಣೆಗಳು ಮುಗಿದ ಮೇಲೆ ಅಶ್ಲೀಲ ಪ್ರೇಮಗೀತೆಗಳನ್ನು ಹಾಡುತ್ತ ಯುವಕರು ತಾಂಡಾದ ಜನರ ಮೇಲೆ ಬಣ್ಣ ಹಾಕುತ್ತಾರೆ. ಸಾಯಂಕಾಲ ತಾಂಡಾದ ಮುತ್ತೈದೆ ಸ್ತ್ರೀಯರೆಲ್ಲ ಸೇರಿ ತಮ್ಮ ಮಕ್ಕಳನ್ನು ಹೆಗಲಮೇಲೆ ಹೊತ್ತುಕೊಂಡು ಕಾಮದಹನ ಮಾಡಿದ ಸ್ಥಳಕ್ಕೆ ಹೋಗಿ ಉರುವಲು ಹಾಕಿ ಧಾರ್ಮಿಕ ಗೀತೆ ಹಾಡುತ್ತಾ ಬೆಂಕಿಯ ಸುತ್ತುವರಿದು ಬೆಂಕಿಯಲ್ಲಿ ಜೋಳದ ಕಾಳುಗಳನ್ನು ಎಸೆದು ನಮಸ್ಕರಿಸಿ ಬರುತ್ತಾರೆ. ಮಾರನೆಯ ದಿನ ತಾಂಡಾದ ಜನರು ಸೇರಿ ಸಾಮೂಹಿಕ ಹೋತದ ಬಲಿ ಕೊಡುವುದರೊಂದಿಗೆ ಹೋಳಿಹಬ್ಬದ ಆಚರಣೆಗಳು ಮುಕ್ತಾಯಗೊಳ್ಳುತ್ತವೆ.

**ಸಸಿಹಬ್ಬ (ತೀಜ್) :**

ಲಂಬಾಣಿಗರು ಅಲೆಮಾರಿ ಜೀವನ ಸಾಗಿಸುತ್ತ ಬಂದರೂ, ತಮ್ಮಲ್ಲಿ ರೂಢಿಯಲ್ಲಿರುವ ಪದ್ಧತಿ ಸಂಪ್ರದಾಯಗಳನ್ನು ಮುಂದುವರಿಸಿಕೊಂಡು ಹೋಗುತ್ತಿದ್ದಾರೆ. ರಾಜಸ್ಥಾನದಲ್ಲಿ ಇಂದಿಗೂ ಆಚರಿಸುವ ತೀಜ್ ಹಬ್ಬವನ್ನು ಲಂಬಾಣಿಗರು ತಮ್ಮ ಮೂಲಸ್ಥಾನದಿಂದ 1630ರಲ್ಲಿ ಮೊಗಲರ ಜೊತೆ ಸೇರಿ ದಕ್ಷಿಣ ಭಾರತಕ್ಕೆ ವಲಸೆ ಬಂದಾಗ ತಮ್ಮ ಜೊತೆ ಬಳುವಳಿಯಾಗಿ ತಂದಿದ್ದಾರೆ. ಈ ಹಬ್ಬದಲ್ಲಿ ವಿವಾಹಯೋಗ್ಯವಾದ ಯುವಕ-ಯುವತಿಯರು ಪ್ರಮುಖ ಪಾತ್ರ ವಹಿಸುತ್ತಾರೆ. ತೀಜ್‌ಹಬ್ಬ ಲಂಬಾಣಿಗರಲ್ಲಿ ಮಾತ್ರ ಕಂಡುಬರುತ್ತಿದ್ದು, ಹತ್ತು ದಿನಗಳ ವರೆಗೆ ಗೋದಿಸಸಿಗಳನ್ನು ಬೆಳಿಸಿ ನಂತರ ಅವುಗಳನ್ನು ವಿಸರ್ಜಿಸುತ್ತಾರೆ. ಈ ಹಬ್ಬ ಮುಗಿಯುವವರೆಗೆ ಲಂಬಾಣಿ ತಾಂಡಾಗಳಲ್ಲಿ ರಾತ್ರಿ ವೇಳೆಯಲ್ಲಿ ಯುವಕ-ಯುವತಿಯರ ಕುಣಿತ ಹಾಡುಗಾರಿಕೆ ಕಾರ್ಯಕ್ರಮಗಳು ಕಂಡುಬರುತ್ತವೆ.

**ಸಸಿಹಬ್ಬ ಆಚರಿಸುವ ಬಗೆ :**

ಸಸಿಹಬ್ಬ ಆಚರಿಸಲು ತಾಂಡಾದ ನಾಯಕನ ಅನುಮತಿಬೇಕಾಗಿದ್ದು, ಅನುಮತಿ ಇಲ್ಲದೆ ಹಬ್ಬ ಆಚರಿಸಲು ಬರುವುದಿಲ್ಲ. ತಾಂಡಾದಲ್ಲಿ ವಾಸಿಸುವ ಜನರು ಸುಖಶಾಂತಿಯಿಂದಿದ್ದರೆ ಮಳೆ-ಬೆಳೆ ಚನ್ನಾಗಿದ್ದರೆ ಮಾತ್ರ ಸಸಿಹಬ್ಬ ಆಚರಿಸಲು ನಾಯಕ ಅನುಮತಿ ನೀಡುತ್ತಾನೆ. ನಾಯಕನಿಂದ ಅನುಮತಿ ಪಡೆದು ಯುವತಿಯರೆಲ್ಲರೂ ಸೇರಿ ಚಿಕ್ಕ ಚಿಕ್ಕ ಬಿದಿರಿನ ಬುಟ್ಟಿಗಳನ್ನು ತಂದು ಅದರಲ್ಲಿ ಕಪ್ಪುಮಣ್ಣು ತುಂಬಿ, ಮೊದಲು ನಾಯಕನಿಂದ ಗೋದಿಯಕಾಳುಗಳನ್ನು ಹಾಕಿಸುತ್ತಾರೆ. ನಂತರ ತಾಂಡಾದ ಜನರು ತಮ್ಮ-ತಮ್ಮ ಬುಟ್ಟಿಗಳಲ್ಲಿ ಗೋದಿ ನಾಟಿಸುತ್ತಾರೆ. ಸಸಿಹಬ್ಬ ಆಚರಿಸುವ ವರ್ಷದಲ್ಲಿ ವಿವಾಹವಾಗುವ ಇಬ್ಬರು ಯುವಕರು ಗೋದಿ ಸಸಿಗಳನ್ನು ಬೆಳೆಸುವ ಪರಿಪಾಠವಿದ್ದು ಇದನ್ನು 'ಚಲಕೊಡಿರ ಓಡ್ನಿ' ಗುಬ್ಬಿ ಸಸಿಬುಟ್ಟಿ

ಎನ್ನುತ್ತಾರೆ. ಈ ಬುಟ್ಟಿಗಳನ್ನು ಸಸಿ ಬೆಳೆಸಿದ ಯುವಕರೇ ಅವುಗಳನ್ನು ವಿಸರ್ಜಿಸುತ್ತಾರೆ. ಯುವತಿಯರು ಸಾಮೂಹಿಕವಾಗಿ ಕೆರೆಗೆ ಹೋಗಿ ಸಸಿಬುಟ್ಟಿಗಳನ್ನು ವಿಸರ್ಜಿಸುತ್ತಾರೆ. ಇವರ ಜೊತೆ ಸೇರಿ ಯುವಕರು ಗುಬ್ಬಿಸಸಿ ಬಟ್ಟಿಗಳನ್ನು ವಿಸರ್ಜಿಸುತ್ತಾರೆ. ಗೋದಿ ಸಸಿ ಎತ್ತರಕ್ಕೆ ಬೆಳೆದಷ್ಟು ಒಳ್ಳೆಯದಾಗುತ್ತದೆ ಎಂಬ ನಂಬಿಕೆಯಿಂದ ಯುವತಿಯರು ಸಸಿಗಳನ್ನು ಅತೀ ಜಾಗರೂಕತೆಯಿಂದ ಬೆಳೆಸುತ್ತಾರೆ.

**ಸಸಿಬುಟ್ಟಿಯ ವಿಸರ್ಜನೆ :**

ಯುವತಿಯರು 9 ದಿನಗಳವರೆಗೆ ಜಾಗರೂಕತೆಯಿಂದ ಬೆಳೆಸಿದ ಸಸಿಬುಟ್ಟಿ ವಿಸರ್ಜಿಸುವ ಮೊದಲ ದಿನರಾತ್ರಿ ಬುಟ್ಟಿಗಳನ್ನು ಹೂವುಗಳಿಂದ ಶೃಂಗರಿಸಿ ದೇವರಮುಂದಿಟ್ಟು, ಮಾದಲಿಯಿಂದ ನೈವೇದ್ಯ ಮಾಡಿ ಪೂಜಿಸುವದಕ್ಕೆ `ಡಂಬೊಳಿ` ಎನ್ನುತ್ತಾರೆ. ಸಸಿಬುಟ್ಟಿಗಳಲ್ಲಿ ಹಣ ಇಟ್ಟು ಬಂದು-ಬಾಂಧವರು ನಮಸ್ಕರಿಸುತ್ತಾರೆ. ನಂತರ ತಾಂಡಾದ ಯುವಕ-ಯುವತಿಯರು ಕೂಡಿ ಮಣ್ಣಿನ ವಿಗ್ರಹಗಳನ್ನು ತಯಾರಿಸಲು (ಗಣಗೋರಾ) ಮಣ್ಣು ತರಲು ಹೋಗುವಾಗ, ಯುವತಿಯರು ಗೀತೆಗಳನ್ನು ಹಾಡುತ್ತಾ ಹೋಗುತ್ತಾರೆ. ಯುವಕರು ಮೋಜಿಗಾಗಿ ಯುವತಿಯರನ್ನು ಚುಡಾಯಿಸುತ್ತಾರೆ. ಹೀಗೆ ಮೋಜಿನಿಂದ ಮಣ್ಣು ತಂದು ಮಣ್ಣಿನ ಎರಡು ವಿಗ್ರಹಗಳನ್ನು ತಯಾರಿಸುತ್ತಾರೆ. ಸಸಿಬುಟ್ಟಿ ವಿಸರ್ಜನೆಯ ದಿನ ಎಲ್ಲ ಯುವತಿಯರು ಬೆಳಿಗ್ಗೆ ನಾಯಕನ ಮನೆಯ ಮುಂದೆ ಸೇರುತ್ತಾರೆ. ಬುಟ್ಟಿಗಳಿಗೆ ಪೂಜೆ ಸಲ್ಲಿಸಿದ ನಂತರ ಮಣ್ಣಿನ ವಿಗ್ರಹಗಳನ್ನು (ಗಣಗೊರ-ಗಣಗೋರಿ)ವಿವಾಹಯೋಗ್ಯ ಯುವತಿಯರು ಕಾಲಿನಿಂದ ತುಳಿದು ನಾಶಪಡಿಸಿ, ವಿಗ್ರಹಗಳನ್ನು ಕೂಡಿಸಿದ ಮರದ ಹಲಿಗೆ ತೊಳೆದ ನೀರನ್ನು 5 ಜನ ಯುವತಿಯರು ಕುಡಿಯುತ್ತಾರೆ. ನಂತರ ಎಲ್ಲಾ ಯುವತಿಯರು ನೃತ್ಯದಲ್ಲಿ ತೊಡಗುತ್ತಾರೆ. ಸಾಯಾಂಕಾಲ 6 ಘಂಟೆಗೆ ಯುವತಿಯರು ತಲೆಯ ಮೇಲೆ ಸಸಿಬುಟ್ಟಿಗಳನ್ನು ಹೊತ್ತುಕೊಂಡು ನಾಯಕನ ಮನೆಯ ಮುಂದೆ ಸೇರುತ್ತಾರೆ. ನಾಯಕ ಸಸಿಗಳನ್ನು ಹರಿದು ಯುವತಿಯರಿಗೆ ಆಶೀರ್ವದಿಸುತ್ತಾನೆ. ನಂತರ ಎಲ್ಲಾ ಯುವತಿಯರು ಸಸಿಗಳನ್ನು ಹರಿದು ಹಿರಿಯರಿಗೆ ಕೊಟ್ಟು ಆಶೀರ್ವಾದ ಪಡೆಯುತ್ತಾರೆ. ಮುಂದಿನ ಸಸಿಹಬ್ಬ ಬರವುದರೊಳಗೆ ತಮಗೆ ವಿವಾಹವಾದರೆ ಗೋದಿ ಸಸಿ ಬೆಳೆಸಲು ಅನರ್ಹರಾಗುತ್ತೇವೆಂದು ದುಃಖಿಸುತ್ತಾರೆ. ನಂತರ ಸಕಲ ವಾದ್ಯಗಳೊಂದಿಗೆ ನೃತ್ಯ ಮಾಡುತ್ತ ಸಮೀಪದ ಕೆರೆ ಅಥವಾ ಹಳ್ಳಕ್ಕೆ ಹೋಗಿ ಸಸಿಬುಟ್ಟಿಗಳನ್ನು ವಿಸರ್ಜಿಸುತ್ತಾರೆ. ಹೀಗೆ ಹತ್ತು ದಿನಗಳವರೆಗೆ ಸಸಿಹಬ್ಬವು ಅತ್ಯಂತ ವಿಶಿಷ್ಟ ರೀತಿಯಲ್ಲಿ ಆಚರಿಸಲ್ಪಡುತ್ತದೆ.

**ಜಾತಿ ಪಂಚಾಯತಿ :**

ಪ್ರತಿಯೊಂದು ಜಾತಿ ಅಥವಾ ಬುಡಕಟ್ಟಿನ ಸಮಾಜದಲ್ಲಿ ತಮ್ಮದೆ ಆದ ಆಡಳಿತ ವ್ಯವಸ್ಥೆಗಳಿದ್ದು ಅವುಗಳನ್ನು ಜಾತಿ ಪಂಚಾಯತಿ ಎಂದು ಕರೆಯುತ್ತಾರೆ. ಆಯಾ ಜಾತಿಗೆ ಸಂಬಂಧಿಸಿದ ನಿಯಮಗಳನ್ನು ಪಾಲಿಸುವುದು, ತಪ್ಪು ಮಾಡಿದವರಿಗೆ ಶಿಕ್ಷಿಸುವುದು, ಜಾತಿಗೆ ಧಕ್ಕೆ ಬರದಂತೆ ನೋಡಿಕೊಳ್ಳುವದು, ಜಾತಿ ಪಂಚಾಯತಿಯ ಪ್ರಮುಖ ಕಾರ್ಯಗಳಾಗಿವೆ. ಲಂಬಾಣಿಗರು ತಾಂಡಾದ ಆಂತರಿಕ ವ್ಯವಹಾರಗಳನ್ನು ತಾವೇ ಬಗೆಹರಿಸಿಕೊಳ್ಳಲು ಜಾತಿ ಪಂಚಾಯತಿ ಹೊಂದಿದ್ದಾರೆ. ತಾಂಡಾದಲ್ಲಿ ಆಗುವ ಜಗಳಗಳು, ಅತ್ಯಾಚಾರಗಳು, ಕಳ್ಳತನ, ಮುಂತಾದ ಅಪರಾಧಗಳ ನ್ಯಾಯ ನಿರ್ಣಯ ಮಾಡಿ ಅಪರಾಧಕ್ಕೆ ತಕ್ಕ ಶಿಕ್ಷೆಗಳನ್ನು ನೀಡುತ್ತಾರೆ.

ಪಂಚಾಯತಿಗೆ ನಾಯಕ ಮುಖ್ಯಸ್ಥನಾಗಿರುತ್ತಾನೆ. ಈತನು ತಾಂಡಾದ ಎಲ್ಲಾ ಆಗು ಹೋಗುಗಳನ್ನು ನೋಡಿಕೊಂಡು ಹೋಗುತ್ತಾನೆ.

**ಲಂಬಾಣಿ ಜಾತಿ ಪಂಚಾಯತಿಯ ರಚನೆ**

| | | |
|---|---|---|
| 1 | ನಾಯಕ | ಅಧ್ಯಕ್ಷ |
| 2 | ಕಾರಭಾರಿ | ಕಾರ್ಯದರ್ಶಿ |
| 3 | ಡಾವೊ | ಉಪಾಧ್ಯಕ್ಷ |
| 4 | ಡಾವಸಾಣ | ಪಂಚರು |

ಪಂಚಾಯತಿಯ ಕಾರ್ಯಕಲಾಪಗಳಲ್ಲಿ ಈ ಕೆಳಗಿನವರು ಸಹಾಯಕರಾಗಿ ಕಾರ್ಯ ನಿರ್ವಹಿಸುತ್ತಾರೆ.

| | | |
|---|---|---|
| 1 | ಢಾಲಿಯಾ | ವಾಲೀಕಾರ |
| 2 | ಢಾಡಿ | ಗಾಯಕ |
| 3 | ನಾವಿ | ಕ್ಷೌರಿಕ |

ಮೇಲಿನಂತೆ ಲಂಬಾಣಿಗರಲ್ಲಿ ಪಂಚಾಯತಿ ವ್ಯವಸ್ಥಿತವಾಗಿ ರಚನೆಯಾಗಿದೆ.

**1. ನಾಯಕ (ಅಧ್ಯಕ್ಷ) :**

ಪಂಚಾಯತಿಗೆ ತಾಂಡಾದ 'ನಾಯಕ' ಮುಖ್ಯಸ್ಥನಾಗಿರುತ್ತಾನೆ. ನಾಯಕನ ಹುದ್ದೆಯು ವಂಶಪಾರಂಪರ್ಯವಾಗಿದೆ. ಇವನು ನ್ಯಾಯಾಧೀಶನಂತಿದ್ದು, ತಾಂಡಾದ ಆಡಳಿತವನ್ನು ವ್ಯವಸ್ಥಿತವಾಗಿ ನೋಡಿಕೊಂಡು ಹೋಗುತ್ತಾನೆ. ನಾಯಕ ತೆಗೆದುಕೊಳ್ಳುವ ಯಾವುದೇ ನಿರ್ಧಾರಗಳನ್ನು ಲಂಬಾಣಿಗರು ತಪ್ಪದೆ ಪಾಲಿಸುತ್ತಾರೆ. ಈತನು ತಾಂಡಾಕ್ಕೆ ಧಕ್ಕೆ ಬಾರದಂತೆ ನೋಡಿಕೊಂಡು ಹೋಗುತ್ತಾನೆ. ತಾಂಡಾಗಳಲ್ಲಿ ನಡೆಯುವ ಆಚರಣೆಗಳು, ಹಬ್ಬ ಹರಿದಿನಗಳು, ಆಂತರಿಕ ವ್ಯವಹಾರಗಳು ನಾಯಕನ ಅನುಮತಿಯಿಂದ ನಡೆಯುತ್ತವೆ.

**ನಾಯಕನ ಕಾರ್ಯಗಳು :**

1. ತಾಂಡಾ ಸಂಸ್ಕೃತಿಗೆ ಧಕ್ಕೆ ಬಾರದಂತೆ ನೋಡಿಕೊಳ್ಳುವುದು.
2. ತಾಂಡಾದ ಘನತೆ, ಗೌರವ ಕಾಪಾಡಲು, ಆಂತರಿಕ ಕಲಹಗಳನ್ನು ತಾಂಡಾದಲ್ಲಿಯೇ ಬಗೆಹರಿಸುವುದು.
3. ಹಬ್ಬ-ಹರಿದಿನಗಳು, ಪೂಜೆ-ಪುನಸ್ಕಾರಗಳು, ವಿವಾಹ ಮುಂತಾದವು ಸುಗಮವಾಗಿ ನಡೆಯುವಂತೆ ನೋಡಿಕೊಳ್ಳುವುದು.

ನ್ಯಾಯ ನಿರ್ಣಯಿಸುವಲ್ಲಿ ಪಂಚರ ಮತ್ತು ಕಾರ್ಯದರ್ಶಿಯ ಜೊತೆ ಸಮಾಲೋಚಿಸಿ ಸೂಕ್ತ ತೀರ್ಪುಗಳನ್ನು ನೀಡುವುದು. ಹೀಗೆ ನಾಯಕನು ತಾಂಡಾದ ಎಲ್ಲಾ ಆಗು-ಹೋಗುಗಳಿಗೆ ಜವಾಬ್ದಾರನಾಗಿರುತ್ತಾನೆ.

**2. ಕಾರಭಾರಿ (ಕಾರ್ಯದರ್ಶಿ) :**

ಕಾರಭಾರಿ, ಲಂಬಾಣಿಯರ ಪಂಚಾಯತಿಗೆ ಕಾರ್ಯದರ್ಶಿಯಾಗಿರುತ್ತಾನೆ. ಈ ಹುದ್ದೆಯೂ ಕೂಡಾ ವಂಶ ಪಾರಂಪರ್ಯದಿಂದ ಬಂದಿದ್ದಾಗಿದೆ. ಕಾರ್ಯದರ್ಶಿಯು ನಾಯಕನಿಗೆ ಪ್ರತಿಯೊಂದು ಕಾರ್ಯದಲ್ಲಿ ಸಹಾಯಕನಾಗಿ ಕೆಲಸ ಮಾಡುತ್ತಾನೆ. ನ್ಯಾಯ ನಿರ್ಣಯಿಸುವಾಗ, ನಾಯಕನಿಗೆ ಕ್ಲಿಷ್ಟಕರವಾದ ಸಮಸ್ಯೆ ಎದುರಾದಾಗ ಕಾರಭಾರಿ ಸೂಕ್ತ ಸಲಹೆ ಸೂಚನೆಗಳನ್ನು ಕೊಡುತ್ತಾನೆ. ಹಾಗೂ ನಾಯಕನ ಅನುಪಸ್ಥಿತಿಯಲ್ಲಿ ಪಂಚಾಯತಿಯ ಜವಬ್ದಾರಿಯನ್ನು ವಹಿಸಿಕೊಂಡು ನ್ಯಾಯ ನಿರ್ಣಯ ಮಾಡುವ ಅಧಿಕಾರವನ್ನು ಹೊಂದಿರುತ್ತಾನೆ. ಒಟ್ಟಿನಲ್ಲಿ ಕಾರ್ಯದರ್ಶಿ ಜಾಣನೂ, ಧೈರ್ಯವಂತನೂ ಆಗಿದ್ದು ಪಂಚಾಯತಿಯಲ್ಲಿ ಅರ್ಥಗರ್ಭಿತ ಗಾದೆ-ಒಗಟುಗಳನ್ನು ಹೇಳುತ್ತಾ ಜನರನ್ನು ಮನೋರಂಜಿಸುತ್ತಾನೆ.

**ಡಾವೊ (ಉಪಾಧ್ಯಕ್ಷ) :**

ಈತನು ತಾಂಡಾದ ಅನುಭವಿ ಹಿರಿಯ ವ್ಯಕ್ತಿಯಾಗಿದ್ದು ಅವನ ಅರ್ಹತೆ ಅನುಭವದ ಆಧಾರದ ಮೇಲೆ ಈ ಹುದ್ದೆಯನ್ನು ವಹಿಸಿಕೊಡುತ್ತಾರೆ. ಈ ಹುದ್ದೆ ವಂಶಪಾರಂಪರ್ಯದಿಂದ ಬಂದಿಲ್ಲ. ನಾಯಕನಿಂದ ಆಯ್ಕೆಯಾಗಿರುತ್ತಾನೆ. ಪಂಚಾಯತಿಯ ಸಮಸ್ಯೆ ಬಗೆಹರಿಸುವಲ್ಲಿ ಈತನು ನಾಯಕನಿಗೆ ಸಹಾಯಕನಾಗಿ, ಮಾರ್ಗದರ್ಶಕನಂತೆ ಕಾರ್ಯನಿರ್ವಹಿಸುತ್ತಾನೆ. ಕೆಲವೊಂದು ಸಂದರ್ಭಗಳಲ್ಲಿ ನಾಯಕ ಮತ್ತು ಕಾರ್ಯದರ್ಶಿ ಇಲ್ಲದಿರುವಾಗ ನಾಯಕನ ಜವಾಬ್ದಾರಿಯನ್ನು ವಹಿಸಿಕೊಳ್ಳುತ್ತಾನೆ. ನ್ಯಾಯ ನಿರ್ಣಯಿಸುವಲ್ಲಿ ಡಾವೊನ ಸಲಹೆ ಸೂಚನೆಗಳನ್ನು ಪಡೆದು ನಾಯಕ ತೀರ್ಪು ನೀಡುತ್ತಾನೆ. ಹೀಗೆ ಪಂಚಾಯತಿಯಲ್ಲಿ ಡಾವೊನಿಗೆ ಗೌರವಯುತ ಸ್ಥಾನಮಾನಗಳಿರುತ್ತವೆ.

**ಡಾವಸಾಣ (ಪಂಚರು) :** ಪಂಚಾಯತಿಯಲ್ಲಿ ಪಂಚರು ಪ್ರಮುಖವಾದ ಪಾತ್ರವನ್ನು ನಿರ್ವಹಿಸುತ್ತಾರೆ. ಈ ಸಂಘಟನೆಯು ಐದು ಹಿರಿಯ ಅನುಭವಿ ಸದಸ್ಯರಿಂದ ಕೂಡಿರುತ್ತದೆ. ಇವರನ್ನು ನಾಯಕ ಹಾಗೂ ಕಾರಭಾರಿಗಳು ಗುರುತಿಸಿ ಆಯ್ಕೆ ಮಾಡುತ್ತಾರೆ. ಹೆಂಗಸರಿಗೆ ಪಂಚರಾಗಲು ಅವಕಾಶ ನೀಡಿಲ್ಲ. ಪಂಚಾಯತಿಯಲ್ಲಿ ಇವರಿಗೆ ಉನ್ನತ ಸ್ಥಾನ-ಮಾನ ನೀಡಲಾಗಿದೆ ನಾಯಕ ಪಂಚರ ಸಲಹೆ-ಸೂಚನೆಗಳನ್ನು ಪಡೆದು ನ್ಯಾಯನಿರ್ಣಯಿಸುತ್ತಾನೆ. ಪಂಚರು ಯಾವಾಗಲೂ ತಾಂಡಾದ ಘನತೆ, ಗೌರವಗಳನ್ನು ಕಾಪಾಡಲು ಪ್ರಯತ್ನಿಸುತ್ತಾರೆ. ಇವರು ನೀಡುವ ಸಲಹೆ ಸೂಚನೆಗಳನ್ನು ಲಂಬಾಣಿಗರು ತಪ್ಪದೆ ಪಾಲಿಸುತ್ತಾರೆ. ನಾಯಕನಿಗೆ ಸಹಾಯಕರಾಗಿ "ಪಂಚಾಯತಿಯ ಕಾರ್ಯದಲ್ಲಿ 'ಢಾಡಿ' ವೃತ್ತಿಗಾಯಕನ ಪಾತ್ರವೂ ಹಿರಿದಾಗಿದೆ. ಇವರು ವಂಶಪಾರಂಪರ್ಯದಿಂದ ತಮ್ಮ ವೃತ್ತಿಯನ್ನು ಮುಂದುವರಿಸಿಕೊಂಡು ಬಂದಿದ್ದಾರೆ. ಈತ ಸಾರಂಗಿ ವಾದ್ಯವನ್ನು ಹಿಡಿದು ಪಂಚಾಯತಿಯಲ್ಲಿ ಕೆಲವು ಸಂದರ್ಭ ಹಾಗೂ ಸನ್ನಿವೇಶಗಳಿಗೆ ತಕ್ಕಹಾಗೆ ಹಿನ್ನೆಲೆಯನ್ನು ಹಾಗೂ ಕೆಲವು ಕಥೆಗಳನ್ನು ಹೇಳಿ ಸಮಸ್ಯೆಗಳಿಗೆ ಪರಿಹಾರವನ್ನು ಸೂಚಿಸುತ್ತಾನೆ.

ಈತನೊಬ್ಬ. ಕಲಾಕಾರನಾಗಿರುವುದರ ಜೊತೆಗೆ, ಒಳ್ಳೇ ಜ್ಞಾನಿ, ಹಾಗೂ ಅನುಭವಿಯೂ ಆಗಿರುತ್ತಾನೆ. 'ಢಾಲಿಯಾ' (ವಾಲಿಕಾರ)ನ ಸ್ಥಾನಮಾನವೂ ಮುಖ್ಯವಾಗಿದೆ ಅವನು ಪಂಚಾಯತಿಯ ಬಹುಮುಖ್ಯ ಘಟಕ, ನಾಯಕನ ಅಜ್ಞಾನುಸಾರ ಪಂಚಾಯತಿಗೆ ಸಂಬಂಧಪಟ್ಟ ವ್ಯಕ್ತಿಗಳನ್ನು ಕರೆತರುವುದು, ಆರೋಪಿಗಳನ್ನು ತಂದು ಒಪ್ಪಿಸುವುದು ಈತನ ಪ್ರಮುಖಕಾರ್ಯಗಳಾಗಿವೆ. ತಾಂಡಾದ ಪ್ರತಿಯೊಂದು ವ್ಯವಹಾರಗಳಲ್ಲೂ ಈತ ತಪ್ಪದೇ ಹಾಜರಿದ್ದು ಸಹಾಯ ಸಲ್ಲಿಸುತ್ತಾನೆ. ಪಂಚಾಯಿತಿ ಸಭೆಯಲ್ಲಿ ಸೇರಿದ ಎಲ್ಲ ಸದಸ್ಯರಿಗೆಬೇಕಾದ ಎಲ್ಲಬಗೆಯ ವ್ಯವಸ್ಥೆಯ ಜವಾಬ್ದಾರಿ (ನಾವಿ)ಕ್ಷೌರಿಕ ನೋಡಿಕೊಳ್ಳುತ್ತಾನೆ. ಹೀಗೆ ಪಂಚಾಯತಿಯಲ್ಲಿ ನಾಯಕನಿಂದ ಹಿಡಿದು ಕ್ಷೌರಿಕನವರೆಗೆ ಎಲ್ಲರೂ ತಮ್ಮ ತಮ್ಮ ಕೆಲಸಗಳನ್ನು ನಿರ್ವಹಿಸುತ್ತಾರೆ. (ಖಂಡೋಬಾ: 75)[28] ಲಂಬಾಣಿ ಸಮುದಾಯದಲ್ಲಿ ಕಂಡುಬರುವ ಢಾಲಿಯಾ, ವಾಲಿಕಾರ ಹಾಗೂ (ನಾವಿ)ಕ್ಷೌರಿಕರು ಲಂಬಾಣೇತರ ಸಮುದಾಯದ ಜನರಾಗಿದ್ದು ಲಂಬಾಣಿಗರು ವ್ಯಾಪಾರಕ್ಕಾಗಿ ಅಲೆದಾಡುವಾಗ ಈ ಸಮುದಾಯದಲ್ಲಿ ಸೇರಿಕೊಂಡಿದ್ದಾರೆ. ಪ್ರಸ್ತುತ ಲಂಬಾಣಿಗರು ಇವರ ಜೊತೆ ವೈವಾಹಿಕ ಸಂಬಂಧ ಬೆಳೆಸುವುದಿಲ್ಲ. ಇವರನ್ನು ಕನಿಷ್ಠ ರೀತಿಯಲ್ಲಿ ನೋಡಿಕೊಳ್ಳುತ್ತಾರೆ ನ್ಯಾಯನಿರ್ಣಯಿಸಲು ಜನರು ನಾಯಕನ ಮನೆಯ ಮುಂದೆ ಸೇರುತ್ತಾರೆ. ಪಂಚಾಯತಿಯಲ್ಲಿ ಸ್ತ್ರೀಯರಿಗೆ ಭಾಗವಹಿಸಲು ಅವಕಾಶವಿಲ್ಲ ಸಾಕ್ಷಿ ಹೇಳಲು ಮಾತ್ರ ಸ್ತ್ರೀಯರಿಗೆ ಅವಕಾಶವಿದೆ ಸ್ತ್ರೀಯರು ಮತ್ತು ಬಾಲಕರನ್ನು ಹೊರತುಪಡಿಸಿ ಎಲ್ಲರೂ ಪಂಚಾಯತಿಯಲ್ಲಿ ಭಾಗವಹಿಸಬಹುದು ಹಾಗೂ ಸಲಹೆ ಸೂಚನೆಗಳನ್ನು ನೀಡಬಹುದು. ನ್ಯಾಯ ನಿರ್ಣಯಿಸುವಾಗ ಕಥೆಗಳನ್ನು ಒಗಟುಗಳನ್ನು ಹೇಳಿ ಅವುಗಳ ಮೂಲಕ ತೀರ್ಪುಕೊಡುವುದು ಕಂಡುಬರುತ್ತದೆ. ಒಂದು ವೇಳೆ ಸ್ಥಳೀಯ ಪಂಚಾಯತಿ ಮುಖಂಡರಿಂದ ನ್ಯಾಯ ಬಗೆಹರಿಯದೆ ಹೋದರೆ ಬೇರೆ ಬೇರೆ ತಾಂಡಾಗಳ ನಾಯಕರನ್ನು ಆಹ್ವಾನಿಸಿ ನ್ಯಾಯನಿರ್ಣಯ ಮಾಡುತ್ತಾರೆ. ಇದಕ್ಕೆ ತಗುಲುವ ಖರ್ಚನ್ನು ನ್ಯಾಯ ಕೇಳಿದ ವ್ಯಕ್ತಿಭರಿಸುತ್ತಾನೆ. ಪಂಚಾಯತಿ ವಿಧಿಸುವ ಶಿಕ್ಷೆಗಳು ಈ ರೀತಿ ಇವೆ.

1. ಕೋಲೆಗಾರನಿಗೆ 350 ರೂಪಾಯಿ ದಂಡ ಹಾಗೂ ಪಂಚಾಯಿತಿಯ ಖರ್ಚು (ಖೂನೇರ್ ಸಾಡೆತೀನ್‌ಸೊ-ಪಂಚಿರ್ ವಜನ್)
2. ಚಾಡಿಖೋರನಿಗೆ-ರೂಪಾಯಿ 60, ದಂಡ (ಚಾಡಿಯಾರ್ ಸಾಠ್)
3. ಕಳ್ಳನಿಗೆ ಮಾಲಿನ ಬೆಲೆ ಹಾಗೂ 25 ರೂಪಾಯಿ ದಂಡ (ಮಾಲೇರ ಮೋಲ ಪಾಂಚೀರ ಪಚೀಸ್)
4. ಆಡುಕಳ್ಳನಿಗೆ-61 ರೂಪಾಯಿ ದಂಡ (ಪಾಟೆರ ಎಕ್ಕೆಪರಸಾಟ)
5. ಕೋಳಿಕಳ್ಳನಿಗೆ-(ಕೋಳಿಗೆ ಪ್ರತಿಯಾಗಿ ಆಡುಕೊಡಬೇಕು)
6. ನ್ಯಾಯ ಪಂಚಾಯತಿ ಎದುರಿನಲ್ಲಿ ಸುಳ್ಳು ಸಾಕ್ಷಿ ಹೇಳಿದರೆ 5ರೂಪಾಯಿ ದಂಡ.
7. ಅತ್ಯಾಚಾರ ಮಾಡಿದವನಿಗೆ ಸಾವಿರಗಟ್ಟಲೆ ದಂಡ ವಿಧಿಸುತ್ತಾರೆ.
8. ವಿವಾಹಿತ ಅನೈತಿಕ ಸಂಬಂಧ ಹೊಂದಿದ್ದರೆ ರೂ 500 ದಂಡ ವಿಧಿಸುತ್ತಾರೆ. ಹಾಗೂ ಅತ್ಯಾಚಾರಕ್ಕೆ ಒಳಗಾದ ಸ್ತ್ರೀಗೆ ಪರಿಹಾರ ಕೊಡಿಸುತ್ತಾರೆ.

---

28. ಡಾ.ಪಿ.ಕೆ.ಖಂಡೋಬಾ: 'ಕರ್ನಾಟಕದ ಬುಡಕಟ್ಟಿನ ಲಂಬಾಣಿಗರು', ಸಿದ್ದಲಿಂಗೇಶ್ವರ ಬುಕ್ ಡಿಪೊ, ಗುಲಬರ್ಗಾ

ಸ್ತ್ರೀಯರ ಮೇಲೆ ಅತ್ಯಾಚಾರ, ಅನ್ಯಾಯಗಳನ್ನು ಎಸಗಿದವರಿಗೆ ಉಗ್ರಶಿಕ್ಷೆಗೆ ಗುರಿಪಡಿಸುತ್ತಾರೆ. ವಿವಾಹ ವಿಚ್ಛೇದನೆ, ಮತ್ತು ಪುನರ್ ವಿವಾಹಕ್ಕೆ ಸಂಬಂಧಿಸಿದಂತೆ ಪಂಚಾಯತ್ ಅವಕಾಶ ಮಾಡಿಕೊಡುತ್ತದೆ. ಇಂತಹ ಸಂದರ್ಭಗಳಲ್ಲಿ ಪಂಚಾಯತಿ ವಿಧಿಸುವ ಶುಲ್ಕ ಕೆಳಗಿನಂತಿದೆ.

1. ಕನ್ಯೆಯಾಗಿದ್ದರೆ 75 ರೂಪಾಯಿ (ಕುಂವಾರಿಕ ಪೊಣಾಸೊ)

2. ವಿವಾಹವಾದವಳಾಗಿದ್ದರೆ 125 ರೂಪಾಯಿ (ವಾಯಾವಾಳಿರ ಸವ್ವಾಸೊ)

3. ವಿಧವೆಯಾಗಿದ್ದರೆ 150 ರೂಪಾಯಿ (ರಾಂಡಬಿರೇರಡೋಡಸೊ)

ಈ ಮೇಲಿನ ದಂಡಗಳೊಂದಿಗೆ ಪಂಚಾಯಿತಿಯ ಖರ್ಚು ಕೊಡಬೇಕಾಗುತ್ತದೆ. (ಖಂಡೋಬಾ: 1990: 16-18)[29] ಪಂಚಾಯತಿ ಶಿಕ್ಷೆಗಳು ಕಠೋರವಾಗಿರುವುದರಿಂದ ಒಮ್ಮೆ ಅಪರಾಧ ಮಾಡಿದ ವ್ಯಕ್ತಿ ಮತ್ತೊಮ್ಮೆ ಅಪರಾಧ ಕೃತ್ಯ ಎಸಗುವುದಿಲ್ಲ ಎಲ್ಲರೂ ಪಂಚಾಯತಿ ನಿಯಮಗಳಿಗೆ ಬದ್ಧರಾಗಿ ನಡೆದುಕೊಳ್ಳುತ್ತಾರೆ. ಇತ್ತೀಚೆಗೆ ಪಂಚಾಯತಿ ತನ್ನ ಸ್ಥಾನ-ಮಾನಗಳನ್ನು ಕಳೆದುಕೊಳ್ಳುತ್ತಿದ್ದು, ಸಣ್ಣ-ಪುಟ್ಟ ವ್ಯಾಜ್ಯಗಳಿಗೆ ಲಂಬಾಣಿಗರು ಪೋಲಿಸ್ ಠಾಣೆಗೆ ಹೋಗುತ್ತಿರುವುದು ಕಂಡುಬರುತ್ತದೆ.

**ಜನನ ಮತ್ತು ಮರಣ ಸಂಸ್ಕಾರಗಳು :**

**ಜನನ ಸಂಸ್ಕಾರಗಳು :**

ಹಿಂದೂಧರ್ಮದಲ್ಲಿ ಹುಟ್ಟಿದ ಮಗು ದುಷ್ಟಶಕ್ತಿಗಳಿಗೆ ಬಲಿಯಾಗದಿರಲಿ, ಆಯುಸ್ಸು, ಸಂಪತ್ತು ಆರೋಗ್ಯ, ಪ್ರಾಪ್ತವಾಗಲೆಂದು ಅನೇಕ ಸಂಸ್ಕಾರಗಳನ್ನು ಆಚರಿಸುತ್ತಾರೆ. ಅದೇ ರೀತಿ ಲಂಬಾಣಿಗರು ಮಗು ಜನಿಸಿದಾಗ ಕೆಲವು ಸಂಸ್ಕಾರಗಳನ್ನು ಆಚರಿಸುತ್ತಾರೆ. ಲಂಬಾಣಿ ಸಮುದಾಯ ಪುರುಷ ಪ್ರಧಾನವಾಗಿದೆ. ಆದ್ದರಿಂದ ಗಂಡುಮಗುವಿಗೆ ಹೆಚ್ಚಿನ ಪ್ರಾಸಸ್ತ್ಯ ನೀಡಿದ್ದು, ಗಂಡು ಮಗು ಜನಸಿದರೆ ಆ ಕುಟುಂಬಕ್ಕೆ ಮಾತ್ರವಲ್ಲ ಇಡೀ ತಾಂಡಾದ ಜನರು ಸಂತೋಷ ಪಡುತ್ತಾರೆ. ಗಂಡುಮಗುವಿನ ಜನನವಾದರೆ ನಗಾರಿ ಬಾರಿಸುತ್ತಾರೆ. ಇದರಿಂದ ಮಗು ಹುಟ್ಟಿದ ವಿಷಯ ತಾಂಡಾದ ಜನರಿಗೆ ಗೊತ್ತಾಗುತ್ತದೆ. ಗರ್ಭಿಣಿ ಸ್ತ್ರೀಗೆ ಹೆರಿಗೆ ನೋವು ಕಾಣಿಸಿಕೊಂಡರೆ ತಾಂಡಾದ ಅನುಭವಿ ಸ್ತ್ರೀಯರು ಸೇರಿ ಮನೆಯಲ್ಲಿ ಹೆರಿಗೆ ಮಾಡಿಸುತ್ತಾರೆ. ಹೆರಿಗೆ ಸಮಯದಲ್ಲಿ ತೊಂದರೆಯಾದರೆ ತಮ್ಮ ಕುಲದೇವತೆ, ಪೂರ್ವಜರಿಗೆ ಪ್ರಾರ್ಥಿಸುತ್ತಾರೆ. ಇವರು ಮುಟ್ಟು-ಮೈಲಿಗೆಯನ್ನು ಕಟ್ಟುನಿಟ್ಟಾಗಿ ಪಾಲಿಸುವುದರಿಂದ ಹೆರಿಗೆಯನ್ನು ಪ್ರತ್ಯೇಕ ಗುಡಿಸಲುಗಳಲ್ಲಿ ಮಾಡಿಸುತ್ತಾರೆ. ಬಾಣಂತಿಯನ್ನು ಕನಿಷ್ಠ ಒಂದು ತಿಂಗಳು ಮನೆಯಿಂದ ಪ್ರತ್ಯೇಕ ಇಡುತ್ತಾರೆ. ಮಗುವಿನಿಂದ ಬೇರ್ಪಡಿಸಿದ ನಾಭಿನಾಳವನ್ನು ಮಣ್ಣಿನ ಪಾತ್ರೆಯಲ್ಲಿ ಹಾಕಿ, ಅದರ ಜೊತೆ ಒಂದು ನಾಣ್ಯ, ಗೇರುಬೀಜ, ಹಿಟ್ಟು ಹಾಕಿ ಪ್ರಾಣಿ ಪಕ್ಷಿಗಳು ಅದನ್ನು ತೆಗೆದುಕೊಂಡು ಹೋಗಬಾರದೆಂದು ಮನೆಯ ಬಾಗಿಲಿನ ಹತ್ತಿರ

---

29. ಡಾ.ಪಿ.ಕೆ.ಖಂಡೋಬಾ: (1990) 'ತಾಂಡಾ ಸಂಸ್ಕೃತಿ,' ಪ್ರಚಾರ ಉಪನ್ಯಾಸ ಮಾಲೆ, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ಪುಟ.೧೬-೧೮

ಮುಚ್ಚುತ್ತಾರೆ. ಬಾಣಂತಿಗೆ ದುಷ್ಟಶಕ್ತಿಗಳು ಅಂಟಿಕೊಳ್ಳಬಾರದೆಂದು ಮಲಗುವ ಸ್ಥಳದಲ್ಲಿ ಲಿಂಬೆಹಣ್ಣು, ಕಸಬರಿಗೆ, ಕಬ್ಬಿಣದ ಸಲಾಕೆಯನ್ನು ಇಡುತ್ತಾರೆ.

**ಸಂತೋಷಕೂಟ :**

ಲಂಬಾಣಿಗರು ಹೆಣ್ಣುಮಗು ಜನಿಸಿದರೆ ಯಾವದೇ ಶಾಸ್ತ್ರ ಮಾಡುವುದಿಲ್ಲ. ಗಂಡು ಮಗು ಜನಿಸಿದರೆ ಸಾಯಂಕಾಲ ಮನೆಯನ್ನು ಪವಿತ್ರಗೊಳಿಸಿ, ಕುಲದೇವತೆ ಮತ್ತು ಪೂರ್ವಜರಿಗೆ ಪೂಜೆ ಸಲ್ಲಿಸಿ, ಕೂಡಿದ ಜನರಗೆ ಕೊಬ್ಬರಿ, ಬೆಲ್ಲ ಹಂಚುವ ಶಾಸ್ತ್ರಕ್ಕೆ 'ಏಕಳ ಪೋಯೇರೋ' ಎಂದು ಕರೆಯುತ್ತಾರೆ. ಈ ಸಂದರ್ಭದಲ್ಲಿ ಮುತ್ತೈದೆ ಸ್ತ್ರೀಯರಿಗೆ ಉಡಿ ತುಂಬಿ, ಮಂಗಳ ಗೀತೆಗಳನ್ನು ಹಾಡುತ್ತಾರೆ. ನಂತರ ಸ್ತ್ರೀಯರಿಗೆ ಕುಡಿಯಲು ಸಾರಾಯಿ ಹಂಚುತ್ತಾರೆ. ಲಂಬಾಣಿಗರಲ್ಲಿ ಸ್ತ್ರೀಯರಿಗೆ ಅಷ್ಟೊಂದು ಪ್ರಾಸಸ್ತ್ಯ ಇಲ್ಲದಿದ್ದರೂ ಕೂಡ ಹೆಣ್ಣು ಶಿಸುಹತ್ಯೆ ಮಾಡುವ ಕೀಳು ವೃತ್ತಿಗೆ ಇಳಿದಿಲ್ಲ.

**ದೀಪದರ್ಶನ ಸಂಸ್ಕಾರ (ದಳವಾಧೋಕಾಯೆರೊ) :**

ಗಂಡು ಮಗು ಜನಿಸಿ ನಾಲ್ಕು ದಿನಗಳಾದ ಮೇಲೆ ಆಚರಿಸುವ ಸಂಸ್ಕಾರಕ್ಕೆ 'ದಳವಾಧೋಕಾಯೆರೊ' ಎನ್ನುತ್ತಾರೆ. ಮಗುವಿಗೆ ಹೊಸಬಟ್ಟೆ ಧರಿಸಿ, ಸುತ್ತಲೂ ದೀಪ ಹಚ್ಚಿದ ಹಣತೆಗಳನ್ನಿಟ್ಟು ಮಗುವಿಗೆ ದೀಪಗಳ ಬೆಳಕನ್ನು ತೋರಿಸುತ್ತಾರೆ. ನಂತರ ಮಗುವಿನ ತಾಯಿ, ಗುರು ಹಿರಿಯರಿಗೆ ನಮಸ್ಕರಿಸಿ ಆಶೀರ್ವಾದ ಪಡೆಯುತ್ತಾಳೆ.

**ನಾಮಕರಣ ಸಂಸ್ಕಾರ :**

ಹುಟ್ಟಿದ ಮಗುವಿಗೆ ಶುಭ ಮೂಹೂರ್ತದಲ್ಲಿ ಹೆಸರಿಡುವ ಸಂಸ್ಕಾರವೇ ನಾಮಕರಣ. ಲಂಬಾಣಿಗರು ಮಗು ಹುಟ್ಟಿದ 27ನೇಯ ದಿನದಂದು ಅಥವಾ ಒಂದು ತಿಂಗಳ ಒಳಗೆ ಜೋತಿಷ್ಯರ ಹತ್ತಿರ ಹೋಗಿ ಮಗು ಜನಿಸಿದ ಕಾಲ, ವೇಳೆ, ಘಳಿಗೆಗೆ ಅನುಸಾರವಾಗಿ ಶಾಸ್ತ್ರಗಳನ್ನು ಪರಿಶೀಲಿಸಿ ಹೆಸರುಗಳನ್ನು ಕೇಳಿಕೊಂಡು ಮಕ್ಕಳಿಗೆ ಇಡುತ್ತಾರೆ. ಮಕ್ಕಳಿಗೆ ರಕ್ಷಣೆ ದೊರೆಯಲೆಂದು ಕುಲದೇವರು, ಪೂರ್ವಜರ ಹೆಸರುಗಳನ್ನು ಇಡುತ್ತಾರೆ.

**ಅಂತೇಷ್ಠಿ ಸಂಸ್ಕಾರ (ಮರಣ ಸಂಸ್ಕಾರ) :**

ಪ್ರತಿಯೊಂದು ಧರ್ಮದಲ್ಲಿ ವ್ಯಕ್ತಿಗೆ ಹುಟ್ಟಿನಿಂದ ಹಿಡಿದು ಸಾಯುವವರೆಗೆ ಅನೇಕ ಸಂಸ್ಕಾರಗಳನ್ನು ನೆರವೇರಿಸುತ್ತಾರೆ. ಹಿಂದುಗಳಲ್ಲಿರುವಂತೆ ಲಂಬಾಣಿಗರಲ್ಲಿ ಪುನರ್‌ಜನ್ಮದ ನಂಬಿಕೆ ಇರುವುದರಿಂದ ಸತ್ತ ವ್ಯಕ್ತಿಗೆ ಮುಕ್ತಿ ದೊರಕಿಸಿಕೊಡಲು ಕೆಲವು ಸಂಸ್ಕಾರ ವಿಧಿಗಳನ್ನು ಆಚರಿಸುತ್ತಾರೆ. ಸಂಸ್ಕಾರಗಳನ್ನು ಆಚರಿಸದೇ ಹೋದರೆ ಮೃತ ವ್ಯಕ್ತಿ ಪಿಶಾಚಿಯಾಗಿ ಅಲೆಯುತ್ತಾನೆಂಬ ನಂಬಿಕೆ ಇದೆ. ಲಂಬಾಣಿಗರು ಹೆಣವನ್ನು ಸ್ಮಶಾನಕ್ಕೆ ಸಾಗಿಸುವವರೆಗೆ ಭಯದಿಂದ ಮನೆಯಲ್ಲಿ ಅಡುಗೆ, ಸ್ನಾನ ಮಾಡುವುದಿಲ್ಲ. ಸತ್ತ ವ್ಯಕ್ತಿಯನ್ನು ಬಾಗಿಲಿಗೆ ನೇರವಾಗಿ ಅಡ್ಡಲಾಗಿ ಮಲಗಿಸಿ ತಲೆಯ ಹತ್ತಿರ ಹಣತೆ ಹಚ್ಚಿಡುತ್ತಾರೆ. ಕಟ್ಟಿಗೆಯ ಚಟ್ಟವನ್ನು ತಯಾರಿಸಿ ಹೆಣ ಅಡ್ಡಲಾಗಿ ಮಲಗಿಸಿ, ಮೇಲೆ ಬಿಳಿಬಟ್ಟೆ ಹಾಕಿ, ದಾರಿಯಲ್ಲಿ ಖರ್ಚಿಗೆ ಹಣ

ಬೇಕಾಗಬಹುದೆಂಬ ನಂಬಿಕೆಯಿಂದ ಒಂದು ನಾಣ್ಯವನ್ನು ಬಟ್ಟೆಗೆ ಕಟ್ಟುತ್ತಾರೆ. ಸ್ತ್ರೀಯರು ಮತ್ತು ಮಕ್ಕಳು ಸ್ಮಶಾನಕ್ಕೆ ಹೋಗುವುದನ್ನು ನಿಷೇಧಿಸಲಾಗಿದೆ. ಅವಿವಾಹಿತರನ್ನು ಹೂಳುತ್ತಾರೆ. ವಿವಾಹಿತರನ್ನು ಸುಡುತ್ತಾರೆ. ಮೃತನ ಹಿರಿಯ ಮಗ ಮೊದಲು ಚಿತೆಗೆ ಬೆಂಕಿ ಇಡುತ್ತಾನೆ. ನಂತರ ನೆರೆದ ಜನರು ಬೆಂಕಿಯಲ್ಲಿ ಕಟ್ಟಿಗೆಯ ಚೂರುಗಳನ್ನು ಎಸೆಯುತ್ತಾರೆ. ನಂತರ ಮೃತನ ಹಿರಿಯ ಮಗ ಉದ್ದವಾದ ಕೋಲಿನಿಂದ ಮೃತನ ತಲೆಗೆ 7 ಸಲ ತಿವಿಯುತ್ತಾನೆ. ಇದಕ್ಕೆ 'ಟಿಂಚೋದೇರೋ' ಎನ್ನುತ್ತಾರೆ. ಹೀಗೆ ಮಾಡುವುದರಿಂದ ಮೃತನಿಗೆ ಮುಕ್ತಿ ಸಿಗುವದೆಂಬ ನಂಬಿಕೆ ಇದೆ. ಶವಸಂಸ್ಕಾರ ಮುಗಿಸಿ ಸ್ಮಶಾನದಿಂದ ಹಿಂತಿರುಗಿ ಬರುವಾಗ ಜನರು ಹತ್ತಿರದ ಭಾವಿ ಅಥವಾ ಕೆರೆಗೆ ಹೋಗಿ ಕೈಕಾಲು ಮುಖ ತೊಳೆದುಕೊಂಡು, ಬಾರಿಗಿಡದ ತಪ್ಪಲನ್ನು ಮುಟ್ಟಿ, ನಂತರ ನೇರವಾಗಿ ಮೃತನ ಮನೆಯ ಮುಂದೆ ಸೇರಿರುತ್ತಾರೆ. ಬಂಧು ಬಾಂದವರಿಗೆ ನಾಯಕ ಹಿತನುಡಿಗಳನ್ನು ಹೇಳುತ್ತಾನೆ. ನಂತರ ಎಲ್ಲ ಜನರು ಮೃತನ ಸಂಬಧಿಕರಿಗೆ 'ಹೋಕಾ' ಕೊಟ್ಟು ನಮಸ್ಕರಿಸಿ ತಮ್ಮ ತಮ್ಮ ಮನೆಗೆ ಹೋಗಿ ಅಡುಗೆ ತಯಾರಿಸಿ ಮೃತನ ಕುಟುಂಬದವರಿಗೆ ಕೊಡುತ್ತಾರೆ.

**ತಿಥಿ ಮಾಡುವುದು :**

ವ್ಯಕ್ತಿ ಸತ್ತು ಮೂರನೆಯ ದಿನದಂದು ತಿಥಿ ಮಾಡುವುದನ್ನು 'ದಾಡೊಕರೆರೊ' ಎಂದು ಕರೆಯುತ್ತಾರೆ. ವ್ಯಕ್ತಿ ಶನಿವಾರ, ಮತ್ತು ರವಿವಾರ ಅಥವಾ ಅಮವಾಸ್ಯೆಯ ದಿನ ಸತ್ತರೆ ಪಿಶಾಚಿಗಳಾಗುತ್ತಾರೆಂದು ತಿಥಿಯನ್ನು ಅದೇ ದಿನ ಮಾಡಿ ಮುಗಿಸುತ್ತಾರೆ. ಜನರೆಲ್ಲರು ಸೇರಿ ತಾಂಡಾದ ಹತ್ತಿರವಿರುವ ಭಾವಿ ಅಥವಾ ಕೆರೆಯ ದಂಡೆಯ ಮೇಲೆ ಹೋಗಿ ಗೋದಿ ಮಾದ್ಲಿ ತಯಾರಿಸಿ ತಿನ್ನುವುದಕ್ಕಿಂತ ಮೊದಲು ಇಬ್ಬರು ಅನುಭವಿ ವ್ಯಕ್ತಿಗಳು ಸ್ಮಶಾಸಕ್ಕೆ ಹೋಗಿ ಹೆಣವನ್ನು ಸುಟ್ಟ ಬೂದಿಯಲ್ಲಿ ಮೂಡಿದ ಚಿನ್ಹೆ ಪರೀಕ್ಷಿಸುತ್ತಾರೆ. ಬೂದಿಯಲ್ಲಿ ಯಾವುದೇ ಪ್ರಾಣಿಯ ಕಾಲಿನ ಗುರುತುಗಳು ಕಂಡುಬಂದರೆ ಮೃತನು ಆ ಪ್ರಾಣಿಯ ಜನ್ಮಕ್ಕೆ ಸೇರಿದ್ದಾನೆಂದು ಹೇಳುತ್ತಾರೆ. ನಂತರ ಮಾದಲಿ ತಿಂದು ಮರಳಿ ಬಂದು ಪ್ರತಿಮನೆಯಿಂದ ಹಣ ಸಂಗ್ರಹಿಸಿ ಕುರಿ ಬಲಿಕೊಟ್ಟು ಮೃತನ ಬಂಧು ಬಾಂಧವರಿಗೆ ಊಟ ಮಾಡಿಸಿ ಸಮಾಧಾನ ಹೇಳುತ್ತಾರೆ. ಇದನ್ನು 'ಹಾಡಭಾಂದೇರೊ' ಎನ್ನುತ್ತಾರೆ. ವ್ಯಕ್ತಿಸತ್ತು ಹನ್ನೆರಡು ಮತ್ತು ಹದಿಮೂರನೆಯ ದಿನಗಳಂದು ಮನೆಯಲ್ಲಿ ಆಚರಿಸುವ ತಿಥಿಗೆ 'ಬಾರೋತೇರೊ' ಎಂದು ಕರೆಯುತ್ತಾರೆ. 12ನೆಯ ದಿನ ಮನೆಯಲ್ಲಿ ತಿಥಿ ಮಾಡುತ್ತಾರೆ. ಹದಿಮೂರನೆಯ ದಿನ ಮನೆಯ ಹೊರಗೆ ತಿಥಿ ಮಾಡಿ ಸಿಹಿ ಅಡುಗೆಯನ್ನು ತಯಾರಿಸಿ ಮೃತನಿಗೆ ನೈವೇದ್ಯ ಮಾಡಿ ತಾಂಡಾಗ ಜನರಿಗೆ ಊಟ ಹಾಕುತ್ತಾರೆ. ಈ ರೀತಿ 'ಅಂತೇಷ್ಠಿ' ಸಂಸ್ಕಾರವನ್ನು ಲಂಬಾಣಿಗರು ಭಿನ್ನ ರೀತಿಯಲ್ಲಿ ಆಚರಿಸುತ್ತಾರೆ.

**ಮಾಟ-ಮಂತ್ರ (Magic) :**

ಭಾರತದಲ್ಲಿ ವಾಸಿಸುವ ಅನೇಕ ಜನಾಂಗಗಳಲ್ಲಿ ಕಂಡುಬರುವಂತೆ ಲಂಬಾಣಿಗರಲ್ಲಿಯೂ, ಮಾಟ-ಮಂತ್ರ ಕಂಡುಬರುತ್ತದೆ. ಇವರಲ್ಲಿ ಪುರುಷ ಮಾಂತ್ರಿಕನನ್ನು 'ಗಿಡಗಾರಿ' ಎಂದೂ, ಸ್ತ್ರೀ ಮಾಂತ್ರಿಕಳನ್ನು 'ಡಾಕಣ' ಎಂದು ಕರೆಯುತ್ತಾರೆ. ಲಂಬಾಣಿಗರು ತಮಗೆ ಆಗದಿರುವವರ ಮೇಲೆ ಮಾಟ-ಮಂತ್ರಗಳ ಪ್ರಯೋಗ ಮಾಡಿಸುತ್ತಾರೆ. ಇದಕ್ಕಾಗಿ ವೈರಿಯ ಪಾದಗಳ ಧೂಳು, ಬಟ್ಟೆ, ಕೂದಲುಗಳನ್ನು ಅವನಿಗೆ

ಗೊತ್ತಾಗದಂತೆ ತಂದು ಮಾಟ-ಮಂತ್ರ ಮಾಡಿಸುತ್ತಾರೆ. ಅಥವಾ ಆಹಾರ ಉದಾರ್ಥಗಳಲ್ಲಿ ಮಂತ್ರಿಸಿದ ಬೂದಿ ಅಥವಾ ಸಕ್ಕರೆ, ತಿನ್ನಿಸುವುದರ ಮೂಲಕ ವೈರಿಗೆ ಕೆಡಕನ್ನುಂಟು ಮಾಡುತ್ತಾರೆ. ಇದರ ಪರಿಣಾಮವಾಗದಿದ್ದರೆ ಸೂಜಿಚುಚ್ಚಿದ ಲಿಂಬೆಹಣ್ಣು, ಕ್ಯಾರಬೀಜ, ಡಬ್ಬಣ, ಕೋಳಿ ಮೊಟ್ಟೆ, ಗೊಂಬೆ ಮುಂತಾದವುಗಳನ್ನು ಮಾಂತ್ರಿಕನಿಂದ ಮಂತ್ರಿಸಿ ಅಮವಾಸ್ಯೆಯ ದಿನ ರಾತ್ರಿ ವೈರಿಯ ಮನೆಯ ಮಾಳಿಗೆಯ ಮೇಲೆ, ಮನೆಯ ಮುಂದೆ ಇಲ್ಲವೆ ಹೊಲ-ಗದ್ದೆಗಳಲ್ಲಿ ಹುಗಿಯುತ್ತಾರೆ. ಹೀಗೆ ಮಾಡುವುದರಿಂದ ವೈರಿಯ ಮನೆಯವರಿಗೆ ಕಾಡಾಟಗಳು ಪ್ರಾರಂಭವಾಗುತ್ತವೆ. ಎಂದು ನಂಬುತ್ತಾರೆ.

ಮಾಂತ್ರಿಕರು ದುಷ್ಮಶಕ್ತಿಯನ್ನು ಪೂಜಿಸುವವರಾಗಿದ್ದು, ಆ ಶಕ್ತಿಗಳ ಆಜ್ಞೆ ಅನುಸರಿಸಿ ಮಾಟ ಮಂತ್ರ ಮಾಡುವುದಾಗಿ ಹೇಳಿಕೊಳ್ಳುತ್ತಾರೆ. ಮಾಂತ್ರಿಕರು ಅಮವಾಸ್ಯೆಯ ದಿನ ರಾತ್ರಿ ಸ್ಮಶಾಸದಲ್ಲಿ ಸಿದ್ಧಿ ಪ್ರಾಪ್ತಿ ಮಾಡಲು ಕಳೆಯುತ್ತಾರೆ. ಸ್ತ್ರೀಮಾಂತ್ರಿಕಳು ಅಮವಾಸ್ಯೆಯ ದಿನ ಮನೆಯಲ್ಲಿ ಒಬ್ಬಂಟಿಗಳಾಗಿ ಬೆತ್ತಲೆ ಕುಣಿದು ದುಷ್ಮದೈವಶಕ್ತಿಗಳನ್ನು ಒಲಿಸಿಕೊಳ್ಳುತ್ತಾಳೆ ಎಂದು ಲಂಬಾಣಿಗರ ಅಭಿಪ್ರಾಯವಾಗಿದೆ. ಈ ಮಾಂತ್ರಿಕರ ದೃಷ್ಮಿ ದುಷ್ಟಶಕ್ತಿಯನ್ನು ಹೊಂದಿದೆ ಎಂದು ನಂಬುತ್ತಾರೆ. ಇವರು ಒಳ್ಳೆಯ ಆಹಾರ ಪದಾರ್ಥಗಳನ್ನು ನೋಡಿದರೆ ಕೆಟ್ಟುಹೋಗುತ್ತವೆ. ಸುಂದರವಾದ ಮಕ್ಕಳನ್ನು ನೋಡಿದರೆ ಮಕ್ಕಳ ಮೈಬೆಚ್ಚಗಾಗಿ ಕಿರಿ-ಕಿರಿ ಮಾಡುತ್ತವೆ. ಅದೇ ರೀತಿ ಊಟಮಾಡುವಾಗ, ಪ್ರಾಣಿಗಳ ಹಾಲು ಕರೆಯುವಾಗ, ಇವರ ದೃಷ್ಮಿ ಬಿದ್ದರೆ ಹೊಟ್ಟೆಕೆಡುತ್ತದೆ. ಮತ್ತು ಪ್ರಾಣಿಗಳು ಹಾಲು ಹಿಂಡುವುದನ್ನು ನಿಲ್ಲಿಸಿಬಿಡುತ್ತವೆ. ಅದಕ್ಕಾಗಿ ಲಂಬಾಣಿಗರು ಮಾಂತ್ರಿಕರ ಮುಂದೆ ಚಿಕ್ಕ ಮಕ್ಕಳನ್ನು ತರುವುದಿಲ್ಲ, ಅವರ ಮುಂದೆ ಊಟ ಮಾಡುವುದಿಲ್ಲ. ಹಾಲು ಕರೆಯುವುದಿಲ್ಲ, ಮಾಂತ್ರಿಕರೆಂದರೆ ಇವರಿಗೆ ಎಲ್ಲಿಲ್ಲದ ಭಯ. ಆಕಸ್ಮಾತಾಗಿ ಮಾಂತ್ರಿಕರು ಮಾಡುವ ಮಾಟ ಮಂತ್ರಗಳು ಪ್ರಯೋಗವಾದರೆ ಮತ್ತೊಬ್ಬ ಮಾಂತ್ರಿಕನ ಹತ್ತಿರ ಹೋಗಿ ಅಥವಾ ತಾಂಡಾದಲ್ಲಿರುವ ಧಾರ್ಮಿಕ ಗುರು(ಭಗತ)ನ ಹತ್ತಿರ ಹೋಗಿ ಸಮಸ್ಯೆ ನಿವಾರಿಸಿಕೊಳ್ಳುತ್ತಾರೆ. ಭಗತನನ್ನು ಕಂಡರೆ ಮಾಂತ್ರಿಕರು ಹೆದರುತ್ತಾರೆ.

**ಮೂಢನಂಬಿಕೆಗಳು :**

ಅಲೆಮಾರಿಗಳಾದ, ಹಾಗೂ ಅಶಿಕ್ಷತರಾದ ಲಂಬಾಣಿಗರಲ್ಲಿ ತುಂಬಾ ವಿಚಿತ್ರವಾದ ಮೂಢನಂಬಿಕೆಗಳು ಕಂಡುಬರುತ್ತವೆ. ಇವರು ಕರ್ಮ ಸಿದ್ಧಾಂತದಲ್ಲಿ ನಂಬಿಕೆವುಳ್ಳವರಾಗಿದ್ದು, ವ್ಯಕ್ತಿ ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮಗಳ ಆಧಾರದ ಮೇಲೆ ಪುನರ್‌ಜನ್ಮ ನಿರ್ಧಾರವಾಗುತ್ತದೆಂದು ನಂಬುತ್ತಾರೆ. ಹಿಂದಿನ ಜನ್ಮದಲ್ಲಿ ಒಳ್ಳೆಯ ಕೆಲಸ ಕಾರ್ಯಗಳನ್ನು ಮಾಡಿದ್ದರೆ ಅಂಥವರು ಪುನಃ ಮಾನವರಾಗಿ, ಕೆಟ್ಟ ಕೆಲಸ ಕಾರ್ಯಗಳನ್ನು ಮಾಡಿದ್ದರೆ, ಪ್ರಾಣಿಗಳಾಗಿ ಜನ್ಮ ಪಡೆಯುತ್ತಾರೆಂದು ನಂಬಿದ್ದಾರೆ. ಭೂತ-ಪಿಶಾಚಿಗಳಲ್ಲಿ ನಂಬಿಕೆ ಇರಿಸಿದ ಇವರು ವ್ಯಕ್ತಿ ಮಧ್ಯವಯಸ್ಸಿನಲ್ಲಿ ಸತ್ತರೆ ಅಪಾರ ಬಂಧು-ಬಾಂಧವರನ್ನು ಅಗಲಿದ್ದರೆ, ಆಶಾವಾದಿಗಳಾಗಿದ್ದರೆ, ಅಂಥವರು ಪಿಶಾಚಿಗಳುತ್ತಾರೆಂದು ನಂಬಾತ್ತಾರೆ. ಅದೇ ರೀತಿ ಅಮವಾಸ್ಯೆ, ಶನಿವಾರ, ಅಥವಾ ರವಿವಾರ ದಿನ ಮರಣ ಹೊಂದಿದರೆ, ಮತ್ತೊಬ್ಬ ವ್ಯಕ್ತಿಯನ್ನು ಬಲಿತೆಗೆದು ಕೊಳ್ಳುತ್ತಾರೆಂದು ನಂಬುತ್ತಾರೆ. ವಯಸ್ಸಾದವರು ಸತ್ತರೆ ದೈವಶಕ್ತಿಯಾಗಿ ಕಷ್ಟ-ಸಂಕಷ್ಮದಲ್ಲಿ ತಮ್ಮ ಸಹಾಯಕ್ಕೆ ಬರುವರೆಂದು ನಂಬುತ್ತಾರೆ. ಮೃತ ವ್ಯಕ್ತಿಯನ್ನು ಸ್ಮಶಾನಕ್ಕೆ ಸಾಗಿಸುವಾಗ ಅವನ ಹಿಂದೆ

ನವಣೆಯ ಕಾಳುಗಳನ್ನು ಚಲ್ಲುತ್ತಾ ಹೋಗುತ್ತಾರೆ. ಕಾರಣ ಆತ ಪಿಶಾಚಿ ಆದರೆ ರಾತ್ರಿ ಮನೆಗೆ ಮರಳಿಬರುವಾಗ ನವಣೆಯ ಕಾಳುಗಳನ್ನು ಆಯ್ದು ತಿನ್ನುತ್ತ ಮನೆ ತಲುಪುವದರೊಳಗೆ ಬೆಳಕಾಗುತ್ತದೆ,. ಆಗ ಮನೆಗೆ ಬರದೆ ಹಿಂತಿರುಗಿ ಹೋಗುತ್ತಾನೆಂದು ನಂಬುತ್ತಾರೆ. ವ್ಯಕ್ತಿ ಆತ್ಮಹತ್ಯೆ ಮಾಡಿಕೊಂಡರೆ, ಅಪಘಾತಕ್ಕೀಡಾಗಿ ಸತ್ತರೆ, ಬಾಣಂತಿ ಸತ್ತರೆ, ಖಂಡಿತ ಪಿಶಾಚಿಗಳಾಗುತ್ತಾರೆಂದು ನಂಬಿ, ರಾತ್ರಿ ವೇಳೆಯಲ್ಲಿ ಮನೆಯಿಂದ ಹೊರಗೆ ಬರಲು ಭಯಪಡುತ್ತಾರೆ. ಮೃತನ ಬಂಧುಗಳು ಪಿಶಾಚಿ ಮನೆಯ ಹತ್ತಿರ ಸುಳಿಯಬಾರದೆಂದು ಮಾಂತ್ರಿಕ ಮಂತ್ರಿಸಿಕೊಟ್ಟ ಲಿಂಬೆಹಣ್ಣು, ಕಬ್ಬಿಣದ ತುಂಡುಗಳನ್ನು ಹುಗಿಯುತ್ತಾರೆ. ಬಿರುಗಾಳಿ ಬೀಸಿದರೆ ಭೂತಗಳಿಂದ ನಿರ್ಮಿತವಾದ ಗಾಳಿ ಎಂದೂ ವ್ಯಕ್ತಿಗೆ ಕಾಯಿಲೆಯಾದರೆ, ದೆವ್ವದ ಕಾಡಾಟಗಳಿಂದಾಗಿದೆ ಎಂದು ನಂಬಿ ಪರಿಹಾರಕ್ಕಾಗಿ ಮಾಂತ್ರಿಕನ ಹತ್ತಿರ ಹೋಗಿ ಅವನ ಸೂಚನೆಯ ಮೇರೆಗೆ ಕೋಳಿ, ಪಂಚಫಳಾರ, ಲಿಂಬೆಹಣ್ಣು, ಗೇರುಬೀಜ, ಗೊಂಬೆ ಮುಂತಾದವುಗಳನ್ನು ಅವನ ಮೇಲೆ ಇಳಿಸಿ ಸ್ಮಶಾನದ ಕಡೆ ಎಸೆದುಬರುತ್ತಾರೆ. ಹೀಗೆ ಮಾಡುವುದರಿಂದ ವ್ಯಕ್ತಿಗೆ ಅಂಟಿಕೊಂಡ ವಿಪತ್ತು ಪರಿಹಾರವಾಯಿತೆಂದು ನಂಬುತ್ತಾರೆ. ಹೀಗೆ ಎಸೆದ ವಸ್ತುಗಳನ್ನು ಯಾರಾದರೂ ತುಳಿದರೆ ಅವರಿಗೆ ಪೀಡೆ ಅಂಟಿಕೊಳ್ಳುತ್ತದೆಂದು ನಂಬಿದ್ದಾರೆ. ಅಮವಾಸ್ಯೆ ಬಂದರೆ ರಾತ್ರಿ ದೆವ್ವಗಳು ಅಲೆದಾಡುತ್ತವೆಂದು ಹುಣಸೆಮರಗಳಲ್ಲಿ, ಆಲದಮರಗಳಲ್ಲಿ ದೆವ್ವಗಳು ವಾಸವಾಗುತ್ತವೆಂದು ನಂಬಿ ಈ ಮರಗಳನ್ನು ಮನೆಯ ಮುಂದೆ ಬೆಳೆಸುವುದಿಲ್ಲ. ರಾತ್ರಿ ವೇಳೆಯಲ್ಲಿ ನಾಯಿಗಳು ಜೋರಾಗಿ ಬೊಗಳಿದರೆ ದೆವ್ವಗಳು ಅಲೆದಾಡುತ್ತಿವೆ ಎಂದು ನಂಬುತ್ತಾರೆ. ಲಂಬಾಣಿಗರು ಶುಭಕಾರ್ಯಗಳನ್ನು ನೆರವೇರಿಸಲು ಹೊರಟಾಗ ಎದುರಿಗೆ ತುಂಬಿದ ಕೊಡ ಕಾಣಿಸಿಕೊಂಡರೆ, ಹಲ್ಲಿಯ ಶಬ್ದ ಕೇಳಿದರೆ, ಹೆಣ ಎದುರಾದರೆ, ನರಿ, ರತನಪಕ್ಷಿ ಎದುರಾದರೆ ಶುಭಸಂಕೇತ ಎಂದು ನಂಬುತ್ತಾರೆ. ಅದೇ ರೀತಿ ಕ್ಷೌರಿಕ ಕಂಡರೆ, ಬೆಕ್ಕು ಅಡ್ಡಲಾಗಿ ಬಂದರೆ, ಖಾಲಿ ಕೊಡ, ಕಸಬರಿಗೆ ಎದುರಾದರೆ, ಕತ್ತೆಗಳು ಕೂಗಿದರೆ ಅಶುಭಕರ ಸಂಕೇತಗಳೆಂದು ತಿಳಿದು ಪ್ರಯಾಣ ರದ್ದು ಮಾಡುತ್ತಾರೆ. ಕನ್ಯೆ ನೋಡಲು ಹೊರಟಾಗ ದಾರಿಯಲ್ಲಿ ತೋಳ, ಹಾವು ಕಂಡರೆ ಕೆಡಕು ಸಂಭವಿಸುತ್ತದೆಂದು ನಂಬಿ ಹಿಂತಿರುಗುತ್ತಾರೆ. ವಿವಾಹವಾಗಿ ಮದುಮಗಳನ್ನು ಕರೆತರುವಾಗ ತೋಳ ಕಂಡರೆ, ತಾಂಡಾಗಳಲ್ಲಿ ಗೂಬೆ ಕೂಗಿದರೆ, ಕೆಡಕಾಗುವುದೆಂದು ಬಲಿಕೊಟ್ಟು ಶಾಂತಿ ಮಾಡಿ ಪರಿಹಾರ ಕಂಡುಕೊಳ್ಳುತ್ತಾರೆ. ಸ್ತ್ರೀಯರು ದೇಹದ ಮೇಲೆ ಹಚ್ಚೆ ಹಾಕಿಸಿಕೊಳ್ಳದಿದ್ದರೆ ಸ್ವರ್ಗ ಸಿಗುವುದಿಲ್ಲವೆಂದೂ ಅಂಥವರಿಗೆ ನರಕ ಸಿಗುವುದೆಂದು ನಂಬಿ ಹಚ್ಚೆ ಹಾಕಿಸಿಕೊಳ್ಳುತ್ತಾರೆ. ಬಾಣಂತಿಗೆ ದುಷ್ಟಶಕ್ತಿಗಳು ಭೂತಪಿಶಾಚಿಗಳು ಅಂಟಿಕೊಳ್ಳಬಾರದೆಂದು ಮಲಮೂತ್ರಕ್ಕೆ ಹೋಗುವಾಗ ಕೈಯಲ್ಲಿ ಕುಡುಗೋಲು ಕೊಡುತ್ತಾರೆ. ಅವಳು ಮಲಗುವ ಜಾಗದಲ್ಲಿ ಕಸಬರಿಗೆ ಕಬ್ಬಿಣದ ವಸ್ತುಗಳನ್ನು ಇಡುತ್ತಾರೆ. ಬೆಂಕಿಯ ಹತ್ತಿರ ಹಾಗೂ ದನಕರುಗಳ ಹತ್ತಿರ ದೆವ್ವಗಳು ಸುಳಿಯುವುದಿಲ್ಲ ಎಂದು ರಾತ್ರಿ ವೇಳೆಯಲ್ಲಿ ಬೆಂಕಿ ಹಚ್ಚುತ್ತಾರೆ. ಹೀಗೆ ಲಂಬಾಣಿಗರಲ್ಲಿ ಅನೇಕ ಮೂಢನಂಬಿಕೆಗಳು ಇವತ್ತಿಗೂ ಕಂಡುಬರುತ್ತವೆ.

**ಆಹಾರ ಪದ್ಧತಿಗಳು (Food Habits) :**

ಲಂಬಾಣಿಗರು ಮೊದಲಿನಿಂದಲು ವ್ಯಾಪಾರ ಮಾಡುತ್ತ ಅಲೆಮಾರಿ ಜೀವನ ಸಾಗಿಸುತ್ತಿದ್ದರಿಂದ ಹಾಗೂ ಗುಡ್ಡ-ಗಾಡು ಪ್ರದೇಶದಲ್ಲಿ ವಾಸವಾಗಿರುವುದರಿಂದ ಸಾಮಾನ್ಯವಾಗಿ ಮಾಂಸಾಹಾರಿಗಳಾಗಿದ್ದಾರೆ.

ಮಾಂಸಾಹಾರ, ಸಾರಾಯಿ ಎಂದರೆ ಇವರಿಗೆ ಬಲುಪ್ರೀತಿ, ಇವತ್ತಿಗೂ ಲಂಬಾಣಿಗರು ತಮ್ಮ ದುಡಿಮೆಯ ಪ್ರತಿಫಲವನ್ನು ಹೆಚ್ಚಾಗಿ ಮಾಂಸ ಮತ್ತು ಮದ್ಯಪಾನಕ್ಕಾಗಿ ವ್ಯಯಮಾಡುತ್ತಾರೆ. ಮನೆಗೆ ನೆಂಟರು ಬಂದರೆ ಮಾಂಸ, ಮತ್ತು ಮದ್ಯ ಒದಗಿಸುವ ಪದ್ಧತಿ ಇವರಲ್ಲಿ ರೂಢಿಲ್ಲಿದೆ. ಇಂದು ಲಂಬಾಣೇತರ ಜನರ ಪ್ರಭಾವದಿಂದ ಆಹಾರ ಪದ್ಧತಿಗಳಲ್ಲಿ ಬದಲಾವಣೆ ಮಾಡಿಕೊಂಡಿದ್ದು, ಮಾಂಸಾಹಾರದ ಜೊತೆಗೆ ರೊಟ್ಟಿ, ಮೆಣಸಿನಕಾಯಿ ಹಾಗೂ ಅರಣ್ಯದಲ್ಲಿ ಸಿಗುವ ಅಣಬೆ, ಕಂಚಿಕಾಯಿ, ವಿವಿಧ ಬಗೆಯ ಸೊಪ್ಪು ಬಳಸುತ್ತಾರೆ. ಹಸಿಮೆಣಸಿನಕಾಯಿ ಚಟ್ನಿ ಎಂದರೆ ಇವರಿಗೆ ಬಲು ಪ್ರೀತಿ ಹಬ್ಬ-ಹರಿದಿನಗಳ ಸಂದರ್ಭದಲ್ಲಿ ಹೋಳಿಗೆ, ಪಾಯಸ, ಕಡಬು ಮುಂತಾದ ಸಿಹಿ ಪದಾರ್ಥಗಳನ್ನು ತಯಾರಿಸುತ್ತಾರೆ. ಸಾಮಾನ್ಯವಾಗಿ ಹಬ್ಬದ ಮಾರನೆಯ ದಿನ ಇವರು ಬೇಟೆಯಾಡಲು ಹೋಗುವ ಸಂಪ್ರದಾಯವಿದ್ದು, ಪಕ್ಷಿ ಮೊಲ, ಚಿಗರೆ, ಕಾಡುಕೋಳಿ ಮುಂತಾದವುಗಳ ಬೇಟೆಯಾಡಿ, ಅವುಗಳ ಮಾಂಸವನ್ನು ಬಳಸುತ್ತಾರೆ. ಇದಲ್ಲದೆ ಕುರಿ, ಕೋಳಿ, ಮೀನು, ಆಡುಗಳ ಮಾಂಸವನ್ನು ಸೇವಿಸುತ್ತಾರೆ. ಆದರೆ ದನ, ಹಂದಿಯ ಮಾಂಸವನ್ನು ಬಳಸುವುದಿಲ್ಲ. ಇತ್ತೀಚೆಗೆ ಶಿಕ್ಷಣ ಪಡೆದು ನಗರ ಪ್ರದೇಶಗಳಲ್ಲಿ ನೆಲೆಸಿರುವ ಲಂಬಾಣಿಗರು. ಮಾಂಸಾಹಾರವನ್ನು ತ್ಯಜಿಸುತ್ತಿರುವುರು ಕಂಡುಬರುತ್ತದೆ.

ಅಧ್ಯಾಯ ೨

---

## ವಿಜಾಪುರ ಜಿಲ್ಲೆಯ ಲಂಬಾಣಿ ತಾಂಡಾಗಳ ಸಾಮಾಜಿಕ-ಆರ್ಥಿಕ ರೂಪರೇಷೆಗಳು

## (Lambani Thandas of Bijapur District-A Socio-Economic Profile)

ವಲಸೆಯ ಮೇಲೆ ಸಾಮಾಜಿಕ, ಆರ್ಥಿಕ, ಭೌಗೋಳಿಕ, ಜನಸಂಖ್ಯಾ ಅಂಶಗಳು ಪ್ರಭಾವಬೀರುತ್ತವೆ. ಕುಟುಂಬದ ಕೆಳಮಟ್ಟದ ಆರ್ಥಿಕ ಅಂಶಗಳು ಜನರು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ವಲಸೆ ಹೋಗುವುದನ್ನು ಅನಿವಾರ್ಯಗೊಳಿಸುತ್ತವೆ. ಆದ್ದರಿಂದ ಪ್ರಸ್ತುತ ಅಧ್ಯಾಯದಲ್ಲಿ ಗೋವೆಗೆ ವಲಸೆ ಹೋಗಿರುವ ವಿಜಾಪುರ ಜಿಲ್ಲೆಯ ನರಸಲಗಿ ತಾಂಡಾದ ವಲಸಿಗರ ಕೌಟುಂಬಿಕ ಹಿನ್ನೆಲೆಯನ್ನು ತಿಳಿಯುವುದಾಗಿದೆ ಈ ಅಧ್ಯಾಯದಲ್ಲಿ ವಲಸಿಗರ ಕುಟುಂಬದ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ಹಾಗೂ ಜನಸಂಖ್ಯೆ ಮುಂತಾದ ಅಂಶಗಳನ್ನು ಚರ್ಚಿಸಲಾಗಿದೆ. ಪ್ರಸ್ತುತ ಅಧ್ಯಾಯವನ್ನು ಕ್ಷೇತ್ರಕಾರ್ಯದಿಂದ ಸಂಗ್ರಹಿಸಿದ ಪ್ರಾಥಮಿಕ ಮಾಹಿತಿ ಹಾಗೂ ಮಾಧ್ಯಮಿಕ ಮಾಹಿತಿಗಳನ್ನು ಬೇರೆ ಬೇರೆ ಪ್ರಕಟಿತ ಮೂಲಗಳಿಂದ ಪಡೆದ ಮಾಹಿತಿಗಳ ಆಧಾರದ ಮೇಲೆ ರಚಿಸಲಾಗಿದೆ.

**ವಿಜಾಪುರ ಜಿಲ್ಲೆಯ ಸಂಕ್ಷಿಪ್ತ ಪರಿಚಯ:**

ಭಾರತ ದೇಶದಲ್ಲಿ ಕರ್ನಾಟಕ ರಾಜ್ಯವು ತನ್ನದೇ ಆದ ವಿಶಿಷ್ಟ ಸ್ಥಾನ ಹೊಂದಿದೆ. ಇದು ಇಡೀ ದೇಶದಲ್ಲಿಯೇ ಶಾಂತಿಯುತ ರಾಜ್ಯ ಎಂದು ಹೆಸರುವಾಸಿಯಾಗಿದೆ. ವಿಜಾಪುರ ಜಿಲ್ಲೆಯು ಕರ್ನಾಟಕದ ಉತ್ತರ ಭಾಗದಲ್ಲಿ ಬರುತ್ತದೆ. ಈ ಜಿಲ್ಲೆಗೆ ತನ್ನದೇ ಆದ ಇತಿಹಾಸವಿದೆ. ವಿಜಾಪುರ ಜಿಲ್ಲೆಯು ಕ್ರಿ.ಶ. 5ನೇಯ ಶತಮಾನದಿಂದ 17ನೇಯ ಶತಮಾನದವರೆಗೆ ಶಾತವಾಹನರು, ಕದಂಬರು, ಬದಾಮಿಯ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣಿ ಚಾಲುಕ್ಯರು ಕಲಚೂರಿಗಳು, ಯಾದವರು, ವಿಜಯನಗರ ಅರಸರು, ಬಹಮನಿ ಸುಲ್ತಾನರು, ಆದಿಲ್‌ಷಾಹಿಗಳು, ಹಾಗೂ ಮೊಗಲರ ಆಳ್ವಿಕೆಗೆ ಒಳಪಟ್ಟಿತ್ತು.

ಕ್ರಿ.ಶ.1347 ರಿಂದ 1422ರ ವರೆಗೆ ವಿಜಾಪುರವನ್ನು ಬಹಮನಿ ಅರಸರು ಆಳಿದರು ಬಹಮನಿರಾಜ್ಯ ಸ್ಥಾಪನೆಯಾದಾಗ ಈ ಪ್ರದೇಶ ಗುಲ್ಬರ್ಗ ಪ್ರಾಂತ್ಯಕ್ಕೆ ಸೇರಿತ್ತು. 1478ರಲ್ಲಿ ವಿಜಾಪುರ ಪ್ರಾಂತ್ಯ ಹೊಸದಾಗಿ ನಿರ್ಮಿತವಾಗಿ ಅದನ್ನು ಬಹಮನಿ ಅರಸರ ಮಂತ್ರಿಯಾದ ಮಹಮ್ಮದ ಗವಾನನಿಗೆ ವಹಿಸಿಕೊಡಲಾಯಿತು.[1] ನಂತರ ಯುಸೂಫ್ ಆದಿಲ್‌ಷಾನು 1481ರಲ್ಲಿ ವಿಜಾಪುರ ಪ್ರಾಂತ್ಯದ ಅಧಿಕಾರಿಯಾಗಿ ನೇಮಕಗೊಂಡನು.

---

1. ಡಾ. ಹಾ.ಮಾ. ನಾಯಕ: ಕರ್ನಾಟಕ ಕನ್ನಡ ವಿಶ್ವಕೋಶ ಪುಟ-1007

15ನೇ ಶತಮಾನದ ಅಂತ್ಯದಲ್ಲಿ ಬಹಮನಿ ಸಾಮ್ರಾಜ್ಯ ದುರ್ಬಲಗೊಂಡಾಗ ಅವನು ವಿಜಾಪುರ ಪ್ರಾಂತ್ಯವನ್ನು ಸ್ವತಂತ್ರರಾಜ್ಯವೆಂದು ಘೋಷಿಸಿದನು. ಕ್ರಿ.ಶ.1686ರಲ್ಲಿ ಔರಂಗಜೇಬನು ವಿಜಾಪುರ ಪ್ರಾಂತ್ಯವನ್ನು ಗೆದ್ದುಕೊಂಡನು. ನಂತರ ವಿಜಾಪುರ 1722ರ ವರೆಗೆ ಮೊಗಲರ ಪ್ರಾಂತ್ಯಕ್ಕೆ ಒಳಪಟ್ಟಿತ್ತು.[2] ಮುಂದೆ ಹೈದಾರಾಬಾದದ ನಿಜಾಮರ ಆಡಳಿತಕ್ಕೆ ವಿಜಾಪುರ ಒಳಪಟ್ಟಿತು. ಕ್ರಿ.ಶ. 1760ರಲ್ಲಿ ವಿಜಾಪುರವನ್ನು ಮರಾಠರು ವಶಪಡಿಸಿಕೊಂಡರು. ಕ್ರಿ.ಶ. 1778ರಿಂದ 1787ರವರೆಗೆ ಜಿಲ್ಲೆಯ ದಕ್ಷಿಣದ ಭಾಗ ದೆಹಲಿ ಮತ್ತು ಟಿಪ್ಪುಸುಲ್ತಾನರ ವಶದಲ್ಲಿತ್ತು. 1817ರಲ್ಲಿ ಪೇಶ್ವೆ ಬ್ರಿಟಿಷರ ಮಧ್ಯೆ ಯುದ್ಧವಾಗಿ 1818ರ ಮೇ ತಿಂಗಳಲ್ಲಿ ವಿಜಾಪುರ ಪ್ರಾಂತ್ಯವು ಸಂಪೂರ್ಣ ಬ್ರಿಟಿಷರ ವಶವಾಗಿ ಮುಂಬಯಿ ಪ್ರಾಂತ್ಯಕ್ಕೆ ಸೇರಿತು.[3] 1864ರವರೆಗೆ ವಿಜಾಪುರದ ವಿವಿಧ ಭಾಗಗಳು ಧಾರವಾಡ, ಸೋಲಾಪುರ, ಸಾತಾರಾ ಮತ್ತು ಬೆಳಗಾವಿಯ ಕಲೆಕ್ಟರುಗಳ ಆಡಳಿತಕ್ಕೆ ಒಳಪಟ್ಟಿತು. 1864ರಲ್ಲಿ ಸೋಲಾಪುರದ ಕಲೆಕ್ಟರ್ ಆಡಳಿತಕ್ಕೆ ಒಳಪಟ್ಟ ಇಂಡಿ, ಹಿಪ್ಪರಗಿ, ಸಿಂದಗಿ, ವಿಜಾಪುರ, ಮನಗೂಳಿ, ಬಸವನ ಬಾಗೇವಾಡಿ ಮತ್ತು ಮುದ್ದೇಬಿಹಾಳ ತಾಲ್ಲೂಕುಗಳನ್ನು ಹಾಗೂ ಧಾರವಾಡ ಕಲೆಕ್ಟರೇಟ್‌ಗಳಿಗೆ ಸೇರಿದ ಬದಾಮಿ, ಹುನಗುಂದ ಮತ್ತು ಬಾಗಲಕೋಟ ತಾಲ್ಲೂಕುಗಳನ್ನು ಸೇರಿಸಿ ಹೊಸಜಿಲ್ಲೆಯನ್ನಾಗಿ ನಿರ್ಮಿಸಲಾಯಿತು. ಆ ಸಮಯದಲ್ಲಿ ಕಲಾದಗಿ ಅದರ ಮುಖ್ಯ ಆಡಳಿತ ಕೇಂದ್ರವಾಗಿತ್ತು. ಮುಂದೆ 1885ರಲ್ಲಿ ಆಡಳಿತ ಕೇಂದ್ರವನ್ನು ಕಲಾದಗಿಯಿಂದ ವಿಜಾಪುರಕ್ಕೆ ಸ್ಥಳಾಂತರಿಸಲಾಯಿತು. 1947ರಲ್ಲಿ ಭಾರತಕ್ಕೆ ಸ್ವಾತಂತ್ರ್ಯ ದೊರೆತ ಮೇಲೆ ವಿಜಾಪುರ ಮುಂಬೈ ರಾಜ್ಯದ ಒಂದು ಜಿಲ್ಲೆಯಾಗಿ ಪರಿಣಮಿಸಿತು. ನಂತರ 1956ರಲ್ಲಿ ರಾಜ್ಯಗಳ ಪುನರ್ ವಿಂಗಡನೆಯಾದಾಗ ವಿಜಾಪುರ ಜಿಲ್ಲೆಯನ್ನು ಕರ್ನಾಟಕ ರಾಜ್ಯದಲ್ಲಿ ಸೇರಿಸಲಾಯಿತು.[4]



1997ರಲ್ಲಿ ಜನತಾದಳ ಸರ್ಕಾರ ಅಧಿಕಾರದಲ್ಲಿದ್ದಾಗ ಕರ್ನಾಟಕ ರಾಜ್ಯದಲ್ಲಿಯೇ ವಿಶಾಲವಾದ ವಿಜಾಪುರ ಜಿಲ್ಲೆಯನ್ನು ಎರಡು ಭಾಗಗಳನ್ನಾಗಿ ವಿಂಗಡಿಸಲಾಯಿತು. ವಿಂಗಡನೆಗಿಂತ ಪೂರ್ವದಲ್ಲಿ ಹನ್ನೊಂದು ತಾಲ್ಲೂಕುಗಳನ್ನು ಹೊಂದಿ ವಿಶಾಲ ಜಿಲ್ಲೆ ಎಂಬ ಹೆಗ್ಗಳಿಕೆಗೆ ಪಾತ್ರವಾಗಿತ್ತು. ಆದರೆ ಈಗ ಬಸವನ ಬಾಗೇವಾಡಿ, ಸಿಂದಗಿ, ಮುದ್ದೇಬಿಹಾಳ, ಇಂಡಿ, ವಿಜಾಪುರ, ಹೀಗೆ ಕೇವಲ 5 ತಾಲ್ಲೂಕುಗಳನ್ನು ಹೊಂದಿದೆ. ಜಿಲ್ಲೆಯಲ್ಲಿ ಸರಾಸರಿ 500 ಮಿಲಿಮೀಟರ್ ಮಳೆಯಾಗುತ್ತಿದ್ದರೂ. ಮಳೆಯ ಅನಿಶ್ಚಿತತೆಯಿಂದಾಗಿ ಸತತ ಬರಗಾಲದ ಬವಣೆಗೊಳಗಾಗಿ ಬರಗಾಲದ ಜಿಲ್ಲೆಯೆಂದು ಕರೆಸಿಕೊಳ್ಳುತ್ತಿರುವುದು ನಿಸರ್ಗದ ವೈಪರೀತ್ಯಗಳಲ್ಲೊಂದಾಗಿದೆ.[5]



**ವಿಜಾಪುರ ಜಿಲ್ಲೆಯ ಹೆಸರಿನ ಮೂಲ :**

ವಿಜಾಪುರ ನಗರವನ್ನು ಪ್ರಾಚೀನ ಕಾಲದಲ್ಲಿ ವಿಜಯಪುರ ಹಾಗೂ ಮಹಮ್ಮದಪುರ ಎಂದು ಕರೆಯಲಾಗುತ್ತಿತ್ತು.[6] ಕನ್ನಡ ಭಾಷೆಯಲ್ಲಿ 'ವಿಜಾಪುರ' ಎಂದು ಕರೆಯುತ್ತಾರೆ. ವಿಜಾಪುರ ಎಂಬುದು

---

2. ಮೈಸೂರು ಸ್ಟೇಟ ಗೆಜೆಟೀಯರ 'ವಿಜಾಪುರ ಡಿಸ್ಟ್ರಿಕ್ಟ್', ಪುಟ.3
3. ಡಾ. ಹಾ.ಮಾ. ನಾಯಕ : ಕರ್ನಾಟಕ ಕನ್ನಡ ವಿಶ್ವಕೋಶ, ಪುಟ.1007
4. ಮೈಸೂರು ಸ್ಟೇಟಗೆಜೆಟೀಯರ 'ವಿಜಾಪುರ ಡಿಸ್ಟ್ರಿಕ್ಟ್', ಪುಟ 3.4
5. ಡಾ. ಆರ್. ಮುನಿಸ್ವಾಮಿ (ಸಂ) 1999 : ಕರ್ನಾಟಕ ರಾಜ್ಯ ಗೆಜೆಟೀಯರ್ ವಿಜಾಪುರ ಜಿಲ್ಲೆ, ಪುಟ 1
6. ಕರ್ನಾಟಕ ರಾಜ್ಯ ಗೆಜೆಟೀಯರ್ ಭಾಗ-2, ಪುಟ 592

ಸಂಸ್ಕೃತ ಭಾಷೆಯ ವಿಜಯಪುರದ ಸಂಕ್ಷಿಪ್ತರೂಪವಾಗಿದೆ. ವಿಜಾಪುರದ ಅರ್ಥ 'ವಿಜಯದ ಊರು' ಅಥವಾ 'ವಿಜಯದನಗರ' ಎಂದಾಗುತ್ತದೆ. ಶಾಸನಗಳಲ್ಲಿ ಇದನ್ನು ರಾಜಧಾನಿ, ವಿಜಯಾಪುರ, ವಿಜೆಯಾಪುರ[7] ಎಂದು ಕರೆಯಲಾಗಿದೆ. ವಿಜಾಪುರದ ಮೂಲ ಹೆಸರು ವಿಜಯಪುರ. ಈ ನಗರದ ಸುತ್ತಮುತ್ತಲೂ ದೊರೆತಿರುವ ಶಾಸನಗಳಿಂದ ಕ್ರಿ.ಶ.1036ರ ಸುಮಾರಿಗೆ ಈ ಹೆಸರು ಬಳಕೆಯಲ್ಲಿರುವುದನ್ನು ಖಚಿತಪಡಿಸಿವೆ.[8]

ವಿಜಾಪುರ ಎಂಬುದು ಬಿಜಕನಹಳ್ಳಿಯ ಒಂದು ಪ್ರದೇಶ, ವಿಜಾಪುರದಲ್ಲಿ ಗಜಕನಹಳ್ಳಿ, ಬಿಜಕನಹಳ್ಳಿ, ಚಂದಕೇರಿ, ಕ್ಯಾದಗಿ, ಕತರಕೇರಿ, ಕುರುಬನಹಟ್ಟಿ ಮತ್ತು ಕುಜನಕುತಿ, ಎಂಬ ಏಳು ಹಳ್ಳಿಗಳು ಸಮಾವೇಶಗೊಂಡಿವೆ. ಎಂದು ಕ್ರಿ.ಶ.1884ರ ಮುಂಬಯಿ ಸರ್ಕಾರದ ಗೆಜೆಟೀಯರ್‌ನಲ್ಲಿ ಪ್ರಕಟಿಸಿಲಾಗಿದೆ.[9] ಈ ಏಳು ಹಳ್ಳಿಗಳು ಸೇರಿ ಬಿಜ್ಜನಹಳ್ಳಿ ಆಯಿತು. ನಂತರ ಬಿಜ್ಜನಹಳ್ಳಿ ಎಂಬ ಹೆಸರು ವಿಜಾಪುರ ಎಂದಾಯಿತು. ಕಾಲ ಬದಲಾದಂತೆ ವಿಜಯಪುರ, ವಿಜಾಪುರ ಆಗಿ ಈಗ ಬಿಜಾಪುರ ಎಂದು ಪ್ರಸಿದ್ಧವಾಗಿದೆ.[10] ಶಾಸನಗಳಲ್ಲಿ ವಿಜಯಪುರ ಹಾಗೂ ಬಿಜ್ಜನಹಳ್ಳಿ ಪ್ರತ್ಯೇಕವಾಗಿ ಬರುವುದರಿಂದ ಇವೆರಡೂ ಊರುಗಳು ಬೇರೆಯಾಗಿ ಇರುವ ಸಾಧ್ಯತೆಯೂ ಇದೆ. ವಿಜಾಪುರ ಎಂಬ ಹೆಸರು ಪ್ರಾಚೀನವಾದುದರಿಂದ ವಿಜಯಪುರ ಮತ್ತು ಬಿಜ್ಜನಹಳ್ಳಿ ಎರಡೂ ಒಂದೇ ಎಂಬ ವಾದವು ಮೇಲೆ ಉಲ್ಲೇಖಿಸಿದ ಶಾಸನದ ಹಿನ್ನೆಲೆಯಲ್ಲಿ ದುರ್ಬಲಗೊಳ್ಳುತ್ತದೆ.

ಆದಿಲ್‌ಶಾಹಿ ಅರಸರ ಆಳ್ವಿಕೆಯ ಕಾಲದಲ್ಲಿ ಎರಡನೇಯ ಇಬ್ರಾಹಿಂ ರಾಜನು ವಿಜಾಪುರ ಹೆಸರನ್ನು ಬದ್ಯಾಪುರವೆಂದು ಹಾಗೂ ಸುಲ್ತಾನ್ ಮಹಮ್ಮದನು ಮಹಮ್ಮದ್‌ಪುರವೆಂದು ಬದಲಾಯಿಸಿದನು. ಇಬ್ರಾಹಿಂ ರೋಜಾದ ಬಾಗಿಲಿನಲ್ಲಿ ಕೆತ್ತಲಾಗಿರುವ ಪರ್ಷಿಯನ್ ಶಾಸನವು ವಿಜಾಪುರವನ್ನು ವಿದ್ಯಾಪುರ (ಅಧ್ಯಯನ ಕೇಂದ್ರ)ವೆಂದು ಉಲ್ಲೇಖಿಸುತ್ತದೆ. ಪರ್ಷಿಯನ್ ಭಾಷೆಯಲ್ಲಿರುವ ಪ್ರಾಚೀನ ಭೂಪಟದಲ್ಲಿ ವಿಜಾಪುರವನ್ನು (ದರ್‌ಉಲ್‌ಜಫರ್) ಅಂದರೆ "ವಿಜಯದ ಪೀಠ"ಎಂದು ಹೆಸರಿಸಿದೆ. ಈಗ ವಿಜಾಪುರ ಎಂಬ ಹೆಸರು ಹೆಚ್ಚು ಪ್ರಚಲಿತವಿದೆ. ಬಹುಶಃ ಆಂಗ್ಲರ ಪ್ರಭಾವದಿಂದ ವಿಜಾಪುರವು ಬಿಜಾಪುರವೆಂದು ರೂಢಿಗೆ ಬಂದಿರಬೇಕು.

**ವಿಜಾಪುರ ಜಿಲ್ಲೆಯ ಭೌಗೋಳಿಕ ಲಕ್ಷಣಗಳು :**

ಕರ್ನಾಟಕ ರಾಜ್ಯದ ಪ್ರಮುಖ ಜಿಲ್ಲೆಗಳಲ್ಲಿ ವಿಜಾಪುರವು ಒಂದಾಗಿದೆ ಇದು ಭಾರತದ ದಕ್ಷಿಣ ಪ್ರಸ್ಥಭೂಮಿಯಲ್ಲಿರುವ, ಒಣಪ್ರದೇಶವಾಗಿದ್ದು, ದಕ್ಷಿಣ ಕರಾವಳಿಯಿಂದ ಸುಮಾರು 200 ಕಿ.ಲೋ, ಮೀಟರ್ ದೂರದಲ್ಲಿದೆ.

---

7. ಸೌಥ್ ಇಂಡಿಯನ್ ಇನ್ಸ್‌ಕ್ರಿಪ್ಶನ್ಸ್ (ವಿಜಾಪುರ) ಕ್ರಿ.ಶ. 1033, 1151, 1154, Quoted, ಪಿ.ಕೆ.ಲಮಾಣಿ, ವಿಜಾಪುರ ಜಿಲ್ಲೆಯ ಸ್ಮಾರಕಗಳು. ಎಂ.ಫಿಲ್. ಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
8. ಡಾ. ಹಾ.ಮಾ. ನಾಯಕ. ಕನ್ನಡ ವಿಶ್ವಕೋಶ, (ಸಂ) ಪುಟ.1009.
9. ಮೈಸೂರು ಸ್ಟೇಟಗೆಜೆಟೀಯರ್ ವಿಜಾಪುರ ಡಿಸ್ಟ್ರಿಕ್ಟ್, ಪುಟ.2
10. ಕರ್ನಾಟಕ ಗೆಜೆಟಿಯರ್ ವಿಜಾಪುರ ಜಿಲ್ಲೆ (ಸಂ) ಆರ್.ಮುನಿಸ್ವಾಮಿ (1999), ಪುಟ.1

**ನಿರ್ದಿಷ್ಟ ಭೌಗೋಳಿಕ ಸ್ಥಾನ (Location) :**

ವಿಜಾಪುರ ಜಿಲ್ಲೆಯ ಪ್ರದೇಶವು ಉತ್ತರ ಅಕ್ಷಾಂಶ $15^0$ದ $17^0$ 28'ರ ವರೆಗೆ ಹಾಗೂ ಪೂರ್ವ ರೇಖಾಂಶ $24^0$ 59' ರಿಂದ $76^0$ 28'ರ ವರೆಗೆ ಹರಡಿದೆ. ಜಿಲ್ಲೆಯ ಉತ್ತರ ಮತ್ತು ವಾಯುವ್ಯ ದಿಕ್ಕುಗಳಲ್ಲಿ ಮಹಾರಾಷ್ಟ್ರ ರಾಜ್ಯದ ಸೊಲ್ಲಾಪುರ ಮತ್ತು ಸಾಂಗ್ಲಿ ಜಿಲ್ಲೆಯ ಗಡಿಪ್ರದೇಶಗಳಿವೆ. ಉಳಿದ ಭಾಗ ಕರ್ನಾಟಕ ರಾಜ್ಯದ ಜಿಲ್ಲೆಗಳಿಂದ ಸುತ್ತುವರೆಯಲ್ಪಟ್ಟಿದ್ದು, ಪೂರ್ವದಲ್ಲಿ ಗುಲಬರ್ಗಾ ಜಿಲ್ಲೆ, ಆಗ್ನೆಯ ಮತ್ತು ದಕ್ಷಿಣದಲ್ಲಿ ರಾಯಚೂರು ಜಿಲ್ಲೆ ಹಾಗೂ ಪಶ್ಚಿಮದಲ್ಲಿ ಬೆಳಗಾವಿ ಜಿಲ್ಲೆಯ ಗಡಿ ಪ್ರದೇಶವನ್ನು ಹೊಂದಿದೆ. ಸಮಾಜದಲ್ಲಿ ಪ್ರತಿಯೊಂದು ಜನಾಂಗಗಳ ಸಾಮಾಜಿಕ ಜೀವನವು ಆಯಾ ಭೌಗೋಳಿಕ ಅಂಶಗಳಾದ ಬೆಟ್ಟ, ಗುಡ್ಡ, ನದಿ, ಹವಾಮಾನ ಮೊದಲಾದ ನೈಸರ್ಗಿಕ ಸಂಪತ್ತುಗಳ ಮೇಲೆ ಅವಲಂಬಿಸಿರುತ್ತದೆ. ಅತಿಯಾದ ಶೆಕೆಯಿರುವ ಪ್ರದೇಶದಲ್ಲಿ ಜನರು ದುಡಿಯಲು ಸಾಧ್ಯವಾಗದೆ ಅವರ ಆರ್ಥಿಕತೆ ಹಿನ್ನಡೆಯಲ್ಲಿರುತ್ತದೆ. ನೈಸರ್ಗಿಕ ಸಂಪನ್ಮೂಲಗಳು ದೊರೆಯುವ ಪ್ರದೇಶದಲ್ಲಿ ಜನರು ಆರ್ಥಿಕವಾಗಿ ಶ್ರೀಮಂತರಾಗಿರುತ್ತಾರೆ. ಭೌಗೋಳಿಕವಾಗಿ ವಿಜಾಪುರವನ್ನು 1. ಭೀಮಾ ಕಣಿವೆ, 2. ಮಧ್ಯಮ ಪ್ರಸ್ಥಭೂಮಿ, 3. ಡೋಣಿಯ ಜಲಾನಯನ ಪ್ರದೇಶ, 4. ಕೃಷ್ಣಾ ಕಣಿವೆ, 5. ದಕ್ಷಿಣದ ಶ್ರೇಣಿಗಳು, 6. ಆಗ್ನೇಯ ಗುಡ್ಡಗಾಡು ಪ್ರದೇಶ, 7. ಹುನಗುಂದ ಬಯಲು ಮತ್ತು ವಿಜಾಪುರನಗರ ಪ್ರದೇಶ ಹೀಗೆ ಏಳು ಭಾಗಗಳಾಗಿ ವಿಂಗಡಿಸಲ್ಪಟ್ಟಿದೆ.[11]

**ವಿಜಾಪುರ ಜಿಲ್ಲೆಯ ಭೌಗೋಳಿಕ ವ್ಯಾಪ್ತಿ (Area) :**

ಜಿಲ್ಲೆಯ ವಿಸ್ತೀರ್ಣವು 17.135 ಚದರ ಕಿಲೋ ಮೀಟರುಗಳಾಗಿದೆ. ಇದು ರಾಜ್ಯದಲ್ಲಿಯೇ ಅತೀ ಹೆಚ್ಚು ವಿಸ್ತೀರ್ಣ ಹೊಂದಿದ ಜಿಲ್ಲೆಯಾಗಿದೆ. ಇದು ಉತ್ತರ ದಕ್ಷಿಣವಾಗಿ ಸುಮಾರು 175 ಕಿ.ಮೀ. ಹಾಗೂ ಪೂರ್ವಪಶ್ಚಿಮವಾಗಿ ಸುಮಾರು 145 ಕಿ.ಮೀ, ದೂರ ಹರಡಿದೆ. 1991ರ ಜನಗಣತಿಯ ಪ್ರಕಾರ ವಿಜಾಪುರ ಜಿಲ್ಲೆಯ ವಿಸ್ತೀರ್ಣವು ರಾಜ್ಯದ 20 ಜಿಲ್ಲೆಗಳಲ್ಲಿ ದೊಡ್ಡದಾಗಿದ್ದು, ಜನಸಂಖ್ಯೆಯಲ್ಲಿ ಐದನೆಯ ಸ್ಥಾನ ಪಡೆದಿದೆ.

**ವ್ಯವಸಾಯ (Agriculture) :**

ವಿಜಾಪುರ ಜಿಲ್ಲೆಯ ಭೂಮಿಯು ವ್ಯವಸಾಯಕ್ಕೆ ಫಲವತ್ತಾಗಿದೆ. ಆದರೆ ನೀರಾವರಿ ಸೌಲಭ್ಯವಿಲ್ಲದ ಕಾರಣ ರೈತರು ಕೃಷಿಗೆ ಮನ್ಸೂನ್‌ಗಳನ್ನೇ ಅವಲಂಬಸಿದ್ದಾರೆ. ಜಿಲ್ಲೆಯಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಕೊಳವೆಭಾವಿಗಳನ್ನು ಕೊರೆಸಿದ್ದು, ಮಳೆಇಲ್ಲದೆ ಅವು ಬತ್ತಿಹೋಗಿವೆ. ಇಲ್ಲಿಯ ಮಣ್ಣಿನ ಗುಣಮಟ್ಟವನ್ನು ಆಧರಿಸಿ ಜಿಲ್ಲೆಯ ಭೂಪ್ರದೇಶವನ್ನು ಮುಖ್ಯವಾಗಿ ಎರಡು ಭಾಗವಾಗಿ ವಿಂಗಡಿಸಿಲಾಗಿದೆ. ಒಂದು ಕಪ್ಪುಮಣ್ಣು ಅಥವಾ ಎರೆ ಮಣ್ಣು ಹಾಗೂ ಕೆಂಪು ಮಣ್ಣು ಅಥವಾ ಮಸಾರಿ ಭೂಮಿ. ಹೆಚ್ಚು ತೇವವನ್ನು ಹಿಡಿದಿಟ್ಟುಕೊಳ್ಳುವ ಕಪ್ಪುಮಣ್ಣಿನ ಪ್ರದೇಶ ಹೆಚ್ಚಾಗಿದೆ. ಡೋಣಿಯ ಕಪ್ಪುಮಣ್ಣಿನ ಪ್ರದೇಶವಂತೂ

---

11. ಮೈಸೂರು ಸ್ಟೇಟಗೆಜೆಟೀಯರ್ ವಿಜಾಪುರ ಡಿಸ್ಟ್ರಿಕ್ಟ್ ಪುಟ.2

ಜೋಳದ ಬೆಳೆಗೆ ಅನುಕೂಲವಾಗಿದೆ. ಈ ಕಾರಣಕ್ಕಾಗಿ ಈ ಭೂಮಿಯನ್ನು 'ಧಾನ್ಯದ ಕಣಜ' ಎಂದು ಕರೆಯಲಾಗಿದೆ. ಅಲ್ಲದೆ 'ಡೋಣಿ ಬೆಳೆದರೆ ಓಣೆಲ್ಲ ಜೋಳ' ಎಂಬ ನಾಣ್ಣುಡಿ ಇದೆ.[12] ಒಟ್ಟಿನಲ್ಲಿ ಕೃಷಿಗೆ ಯೋಗ್ಯವಾದ ಭೂಮಿ ವಿಜಾಪುರ ಜಿಲ್ಲೆಯಲ್ಲಿದ್ದರೂ, ಇಲ್ಲಿಯ ಜನರು ನೀರಾವರಿ ಸೌಲಭ್ಯಗಳಿಲ್ಲದ್ದರಿಂದ ಬಡತನದಲ್ಲಿ ಜೀವನ ಸಾಗಿಸುತ್ತಿದ್ದಾರೆ.

**ಬೆಳೆಗಳು (Crops) :**

ವಿಜಾಪುರ ಜಿಲ್ಲೆಯಲ್ಲಿ ಬಹುಪಾಲು ಭೂಮಿ ಒಣ ಬೇಸಾಯಕ್ಕೆ ಒಳಪಟ್ಟಿದ್ದು, ಬಿಳಿಜೋಳ, ಸಜ್ಜೆ, ಗೋದಿ, ಗೋವಿನ ಜೋಳ, ಕುಸುಬೆ, ಸೇಂಗಾ, ಹುರಳಿ, ತೊಗರಿ, ಹೆಸರು, ಮಡಿಕೆ, ಅಲಸಂದಿ, ಕಡಲೆ ಬೆಳೆಯುತ್ತಾರೆ. ನೀರಾವರಿ ಭೂಮಿಯಲ್ಲಿ ಸೂರ್ಯಕಾಂತಿ, ಕಬ್ಬು, ಬೆಳ್ಳುಳ್ಳಿ, ಈರುಳ್ಳಿ, ಅರಿಸಿಣ, ದ್ರಾಕ್ಷಿ, ದಾಳಿಂಬೆ, ಬಾಳೆ ಹಾಗೂ ವೀಳ್ಯದ ಎಲೆ ಹೆಚ್ಚಾಗಿ ಬೆಳೆಯುತ್ತಾರೆ.

**ಮಳೆ ಮತ್ತು ಹವಾಮಾನ (Rainfall and Climate) :**

ವಿಜಾಪುರ ಜಿಲ್ಲೆಯಲ್ಲಿ ಸಾಮಾನ್ಯವಾಗಿ ಮಳೆಗಾಲದಲ್ಲಿ ಉತ್ತಮ ಮಳೆ ಬೀಳುತ್ತದೆ. ಜೂನ್ ತಿಂಗಳಿಂದ ಸೆಪ್ಟಂಬರ ತಿಂಗಳವರೆಗೆ ನೈರುತ್ಯ ಮಾರುತಗಳಿಂದಲೂ, ಅಕ್ಟೋಬರ ಮತ್ತು ನವ್ಹೆಂಬರ್ ತಿಂಗಳಲ್ಲಿ ಈಶಾನ್ಯ ಮಾರುತಗಳಿಂದಲೂ, ಮಳೆ ಬೀಳುತ್ತದೆ. ಸೆಪ್ಟಂಬರ್ ತಿಂಗಳಲ್ಲಿ ಹೆಚ್ಚು ಮಳೆ ಬೀಳುತ್ತದೆ. ವಾರ್ಷಿಕ ಸರಾಸರಿ 500 ಮಿ.ಮೀ. ಜಿಲ್ಲೆಯ ಹವೆಯು ಆರೋಗ್ಯಕರವಾಗಿದ್ದು, ಡಿಸೆಂಬರ್‌ನಲ್ಲಿ ಅತಿ ಹೆಚ್ಚು ಚಳಿ, ಏಪ್ರಿಲ್ ಮತ್ತು ಮೇ ತಿಂಗಳುಗಳಲ್ಲಿ ಹೆಚ್ಚು ತಾಪ ಇರುತ್ತದೆ.[13]

**ಅರಣ್ಯ ಸಂಪತ್ತು (Forest Wealth) :**

ಈ ಜಿಲ್ಲೆಯಲ್ಲಿ ಖನಿಜ ಸಂಪತ್ತು ಹೆಚ್ಚಾಗಿ ಕಂಡುಬರುವುದಿಲ್ಲ. ಬಾಗಲಕೋಟೆ ಪ್ರದೇಶದಲ್ಲಿ ಸುಣ್ಣದಕಲ್ಲು ದೊರೆಯುತ್ತದೆ ಮತ್ತು ಸ್ವಲ್ಪ ಪ್ರಮಾಣದಲ್ಲಿ ಕಬ್ಬಿಣದ ಅದಿರು ಸಿಗುತ್ತದೆ. ಹೆಚ್ಚಾಗಿ ಮಳೆ ಬೀಳದ ಕಾರಣ ಇಲ್ಲಿಯ ಅರಣ್ಯಗಳು ದಟ್ಟವಾಗಿ ಬೆಳೆದಿಲ್ಲ. ಬೆಟ್ಟ ಗುಡ್ಡಗಳ ಮತ್ತು ನದಿ ತೀರದ ಕಾಡುಗಳಲ್ಲಿ ತಕ್ಕೆದಿಂಡಲು, ಗಂಧ ಮುಂತಾದ ಗಿಡ-ಮರಗಳಿವೆ. ಕಾಡಿನಲ್ಲಿ ಹೆಚ್ಚಾಗಿ ಜಾಲಿಮರಗಳು ಕಂಡುಬರುತ್ತವೆ. ಜೊತೆಗೆ ಬೇವು, ಹುಣಸೆ, ನೇರಳೆ, ಆಲದ ಮರ ಮುಂತಾದವು ಬೆಳೆಯುತ್ತವೆ.[14]

**ವಿಜಾಪುರ ಜಿಲ್ಲೆಯ ಪ್ರಾಣಿ ಸಮೂಹ (Fauna) :**

ಜಿಲ್ಲೆಯಲ್ಲಿ ಅನೇಕ ವಿಧದ ಪ್ರಾಣಿಗಳು ಕಂಡುಬರುತ್ತವೆ. ಅರಣ್ಯಪ್ರದೇಶ ಕ್ಷೀಣವಾಗಿರುವುದರಿಂದ ಮೃಗ ಮತ್ತು ಪಕ್ಷಿಗಳ ಸಂಖ್ಯೆ ಕಡಿಮೆ, ಕಾಡುಗಳಲ್ಲಿ ಕಾಡುಬೆಕ್ಕು, ಕತ್ತೆಕಿರುಬ, ತೋಳ, ಕುನ್ನಿನರಿ, ಕೆಂಪುನರಿ, ಮುಳ್ಳುಹಂದಿ, ಚಿಗರೆ, ಕಾಡುಹಂದಿ, ಮೊಲ, ಮಂಗ, ನವಿಲು, ಕೌಜಗ, ಗಿಳಿ, ಪುರಲೆಹಕ್ಕಿ, ಪಾರಿವಾಳ,

12. ಡಾ.ಹಾ.ಮಾ.ನಾಯಕ, ಕರ್ನಾಟಕ ಕನ್ನಡ ವಿಶ್ವಕೋಶ (ಸಂ), ಪುಟ 1006

13. ಡಾ.ಹಾ.ಮ.ನಾಯಕ, ಕರ್ನಾಟಕ ಕನ್ನಡ ವಿಶ್ವಕೋಶ, (ಸಂ) ಪುಟ ೧೦೦೬

14. ಅದೇ ಪುಟ ೧೦೦೬

ಕಾಡುಕೋಳಿ, ಪಾಸ್ವರ್, ಕಬ್ಬಾರೆ, ಕ್ರೌಂಚ್, ಹೆಬ್ಬಾವು, ಮಣ್ಣುಮುಕ್ಕ್, ಕ್ಯಾರೆಹಾವು, ಚಿಂಗಿಹಾವು, ನಾಗರಹಾವು, ಮಂಡಲದ ಹಾವು ಮುಂತಾದ ಪ್ರಾಣಿ ಪಕ್ಷಿಗಳು ಕಂಡುಬರುತ್ತವೆ.[15]

**ನದಿಗಳು (Rivers) :**

ವಿಜಾಪುರ ಜಿಲ್ಲೆಯು ಸಮೃದ್ಧವಾದ ಜಲಸಂಪತ್ತು ಹೊಂದಿದ್ದು, ಕೃಷ್ಣ, ಘಟಪ್ರಭಾ, ಮಲಪ್ರಭಾ, ಭೀಮಾ ನದಿಗಳು ಹಾಗೂ ಡೋಣಿ ಹರಿದಿವೆ. ಆದ್ದರಿಂದ ಇದು ಪಂಚನದಿಗಳ ನಾಡೆಂದು ಹೆಸರುವಾಸಿಯಾಗಿದೆ. ಈ ಕಾರಣದಿಂದ ಜಿಲ್ಲೆಯನ್ನು ಕರ್ನಾಟಕದ 'ಪಂಜಾಬ' ಎಂದು ಕರೆಯುತ್ತಾರೆ. ಕೃಷ್ಣಾ ನದಿಗೆ ಆಲಮಟ್ಟಿಯ ಹತ್ತಿರ ಅಣೆಕಟ್ಟು ಕಟ್ಟಿದ್ದು, ಅದರ ಕಾರ್ಯ ಪೂರ್ಣಗೊಂಡಿದ್ದು, ಇದರಿಂದ ಇಂಡಿ, ಸಿಂದಗಿ, ಮುದ್ದೇಬಿಹಾಳ್ ಹಾಗೂ ಬಸವನ ಬಾಗೇವಾಡಿ ತಾಲ್ಲೂಕುಗಳಿಗೆ ನೀರಾವರಿ ಸೌಲಭ್ಯ ದೊರೆಯಲಿದೆ. ಈವರೆಗೆ ಈ ಜಿಲ್ಲೆಯಲ್ಲಿ ಒಣಬೇಸಾಯ ಹೆಚ್ಚಾಗಿ ಇದ್ದು, ರೈತರು ಮಳೆಯನ್ನೇ ಅವಲಂಬಿಸಿದ್ದರು.

**ವಿಜಾಪುರಕ್ಕೆ ಲಂಬಾಣಿಗರ ಆಗಮನ :**

ಅಲೆಮಾರಿಗಳಾದ ಲಂಬಾಣಿಗರು ತಮ್ಮ ದನಕರುಗಳು ಹಾಗೂ ವ್ಯಾಪಾರಿ ಪದಾರ್ಥಗಳ ಜೊತೆಗೆ ಗುಂಪು ಗುಂಪಾಗಿ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ವ್ಯಾಪಾರ ಮಾಡುತ್ತ ಅಲೆದಾಡುತ್ತಿದ್ದರು. ಸಾಗಾಣಿಕೆಯ ಸಾಧನಗಳ ತೊಂದರೆ ಅನುಭವಿಸುತ್ತಿದ್ದ, ಮೊಗಲರು ಲಂಬಾಣಿಗರ ಧೈರ್ಯ ಸಾಹಸಗಳಿಗೆ ಅಕರ್ಶಕರಾಗಿ ಇವರನ್ನು ತಮ್ಮ ಸೈನಿಕರಿಗೆ ಆಹಾರಧಾನ್ಯ ಹಾಗೂ ಯುದ್ಧದ ಸಾಮಗ್ರಿಗಳನ್ನು ಸರಬರಾಜು ಮಾಡುವ ಉದ್ಯೋಗವನ್ನು ಒದಗಿಸಿದರು. ಈ ಕಾರಣಕ್ಕಾಗಿ ಲಂಬಾಣಿಗರು ಮೊಗಲರ ಸೈನಿಕರು ಹೋದ ಕಡೆಗೆಲ್ಲಾ ವಲಸೆ ಹೋಗುವದು ಅನಿವಾರ್ಯವಾಯಿತು. ಮೊಗಲ ಅರಸ "ಶಾಹಜಾನನ ಆಡಳಿತದ ಅವಧಿಯಲ್ಲಿ ಅಸಫ್‌ಖಾನನ ನೇತೃತ್ವದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಲಂಬಾಣಿಗರು ವಿಜಾಪುರದ ಆದಿಲ್‌ಶಾಹಿಯ ಮೇಲೆ ದಾಳಿ ಮಾಡಲು ಕ್ರಿ.ಶ.1630ರಲ್ಲಿ ಮೊಗಲರ ಸೈನಿಕರಿಗೆ ಸಹಾಯ ಮಾಡುತ್ತಾ ಅವರ ಜೊತೆ ಸೇರಿ ವಿಜಾಪುರಕ್ಕೆ ವಲಸೆ ಬಂದು ಕೊನೆಗೆ ಅಲ್ಲಿಯೇ ಶಾಶ್ವತವಾಗಿ ನೆಲೆಸಿದರು." (Thurstan:1909:213)[16] ಮೊಗಲರ ಹಿಂದೆ ವಿಜಾಪುರಕ್ಕೆ ವಲಸೆ ಬಂದು ನೆಲೆಸಿದ ಲಂಬಾಣಿಗರು, ಮೊಗಲರ ಆಡಳಿತ ಪ್ರದೇಶಗಳಾದ ವಿಜಾಪುರ, ಗುಲ್ಬರ್ಗಾ ಜಿಲ್ಲೆಗಳಲ್ಲಿ ಹೆಚ್ಚಾಗಿ ನೆಲೆಸಿದ್ದಾರೆ. ಇದರಿಂದ ಮೊಗಲರು ಲಂಬಾಣಿಗರಿಗೆ ಹೆಚ್ಚಿನ ಆಧ್ಯತೆ ನೀಡಿದ್ದರೆಂಬುದು ತಿಳಿದುಬರುತ್ತದೆ. ಮೊಗಲರ ಆಡಳಿತ ಅವಧಿ ಮುಗಿದ ನಂತರ ತಮ್ಮ ಮೂಲಸ್ಥಳಕ್ಕೆ ಮರಳಿ ಹೋಗುವುದು ಲಂಬಾಣಿಗರಿಗೆ ಸಾಧ್ಯವಾಗಲಿಲ್ಲ. ಕಾರಣ ಈ ವೇಳೆಗೆ ತಂತ್ರಜ್ಞಾನದ ಪರಿಣಾಮದಿಂದ ಭಾರತದಲ್ಲಿ ರೈಲುಗಳು ಪ್ರಾರಂಭವಾದದ್ದರಿಂದ ಸಾಂಪ್ರದಾಯಿಕ ಉದ್ಯೋಗ ನಿಂತು ಹೋಯಿತು. ಬೇರೆ ಉದ್ಯೋಗಗಳಲ್ಲಿ ಕೌಶಲ್ಯವಿಲ್ಲದೆ ಆರ್ಥಿಕ ಸಮಸ್ಯೆ ಎದುರಿಸಿದರು. ಈ ಕಾರಣಕ್ಕಾಗಿ ಲಂಬಾಣಿಗರು ಗ್ರಾಮಗಳ ಹತ್ತಿರದ ಪ್ರದೇಶಗಳಲ್ಲಿ ತಾಂಡಾಗಳನ್ನು ನಿರ್ಮಿಸಿಕೊಂಡು ನೆಲೆಸಿದರು. ಉತ್ತರ ಭಾರತದಿಂದ ವಲಸೆ ಬಂದು ನೆಲೆಸಿದ ಲಂಬಾಣಿಗರು ಲಂಬಾಣೇತರ ಜನರೊಂದಿಗೆ ಹೊಂದಾಣಿಕೆಯ ಸಮಸ್ಯೆಯಾಗಿ ಪ್ರತ್ಯೇಕವಾದ ಪ್ರದೇಶಗಳಲ್ಲಿ ವಾಸವಾಗಿದ್ದಾರೆ.

---

15. ಡಾ.ಹಾ.ಮ.ನಾಯಕ, ಕರ್ನಾಟಕ ಕನ್ನಡ ವಿಶ್ವಕೋಶ, (ಸಂ) ಪುಟ ೧೦೦೬

16. Thurstan-E , (1909) Castes and Tribes of Sourthen India, Pg.213.

**ಲಂಬಾಣಿಗರು ಪ್ರತ್ಯೇಕ ತಾಂಡಾಗಳಲ್ಲಿ ವಾಸಿಸಲು ಕಾರಣಗಳು :**

1 ಬೇರೆ ಪ್ರದೇಶದಿಂದ ವಲಸೆ ಬಂದ ಲಂಬಾಣಿ ಜನರನ್ನು ಲಂಬಾಣೇತರರು ತಮ್ಮೊಡನೆ ವಾಸಿಸಲು ಅವಕಾಶ ನೀಡದೇ ಇರುವುದು.

2 ಲಂಬಾಣಿಗರು ಹೆಚ್ಚಿನ ಸಂಖ್ಯೆಯಲ್ಲಿ ದನ-ಕರುಗಳನ್ನು ಹೊಂದಿದ್ದರಿಂದ ಅವುಗಳನ್ನು ಸಾಕಲು ಹುಲ್ಲುಗಾವಲಿನ ಗುಡ್ಡಗಾಡು ಪ್ರದೇಶದ ಹತ್ತಿರದಲ್ಲಿ ವಾಸಿಸಲು ಕಾರಣವಾಗಿರಬಹುದು.

3 ಬ್ರಿಟಿಷರು ಲಂಬಾಣಿ ಜನರನ್ನು ಅಪರಾಧಿ ಬುಡಕಟ್ಟುಗಳ ಕಾಯ್ದೆಯಡಿ ಸೇರಿಸಿ ಅಪರಾಧಿ ಜನಾಂಗವೆಂದು ಪರಿಗಣಿಸಿದ್ದರಿಂದ ಪ್ರತ್ಯೇಕವಾಗಿ ವಾಸವಾಗಿರಬಹುದು.

4 ಲಂಬಾಣಿಗರು ಭಟ್ಟಿ ಸಾರಾಯಿ ತಯಾರಿಸುವವರಾಗಿದ್ದರಿಂದ ಪ್ರತ್ಯೇಕ ಸ್ಥಳಗಳಲ್ಲಿ ವಾಸವಾಗಿದ್ದಾರೆ.

5 ತಮ್ಮ ಸಂಸ್ಕೃತಿ, ಭಾಷೆ, ಸಂಪ್ರದಾಯ, ರೀತಿ-ನೀತಿಗಳನ್ನು ಕಾಪಾಡಿಕೊಂಡು ಹೋಗಲು,

6 ಇವರು ಮಾಂಸಾಹಾರಿಗಳಾಗಿರುವುದರಿಂದ ಅರಣ್ಯ ಪ್ರದೇಶದಲ್ಲಿ ಪ್ರಾಣಿ-ಪಕ್ಷಿಗಳನ್ನು ಬೇಟೆಯಾಡಲು ಅನುಕೂಲವಾಗುವ ಹಾಗೆ ಪ್ರತ್ಯೇಕವಾಗಿ ನೆಲೆಸಿರಬಹುದು.

7 ಸಾಂಪ್ರದಾಯಿಕ ಉದ್ಯೋಗ ಕಳೆದುಕೊಂಡು ಅರಣ್ಯದಲ್ಲಿ ಸಿಗುವ ಅರಣ್ಯ ಉತ್ಪನ್ನ ವಸ್ತುಗಳನ್ನು ಮಾರಿ ಜೀವನ ಸಾಗಿಸುತ್ತಿದ್ದರಿಂದ ಅರಣ್ಯಗಳ ಸಮೀಪದ ಪ್ರದೇಶಗಳಲ್ಲಿ ವಾಸವಾಗಿದ್ದಾರೆ.

8 ಅಲೆಮಾರಿಗಳಾಗಿದ್ದರಿಂದ ಲಂಬಾಣಿಗರಿಗೆ ಭೂಮಿ ಇರಲಿಲ್ಲ. ಈ ಕಾರಣಕ್ಕಾಗಿ ಕಾಡುಗಳನ್ನು ಕಡಿದು ಸ್ವಚ್ಛಗೊಳಿಸಿ ಸಾಗುವಳಿ ಭೂಮಿಯನ್ನಾಗಿ ಮಾಡಿಕೊಳ್ಳಲು ಪ್ರತ್ಯೇಕ ನೆಲೆಸಿರಬಹುದು.

ಈ ಮೇಲಿನ ಕಾಣಗಳಿಗಾಗಿ ಲಂಬಾಣಿಗರು ಪ್ರತ್ಯೇಕ ವಾಸವಾಗಿದ್ದಾರೆ. ಹೆಚ್ಚಿನ ಸಂಖ್ಯೆಯಲ್ಲಿ ಅನಕ್ಷರಸ್ಥರಾಗಿರುವ ಲಂಬಾಣಿಗರು ಕೂಲಿಕಾರರಾಗಿದ್ದು, ನಾಗರಿಕ ಸೌಲಭ್ಯಗಳಿಂದ ವಂಚಿತರಾಗಿದ್ದಾರೆ. ಕೆಲವರು ಕಷ್ಟಪಟ್ಟು ದುಡಿದು ಭೂಮಿ ಖರೀದಿಸಿಕೊಂಡು ಸಾಗುವಳಿಗಾರರಾಗಿದ್ದಾರೆ. ಮತ್ತೆ ಕೆಲವರು ಇತರರ ಭೂಮಿಯನ್ನು ಗೇಣಿಗೆ ಪಡೆದು ಜೀವನ ನಿರ್ವಹಿಸುತ್ತಿದ್ದಾರೆ. ವಿಜಾಪುರ ಜಿಲ್ಲೆಯ ಹೆಚ್ಚಿನ ಸಂಖ್ಯೆಯ ಲಂಬಾಣಿಗರು ಕೂಲಿಕಾರರಾಗಿದ್ದು ಕಡುಬಡವರಾಗಿದ್ದಾರೆ.

**ವಿಜಾಪುರ ಜಿಲ್ಲೆಯ ಜನಸಂಖ್ಯೆ:**

1991ರ ಜನಗಣತಿಯ ಪ್ರಕಾರ ಜಿಲ್ಲೆಯು ಒಟ್ಟು 29,27,990 ರಷ್ಟು ಜನಸಂಖ್ಯೆ ಹೊಂದಿದೆ. ಇವರಲ್ಲಿ 14,91,019ರಷ್ಟು ಪುರುಷರು ಮತ್ತು 14,36,971ರಷ್ಟು ಮಹಿಳೆಯರಿದ್ದಾರೆ. ಹಾಗೂ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳ ಜನಸಂಖ್ಯೆ ಕ್ರಮವಾಗಿ 38,881 ಮತ್ತು 1516ರಷ್ಟಿದೆ. ಗ್ರಾಮೀಣ ಮತ್ತು ನಗರ ಪ್ರದೇಶಗಳ ಜನಸಂಖ್ಯೆಯನ್ನು ಅವಲೋಕಿಸಿದಾಗ ಒಟ್ಟು ಜನಸಂಖ್ಯೆಯಲ್ಲಿ ಪ್ರತಿಶತ 76.48ರಷ್ಟು ಜನರು ಗ್ರಾಮೀಣ ಪ್ರದೇಶದಲ್ಲಿ ಹಾಗೂ ಪ್ರತಿಶತ 23.52ರಷ್ಟು ಜನರು ನಗರ ಪ್ರದೇಶದಲ್ಲಿ ವಾಸವಾಗಿದ್ದಾರೆ. ಈ ಮೇಲಿನ ಅಂಕಿ-ಅಂಶಗಳಿಂದ ವ್ಯಕ್ತವಾಗುವುದೇನೆಂದರೆ ವಿಜಾಪುರ ಜಿಲ್ಲೆಯಲ್ಲಿ ಹೆಚ್ಚು ಜನರು ಗ್ರಾಮೀಣ ಪ್ರದೇಶದಲ್ಲಿ ವಾಸವಾಗಿದ್ದಾರೆ.

ಲಂಬಾಣಿಗರ ಜನಸಂಖ್ಯೆ:

ಕೋಷ್ಠಕ 2, 1996-97ರಲ್ಲಿ ಕರ್ನಾಟಕದ ವಿವಿಧ ಜಿಲ್ಲೆಗಳ ಲಂಬಾಣಿಗರ ಜನಸಂಖ್ಯೆ

| ಅ.ನಂ | ಜಿಲ್ಲೆಯ ಹೆಸರು | ಜನಸಂಖ್ಯೆ | ಪ್ರತಿಶತ |
|---|---|---|---|
| 1. | ಗುಲ್ಬರ್ಗ | 268544 | 17.95 |
| 2. | ವಿಜಾಪುರ | 244563 | 16.35 |
| 3. | ಶಿವಮೊಗ್ಗ | 159836 | 10.68 |
| 4. | ಧಾರವಾಡ | 128801 | 8.61 |
| 5. | ಬಳ್ಳಾರಿ | 113992 | 7.62 |
| 6. | ರಾಯಚೂರು | 105980 | 7.08 |
| 7. | ಚಿತ್ರದುರ್ಗ | 102763 | 6.87 |
| 8. | ಬೀದರ | 98460 | 6.58 |
| 9. | ತುಮಕೂರು | 65212 | 4.36 |
| 10. | ಚಿಕ್ಕಮಗಳೂರು | 59824 | 4.0 |
| 11. | ಬೆಂಗಳೂರು | 53185 | 3.55 |
| 12. | ಬೆಳಗಾಂವ | 28220 | 1.89 |
| 13. | ಹಾಸನ | 26970 | 1.80 |
| 14. | ಮೈಸೂರು | 20287 | 1.36 |
| 15. | ಕೋಲಾರ | 10789 | 0.72 |
| 16. | ಉತ್ತರಕನ್ನಡ | 6359 | 0.42 |
| 17. | ಮಂಡ್ಯ | 2289 | 0.15 |
| | ಒಟ್ಟು ಜನಸಂಖ್ಯೆ | **14,96078** | **100.00** |

ಆಧಾರ ಎಂ.ಎಸ್.ನಾಯಕ (ಸಂ) ಕರ್ನಾಟಕ ಬಂಜಾರಾ ಕೈಪಿಡಿ, 1997 ಪುಟ, 176, ಅಖಿಲ ಕರ್ನಾಟಕ ಬಂಜಾರಾ ವಿದ್ಯಾರ್ಥಿ ವೇದಿಕೆ (ರಿ) ಬೆಂಗಳೂರು

ಮೇಲಿನ ಕೋಷ್ಟಕ 2 ರಿಂದ ತಿಳಿದುಬರುವುದೇನೆಂದರೆ, ಕರ್ನಾಟಕ ರಾಜ್ಯದಲ್ಲಿ ಗುಲ್ಬರ್ಗ ಜಿಲ್ಲೆಯು ಹೆಚ್ಚಿನ ಲಂಬಾಣಿ ಜನಸಂಖ್ಯೆ ಹೊಂದಿ ಪ್ರಥಮ ಸ್ಥಾನ ಪಡೆದಿದೆ. (2,68544) ವಿಜಾಪುರ ಜಿಲ್ಲೆಯು 2,44563, ಲಂಬಾಣಿ ಜನಸಂಖ್ಯೆ ಹೊಂದಿ, ಎರಡನೆಯ ಸ್ಥಾನ ಹೊಂದಿದೆ. ಶಿವಮೊಗ್ಗ ಜಿಲ್ಲೆಯು, 15,9836ರಷ್ಟು ಜನಸಂಖ್ಯೆ ಹೊಂದಿದ್ದು ಮೂರನೆಯ ಸ್ಥಾನದಲ್ಲಿದೆ. ಮಂಡ್ಯ ಜಿಲ್ಲೆಯು ಕೇವಲ 2289 ಜನಸಂಖ್ಯೆ ಹೊಂದಿ ರಾಜ್ಯದಲ್ಲಿ ಅತಿ ಕಡಿಮೆ ಸಂಖ್ಯೆಯಲ್ಲಿ ಲಂಬಾಣಿಗರು ವಾಸವಾಗಿರುವ ಜಿಲ್ಲೆ ಎನ್ನಿಸಿಕೊಂಡಿದೆ.

**ಕೋಷ್ಟಕ -3, ಹೊಸ ವಿಜಾಪುರ ಜಿಲ್ಲೆಯ ವಿವಿಧ ತಾಲ್ಲೂಕುಗಳ ಲಂಬಾಣಿಗರ ಜನಸಂಖ್ಯೆ ಹಾಗೂ ಶಿಕ್ಷಣ**

| ಅ.ನು | ತಾಲ್ಲೂಕುಗಳು | ಅಕ್ಷರಸ್ಥರು | ಪ್ರತಿಶತ | ಅನಕ್ಷರಸ್ಥರು | ಪ್ರತಿಶತ | ಒಟ್ಟು ಜನಸಂಖ್ಯೆ | ಪ್ರತಿಶತ |
|---|---|---|---|---|---|---|---|
| 1 | ವಿಜಾಪುರ | 25,287 | (31.30) | 55,508 | (68.70) | 80,795 | (100%) |
| 2 | ಸಿಂದಗಿ | 8,967 | (28.74) | 22,233 | (71.26) | 31,200 | (100%) |
| 3 | ಮುದ್ದೇಬಿಹಾಳ | 6,594 | (36.08) | 11,681 | (63.92) | 18,275 | (100%) |
| 4 | ಬಸವನಬಾಗೇವಾಡಿ | 5,831 | (32.71) | 11,995 | (67.29) | 17,826 | (100%) |
| 5 | ಇಂಡಿ | 11,384 | (28.25) | 28,919 | (71.75) | 40,303 | (100%) |

ಮೇಲಿನ ಕೋಷ್ಟಕದ ಪ್ರಕಾರ ವಿಜಾಪುರ, ಹೊಸ ಜಿಲ್ಲೆಯ ಒಟ್ಟು 1,88399ರಷ್ಟು ಲಂಬಾಣಿಗರಲ್ಲಿ ಪ್ರಚಲಿತ 30.82ರಷ್ಟು ಅಕ್ಷರಸ್ಥರು, ಹಾಗೂ 69.18ರಷ್ಟು ಅನಕ್ಷರಸ್ಥರಿದ್ದಾರೆ. ವಿಜಾಪುರ ತಾಲ್ಲೂಕು ಹೆಚ್ಚು ಲಂಬಾಣಿಗರ ಜನಸಂಖ್ಯೆ ಹೊಂದಿದ್ದರೆ. ಬಸವನ ಬಾಗೇವಾಡಿ ತಾಲ್ಲೂಕು ಅತ್ಯಂತ ಕಡಿಮೆ ಜನಸಂಖ್ಯೆಯನ್ನು ಹೊಂದಿದೆ 17,826 ಇವರಲ್ಲಿ ಪ್ರತಿಶತ 32.71ರಷ್ಟು ಅಕ್ಷರಸ್ಥರು ಹಾಗೂ ಪ್ರತಿಶತ 67.29ರಷ್ಟು ಅನಕ್ಷರಸ್ಥರಿದ್ದಾರೆ.

**ಸಂಶೋಧನಾ ಕ್ಷೇತ್ರ (The Field):**

ಪ್ರಸ್ತುತ ಅಧ್ಯಯನಕ್ಕಾಗಿ ವಿಜಾಪುರ ಜಿಲ್ಲೆಯ ಬಸವನ ಬಾಗೇವಾಡಿ ತಾಲ್ಲೂಕಿನ ನರಸಲಗಿ ತಾಂಡಾವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಇದು ಬಸವನ ಬಾಗೇವಾಡಿಯಿಂದ 8 ಕಿ.ಮೀ. ದೂರದಲ್ಲಿ ನೈರುತ್ಯ ಭಾಗದಲ್ಲಿದೆ ಇಲ್ಲಿಯ ಜನರು ತಮ್ಮ ಉಪಜೀವಕ್ಕಾಗಿ ಕೃಷಿ ಹಾಗೂ ಕೂಲಿ ಕೆಲಸವನ್ನು ಅವಲಂಬಿಸಿದ್ದಾರೆ. ತಾಂಡಾ ಇನ್ನು ಕಂದಾಯ ಗ್ರಾಮವಾಗಿ ಪರಿವರ್ತನೆ ಆಗಿಲ್ಲ ಆದ್ದರಿಂದ ರಸ್ತೆ, ಚರಂಡಿ, ಪ್ರಾಥಮಿಕ ಆರೋಗ್ಯಕೇಂದ್ರ, ಶೌಚಾಲಯ, ಮುಂತಾದ ಮೂಲಭೂತ ಸೌಕರ್ಯಗಳಿಂದ ವಂಚಿತವಾಗಿದೆ. ನರಸಲಗಿ ಗ್ರಾಮ ಪಂಚಾಯತಿಯ ವ್ಯಾಪ್ತಿಯಲ್ಲಿ ನರಸಲಗಿ ತಾಂಡಾ ಒಳಪಟ್ಟಿದ್ದು, ಗ್ರಾಮ ಪಂಚಾಯತಿಯಿಂದ 1 ಕಿ.ಮೀ. ದೂರದಲ್ಲಿದೆ.

# ಭಾರತ



# ಕರ್ನಾಟಕ ರಾಜ್ಯದಲ್ಲಿ ಬಿಜಾಪುರ ಜಿಲ್ಲೆ



# ಬಿಜಾಪುರ ಜಿಲ್ಲೆ



## ಬಸವನ ಬಾಗೇವಾಡಿ ತಾಲ್ಲೂಕಿನಲ್ಲಿ ನರಸಲಗಿ ತಾಂಡಾ ಸೂಚಿಸುವ ನಕಾಶೆ



**ನರಸಲಗಿ ತಾಂಡಾದ ಜನಸಂಖ್ಯೆ:**

ನರಸಲಗಿ ತಾಂಡಾದಲ್ಲಿ ವಾಸವಾಗಿರುವ ಜನಸಂಖ್ಯೆಯನ್ನು ಕೆಳಗಿನ ಕೋಷ್ಟಕದ ಸಹಾಯದಿಂದ ತಿಳಿಯಬಹುದು.

**ಕೋಷ್ಟಕ 4, ನರಸಲಗಿ ತಾಂಡಾದ ಜನರ ಲಿಂಗ ಹಾಗೂ ಅಕ್ಷರಸ್ಥರ ಸಂಖ್ಯೆ ಮತ್ತು ಶೇಖಡವಾರು ಹಂಚಿಕೆ**

| ಲಿಂಗ | ಒಟ್ಟು ಸಂಖ್ಯೆ | ಪ್ರತಿಶತ |
|---|---|---|
| ಪುರುಷರ ಸಂಖ್ಯೆ | 671 | 51.06 |
| ಸ್ತ್ರೀಯರ ಸಂಖ್ಯೆ | 643 | 48.96 |
| ಒಟ್ಟು | **1314** | **100%** |

| ಶಿಕ್ಷಣ | ಒಟ್ಟು ಜನಸಂಖ್ಯೆ | ಪ್ರತಿಶತ |
|---|---|---|
| ಅಕ್ಷರಸ್ಥರು | 178 | 13.55 |
| ಅನಕ್ಷರಸ್ಥರು | 1136 | 86.45 |
| ಒಟ್ಟು | **1314** | **100%** |

ಮೇಲಿನ ಕೋಷ್ಟಕದ ಪ್ರಕಾರ ನರಸಲಗಿ ತಾಂಡಾದ ಒಟ್ಟು 1314 ಜನರಲ್ಲಿ ಪ್ರತಿಶತ 51.6ರಷ್ಟು ಪುರುಷರು ಹಾಗೂ ಪ್ರತಿಶತ 48.96ರಷ್ಟು ಸ್ತ್ರೀಯರಿದ್ದಾರೆ. ಇವರಲ್ಲಿ ಪ್ರತಿಶತ 13.55ರಷ್ಟು ಅಕ್ಷರಸ್ಥರು ಹಾಗೂ ಪ್ರತಿಶತ 86.45ರಷ್ಟು ಜನರು ಅನಕ್ಷರಸ್ಥರಾಗಿದ್ದಾರೆ. ತಾಂಡಾದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಅನಕ್ಷರಸ್ಥರಿರುವುದು ಕಂಡುಬರುತ್ತದೆ.

**ಕೌಟುಂಬಿಕ ಹಿನ್ನೆಲೆ (Family Background)**

ಮಾನವನ ಹಲವಾರು ಸಂಸ್ಥೆಗಳಲ್ಲಿ ಕುಟುಂಬವು ಬಹಳ ಮುಖ್ಯವಾದ ಪ್ರಾಥಮಿಕ ಸಮೂಹವಾಗಿದೆ. ಇದು ಇತಿಹಾಸ ಪೂರ್ವ ಅವಧಿಯಲ್ಲಿ ಹುಟ್ಟಿ ರೂಪಾಂತರಗೊಳ್ಳುತ್ತಾ ಆಧುನಿಕ ಕಾಲದಲ್ಲಿಯೂ, ಮುಂದುವರಿದಿದೆ.

**1. ಕುಟುಂಬದ ಮುಖ್ಯಸ್ಥರ ಲಿಂಗ ರಚನೆ (Sex of the Head of the House hold)**

ಕುಟುಂಬದಲ್ಲಿಯ ಅಧಿಕಾರದ ಚಲಾವಣೆಯ ಆಧಾರದ ಮೇಲೆ ಕುಟುಂಬವನ್ನು ಪಿತೃಪ್ರಧಾನ, ಹಾಗೂ ಮಾತೃ ಪ್ರಧಾನ ಕುಟುಂಬಗಳೆಂದು ವಿಂಗಡಿಸಲಾಗಿದೆ. ಯಾವ ಕುಟುಂಬಕ್ಕೆ ಪುರುಷ ಅಥವಾ ಕುಟುಂಬದ ಹಿರಿಯ ವ್ಯಕ್ತಿ ಮುಖ್ಯಸ್ಥನಿರುತ್ತಾನೋ, ಅಂತಹ ಕುಟುಂಬಕ್ಕೆ ಪಿತೃಪ್ರಧಾನ ಕುಟುಂಬವೆಂದು ಕರೆಯುತ್ತಾರೆ. ಪಿತೃಪ್ರಧಾನ ಕುಟುಂಬದಲ್ಲಿ ಸ್ತ್ರೀಯರಿಗೆ ಅಷ್ಟೊಂದು ಸ್ವಾತಂತ್ರ್ಯವಿರುವುದಿಲ್ಲ. ಸಾಮಾನ್ಯವಾಗಿ ಈ ಪ್ರಕಾರದ ಕುಟುಂಬದ ಅಧಿಕಾರವು ತಂದೆಯಿಂದ ಮಗನಿಗೆ ಹಸ್ತಾಂತರವಾಗುತ್ತದೆ. ತಲೆತಲಾಂತರದಿಂದ ಬಂದ ಕುಟುಂಬದ ಆಸ್ತಿಯು ಪುರುಷ ವ್ಯಕ್ತಿಗೆ ಮಾತ್ರ ಹತ್ತಾಂತರವಾಗುತ್ತದೆ. ಪಿತೃಪ್ರಧಾನ ಕುಟುಂಬದಲ್ಲಿ ಮಹಿಳೆಯರಿಗೆ ಆಸ್ತಿ ನೀಡುವುದಿಲ್ಲ. ಯಾವ ಕುಟುಂಬಕ್ಕೆ ಸ್ತ್ರೀ ಅಥವಾ ಕುಟುಂಬದ ಹಿರಿಯ ಮಹಿಳೆ ಮುಖ್ಯಸ್ಥೆಯಾಗಿರುತ್ತಾಳೋ, ಅಂತಹ ಕುಟುಂಬಕ್ಕೆ ಮಾತೃಪ್ರಧಾನ ಕುಟುಂಬ ಎನ್ನುತ್ತಾರೆ. ಮಾತೃಪ್ರದಾನ ಕುಟುಂಬದಲ್ಲಿ ಮಹಿಳೆಗೆ ಪುರುಷನಿಗಿಂತ ಉನ್ನತ ಸ್ಥಾನಮಾನಗಳಿರುತ್ತವೆ. ಕುಟುಂಬದ ಆಸ್ತಿಗೆ ಸ್ತ್ರೀಯು ಯಜಮಾನಿಯಾಗಿದ್ದು ವಿವಾಹದ ನಂತರ ಸ್ತ್ರೀ ಗಂಡನ ಮನೆಗೆ ಹೋಗುವುದಿಲ್ಲ. ಪತಿಯಾದವನು

ಮಾತೃಸ್ಥಾನಿಯ ಕುಟುಂಬದಲ್ಲಿ ಬಂದು ನೆಲೆಸುತ್ತಾನೆ. ಇಂತಹ ಕುಟುಂಬಗಳು ಆಧುನಿಕ ಸಮಾಜದಲ್ಲಿ ಹೆಚ್ಚಾಗಿ ಕಂಡುಬರುವುದಿಲ್ಲ. ನರಸಲಗಿ ತಾಂಡಾದ ಕುಟುಂಬದ ಮುಖ್ಯಸ್ಥರ ಲಿಂಗರಚನೆಯನ್ನು ಕೋಷ್ಟಕ 5 ವಿವರಿಸುತ್ತದೆ.

**ಕೋಷ್ಟಕ 5, ಮಾಹಿತಿದಾರರ ಲಿಂಗ ಆಧಾರಿತ ಸಂಖ್ಯೆ ಮತ್ತು ಶೇಕಡವಾರು ಹಂಚಿಕೆ**

**(Number & Percentage distribution of respondents by sex)**

| ಲಿಂಗ | ಸಂಖ್ಯೆ | ಪ್ರತಿಶತ |
|---|---|---|
| ಪುರುಷರು | 47 | 78.33 |
| ಮಹಿಳೆಯರು | 13 | 21.67 |
| ಒಟ್ಟು | **60** | **100.00** |

ಮೇಲಿನ ಕೋಷ್ಟಕದ ಪ್ರಕಾರ ಅಧ್ಯಯನಕ್ಕೆ ಒಳಪಡಿಸಿರುವ 60 ನಮೂನೆ ಕುಟುಂಬಗಳಲ್ಲಿ ಪ್ರತಿಶತ 78.33ರಷ್ಟು ಕುಟುಂಬಗಳಿಗೆ ಪುರುಷರು ಮುಖ್ಯಸ್ಥರಾಗಿದ್ದಾರೆ. ಅಂದರೆ ಲಂಬಾಣಿಗರಲ್ಲಿ ಹೆಚ್ಚಾಗಿ ಪಿತೃಪ್ರಧಾನ ಕುಟುಂಬವಿರುವುದು ಕಂಡುಬರುತ್ತದೆ. ಪ್ರತಿಶತ 21.67ರಷ್ಟು ಮಹಿಳೆಯರು ಕುಟುಂಬದ ಜವಾಬ್ದಾರಿ ನಿರ್ವಹಿಸುತ್ತಿದ್ದು ಅವರಲ್ಲಿ ವಿಧವೆಯರು ಪ್ರತಿಶತ 15.00 ವಿಚ್ಛೇದಿತರು, ಪ್ರತಿಶತ 3.33ರಷ್ಟು ಗಂಡನಿಂದ ವಿಚ್ಛೇಧನೆ ಪಡೆಯದೆ ಜೀವನ ಸಾಗಿಸುತ್ತಿರುವ ಸ್ತ್ರೀಯರಾಗಿದ್ದಾರೆ.

**2. ಮಾಹಿತಿದಾರರ ವಯಸ್ಸು (Age of the Respondents)**

ವಯಸ್ಸು ಹಾಗೂ ಲಿಂಗಗಳು ಸಾಮಾಜಿಕ-ಜನಸಂಖ್ಯಾಶಾಸ್ತ್ರೀಯ ಮಹತ್ವದ ಮೂಲಭೂತ ಲಕ್ಷಣಗಳಾಗಿವೆ. ವಯೋರಚನೆಯ ಅಧ್ಯಯನವು ಅತ್ಯಂತ ಅವಶ್ಯಕವಾಗಿದೆ. ಕಾರಣ ಇದರ ಸ್ವರೂಪವು ಸಾಮಾಜಿಕ ಸಂಗತಿಗಳ ಮೇಲೆ ಅಗಾಧವಾದ ಪರಿಣಾಮ ಬೀರುತ್ತದೆ. ಜನನ ದರ ಹಾಗೂ ಮರಣ ದರಗಳ ವ್ಯತ್ಯಾಸವು ನೇರವಾಗಿ ವಯೋರಚನೆಯ ಮೇಲೆ ಅವಲಂಬಿಸಿದೆ. ಯಾವ ಸಮಾಜದಲ್ಲಿ ವೃದ್ಧರ ಸಂಖ್ಯೆ ಹೆಚ್ಚಿರುತ್ತದೆಯೋ, ಅಂತಹ ಸಮಾಜದಲ್ಲಿ ಹೆಚ್ಚಿನ ಮರಣ ದರ ಇರುತ್ತದೆ. ಅದೇ ಪ್ರಕಾರವಾಗಿ ಯುವಕರು ಹೆಚ್ಚಿರುವ ಸಮಾಜಗಳಲ್ಲಿ ಹೆಚ್ಚಿನ ಜನನ ದರ ಇರುತ್ತದೆ. ಸಮಾಜದ ಬದಲಾವಣೆಯ ಮೇಲೂ ಸಹ ವಯೋರಚನೆ, ಪ್ರಭಾವ ಬೀರಿದ್ದು, ಯಾವ ಸಮಾಜದಲ್ಲಿ ಯುವಕರು ಹೆಚ್ಚಿಗಿರುತ್ತಾರೋ, ಅಂತಹ ಸಮಾಜದಲ್ಲಿ ಬದಲಾವಣೆ ಬಯಸಿ ಅದನ್ನು ಅನುಷ್ಠಾನದಲ್ಲಿ ತರುವುದರಿಂದ ಸಮಾಜ ಬದಲಾಗುತ್ತದೆ. ಆದರೆ ವೃದ್ಧರು ಸಾಮಾಜಿಕ ಬದಲಾವಣೆ ಬಯಸುವುದಿಲ್ಲ. ಸಮಾಜದ ಆರ್ಥಿಕ ಸ್ಥಿತಿ-ಗತಿಗಳು ಸಹ ವಯೋರಚನೆಯ ಮೇಲೆ ಅವಲಂಬಿಸಿದೆ. ಯುವಕರು ಹೆಚ್ಚಾಗಿರುವ ಸಮಾಜಗಳಲ್ಲಿ ಆರ್ಥಿಕ ಸ್ಥಿತಿ ಉತ್ತಮವಾಗಿರುತ್ತವೆ. ಹಾಗೂ ವಯೋವೃದ್ಧರು ಹೆಚ್ಚಿರುವ ಸಮಾಜದಲ್ಲಿ ಆರ್ಥಿಕ ಸ್ಥಿತಿ-ಗತಿಗಳು ಉತ್ತಮವಾಗಿರುವುದಿಲ್ಲ.

ಪ್ರಸ್ತುತ ಅಧ್ಯಯನಕ್ಕಾಗಿ 60 ನಮೂನೆ ಕುಟುಂಬಗಳನ್ನು ಆಯ್ದುಕೊಳ್ಳಲಾಗಿದೆ. ಆದ್ದರಿಂದ ಮಾಹಿತಿದಾರರು ಅಷ್ಟೇ ಸಂಖ್ಯೆಯಲ್ಲಿದ್ದಾರೆ. ಮಾಹಿತಿದಾರರು ಕುಟುಂಬದ ಮುಖ್ಯಸ್ಥರಾಗಿರುವುದರಿಂದ ಸಾಮಾನ್ಯವಾಗಿ ಮಧ್ಯವಯಸ್ಸಿನವರು ಹಾಗೂ ವಯೋವೃದ್ಧರ ಗುಂಪಿಗೆ ಸೇರಿದವರಾಗಿರುತ್ತಾರೆ. ವಿವರವಾದ ಮಾಹಿತಿಯನ್ನು ಮುಂದಿನ ಕೋಷ್ಟಕದ ಸಹಾಯದಿಂದ ತಿಳಿಯಬಹುದು.

**ಕೋಷ್ಟಕ 6 ಮಾಹಿತಿದಾರರ ವಯೋರಚನೆ ಆಧಾರಿತ ಸಂಖ್ಯೆ ಮತ್ತು ಶೇಕಡವಾರು ಹಂಚಿಕೆ**

**(Number & Percentage disrtibution of respondents by age)**

| ವಯಸ್ಸು | ಸಂಖ್ಯೆ | ಪ್ರತಿಶತ |
|---|---|---|
| 21-30 | 4 | 6.67 |
| 31-40 | 5 | 8.33 |
| 41-50 | 17 | 28.33 |
| 51 + | 34 | 56.67 |
| **ಒಟ್ಟು** | **60** | **100** |

ಮೇಲಿನ ಕೋಷ್ಟಕ ಸಂಖ್ಯೆ 6 ರಿಂದ ನಾವು ತಿಳಿದುಕೊಳ್ಳುವುದೇನೆಂದರೆ ಹೆಚ್ಚಿನ ಸಂಖ್ಯೆಯ ಪ್ರತಿಶತ 56.67ರಷ್ಟು ಮಾಹಿತಿದಾರರು ವಯೋವೃದ್ಧರ ಗುಂಪಿಗೆ ಸೇರಿದವರಾಗಿದ್ದು, ಅವರು 51 ವರ್ಷ ವಯಸ್ಸು ದಾಟಿದವರಾಗಿದ್ದಾರೆ. ಪ್ರತಿಶತ 6.67ರಷ್ಟು ತರುಣರಾಗಿದ್ದು, 21-30 ವಯೋಗುಂಪಿಗೆ ಸೇರಿದವರಾಗಿದ್ದಾರೆ. 31 ರಿಂದ 50ರ ವಯೋಗುಂಪಿಗೆ ಸೇರಿದ ಮಧ್ಯಮವಯಸ್ಕರು ಪ್ರತಿಶತ 36.66 ರಷ್ಟಿದ್ದಾರೆ. ಈ ಅಂಕಿ ಅಂಶಗಳ ಪ್ರಕಾರ ಬಹುಸಂಖ್ಯಾತ ಮಾಹಿತಿದಾರರು ವಯೋವೃದ್ಧರಾಗಿದ್ದು, ಆರ್ಥಿಕವಾಗಿ ಕುಂಟುಬವನ್ನು ಅವಲಂಬಿಸಿದ್ದಾರೆ. ಪ್ರತಿಶತ 36.66ರಷ್ಟು ಮಧ್ಯಮ ವಯಸ್ಕರು, ಹಾಗೂ ಪ್ರತಿಶತ 6.67ರಷ್ಟು ಯುವಕರು ದುಡಿಯುವ ವಯಸ್ಸಿನವರಾಗಿದ್ದು, ಆರ್ಥಿಕತೆ ಸಂಪಾದಿಸಿ ಕುಟುಂಬ ನಿರ್ವಹಿಸುವವರಾಗಿದ್ದಾರೆ.

### 3. ಮಾಹಿತಿದಾರರ ವಾಸದ ಮನೆಗಳ ಬಗೆಗಳು : (Types of Residence of the Respondents)

ಅಲೆಮಾರಿ ಜೀವನ ಸಾಗಿಸುತ್ತಾ ದವಸ ಧಾನ್ಯಗಳನ್ನು ಸಾಗಾಣಿಕೆ ಹಾಗೂ ಮಾರಾಟ ಮಾಡುತ್ತಿದ್ದ ಲಂಬಾಣಿಗರು ಧೀರ್ಘಕಾಲದವರೆಗೆ ಒಂದು ಶಾಶ್ವದ ಪ್ರದೇಶದಲ್ಲಿ ನೆಲೆಗೊಳ್ಳುವುದು ಸಾಧ್ಯವಾಗಲಿಲ್ಲ. ಅವರು ಶಾಶ್ವತ ನೆಲೆಗೊಳ್ಳದಿರುವುದಕ್ಕೆ ಅವರ ಉದ್ಯೋಗವೇ ಕಾರಣವಾಗಿತ್ತು. ಕಾಲಾಂತರದಲ್ಲಿ ತಂತ್ರಜ್ಞಾನದ ಫಲದಿಂದ ಆಧುನಿಕ ಸಾರಿಗೆ ಸಂಪರ್ಕ ಸಾಧನಗಳು ಪ್ರಾರಂಭವಾದದ್ದರಿಂದ ಲಂಬಾಣಿಗರು ಸಾಂಪ್ರದಾಯಿಕ ಸಾಗಾಣಿಕೆಯ ಉದ್ಯೋಗ ಕಳೆದುಕೊಂಡು ಆರ್ಥಿಕ ಸಮಸ್ಯೆ ಎದುರಿಸಿ ಗ್ರಾಮಗಳ ಹತ್ತಿರದ ಸ್ಥಳಗಳಲ್ಲಿ ಗುಡಿಸಲುಗಳನ್ನು ನಿರ್ಮಿಸಿಕೊಂಡು ನೆಲೆಗೊಂಡರು. ಇಂದು ಕೂಡ ಬಡವರಾಗಿರುವ ಲಂಬಾಣಿಗರು ಗುಡಿಸಲು ಹಾಗೂ ಮಣ್ಣಿನಿಂದ ನಿರ್ಮಿಸಿದ ಮನೆಗಳಲ್ಲಿ ವಾಸವಾಗಿದ್ದಾರೆ. ಅಧ್ಯಯನಕ್ಕೆ ಒಳಪಡಿಸಿದ ನರಸಲಗಿ ತಾಂಡಾದ ಲಂಬಾಣಿಗರ ವಾಸದ ಮನೆಗಳ ಸ್ವರೂಪವನ್ನು ಕೋಷ್ಟಕ 7 ವಿವರಿಸುತ್ತದೆ.

**ಕೋಷ್ಟಕ 7 ಮಾಹಿತಿದಾರರು ವಾಸಿಸುವ ಮನೆಗಳ ಪ್ರಕಾರಗಳಾಧಾರಿತ ಸಂಖ್ಯೆ ಮತ್ತು ಶೇಕಡವಾರು ಹಂಚಿಕೆ (Number and Percentage Distribution of Respondents by type of House)**

| ಮನೆಯ ಸ್ವರೂಪ | ಸಂಖ್ಯೆ | ಪ್ರತಿಶತ |
|---|---|---|
| ಆರ್.ಸಿ.ಸಿ. | 6 | 10 |
| ಮಾಳಿಗೆಮನೆ | 42 | 70 |
| ಗುಡಿಸಲು | 12 | 20 |
| **ಒಟ್ಟು** | **60** | **100** |

ಮೇಲಿನ ಕೋಷ್ಟಕದ ಪ್ರಕಾರ ಪ್ರತಿಶತ 70ರಷ್ಟು ಮಾಹಿತಿದಾರರು ಕಲ್ಲು ಮತ್ತು ಮಣ್ಣಿನಿಂದ ತಯಾರಿಸಿದ ಮಾಳಿಗೆ ಮನೆಗಳನ್ನು ಹೊಂದಿದ್ದಾರೆ. ಇನ್ನುಳಿದವರಲ್ಲಿ ಪ್ರತಿಶತ 20ರಷ್ಟು ಜನ ಗುಡಿಸಲುಗಳನ್ನು ಹಾಗೂ ಪ್ರತಿಶತ 10ರಷ್ಟು ಜನ ಮಾಹಿತಿದಾರರು ಆರ್.ಸಿ.ಸಿ. ಮನೆಗಳನ್ನು ಹೊಂದಿದ್ದಾರೆ. ಈ ಎಲ್ಲದರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಪ್ರತಿಶತ 70ರಷ್ಟು ಮಾಹಿತಿದಾರರು ಬಡತನದಿಂದ ಮಾಳಿಗೆ ಮನೆಗಳಲ್ಲಿ ಹಾಗೂ ಗುಡಿಸಲುಗಳಲ್ಲಿ ವಾಸವಾಗಿದ್ದಾರೆ. ಪ್ರತಿಶತ 96.67ರಷ್ಟು ಜನರಿಗೆ ವಾಸಿಸಸಲು ಸ್ವಂತ ಮನೆಗಳಿವೆ. ಆದರೆ ಪ್ರತಿಶತ 3.33ರಷ್ಟು ಜನರಿಗೆ ವಾಸಿಸಲು ಮನೆಗಳಿಲ್ಲ. ಈ ಅನಿವಾಸಿಗಳು ಬೇರೆ ತಾಂಡಾಗಳಿಂದ ವಲಸೆ ಬಂದವರಾಗಿದ್ದಾರೆ. ಆದ್ದರಿಂದ ಸ್ವಂತ ಮನೆಗಳನ್ನು ಹೊಂದದೆ ಇತರ ಲಂಬಾಣಿ ಜನರ ಮನೆಗಳನ್ನು ಬಾಡಿಗೆ ಪಡೆದು ವಾಸವಾಗಿದ್ದಾರೆ.

## 4. ಮಾಹಿತಿದಾರರ ಕುಟುಂಬಗಳ ಪ್ರಕಾರಗಳು : (Types of Family of the Respondents)

ಸಮಾಜದಲ್ಲಿ ಹಲವಾರು ಸಾಮಾಜಿಕ ಸಂಸ್ಥೆಗಳಿವೆ. ಅವುಗಳಲ್ಲಿ ಕುಟುಂಬವು ಒಂದು ಮೂಲಭೂತ, ಹಾಗೂ ಅತ್ಯವಶ್ಯಕವಾದ ಸಂಸ್ಥೆಯಾಗಿದೆ. ಅನೇಕ ಸಮಾಜಶಾಸ್ತ್ರಜ್ಞರು ಕುಟುಂಬವನ್ನು ಕುರಿತು ಅಧ್ಯಯನ ಮಾಡಿ ಇದೊಂದು ಸಾರ್ವತ್ರಿಕ ಸಂಸ್ಥೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಕುಟುಂಬವು ಇತಿಹಾಸದ ಎಲ್ಲಾ ಕಾಲದ ಸಮಾಜಗಳಲ್ಲಿ ಕಂಡು ಬರುತ್ತದೆ. ಹಾಗೂ ಸಮಾಜದ ಮೂಲಭೂತ ಘಟಕವಾಗಿದ್ದು, ಮಾನವನ ಹಲವಾರು ಮೂಲಭೂತ ಬೇಡಿಕೆಗಳನ್ನು ಈಡೇರಿಸುವಲ್ಲಿ ಅತ್ಯಂತ ಅವಶ್ಯಕವಾಗಿದೆ. ಕುಟುಂಬವನ್ನು ಮುಖ್ಯವಾಗಿ ಎರಡು ಪ್ರಕಾರಗಳಲ್ಲಿ ವಿಂಗಡಿಸಲಾಗಿದೆ. ಅವು ಅವಿಭಕ್ತ ಕುಟುಂಬ ಹಾಗೂ ವಿಭಕ್ತ ಕುಟುಂಬ ಅವಿಭಕ್ತ ಕುಟುಂಬವೆಂದರೆ ಎರಡು ಅಥವಾ ಮೂರು ತಲೆಮಾರುಗಳ ಒಂದು ಸಂತತಿಯ ಜನರು ಒಂದೇ ಮನೆಯಲ್ಲಿ ವಾಸಿಸುತ್ತಿದ್ದು, ಒಂದೇ ಒಲೆಯ ಮೇಲೆ ತಯಾರಿಸಿದ ಆಹಾರ ಸೇವಿಸುವವರಾಗಿದ್ದು, ಆಸ್ತಿಯ ಮೇಲೆ ಸಮಾನ ಒಡೆತನವನ್ನು ಹೊಂದಿರುತ್ತಾ, ಕುಟುಂಬದ ಉದ್ಯೋಗ ಹಾಗೂ ಪೂಜಾ ಕಾರ್ಯಗಳಲ್ಲಿ ಸಾಮೂಹಿಕವಾಗಿ ಪಾಲ್ಗೊಳ್ಳುತ್ತಾ ಪರಸ್ಪರ ಅನ್ಯೂನತೆಯಿಂದೊಡಗೂಡಿದ ಜನರ ಸಮೂಹವಾಗಿದೆ.

ವಿಭಕ್ತ ಕುಟುಂಬದವೆಂದರೆ ಇದು ಗಾತ್ರದಲ್ಲಿ ಚಿಕ್ಕದಾಗಿದ್ದು, ಇಂತಹ ಕುಟುಂಬದಲ್ಲಿ ವಿವಾಹವಾದ ದಂಪತಿಗಳು, ಅವರ ಮಕ್ಕಳು, ಅವರ ಪತ್ನಿಯರು ಪ್ರತ್ಯೇಕವಾಗಿ ವಾಸಿಸುವ ಒಂದು ಚಿಕ್ಕ ಘಟಕವಾಗಿದೆ.

ಇತ್ತೀಚಿನ ದಶಕಗಳಲ್ಲಿ ಹಲವಾರು ಕಾರಣಗಳಿಂದ ಅವಿಭಕ್ತ ಹಾಗೂ ವಿಸ್ತೃತ (Extended Family) ಕುಟುಂಬಗಳು ವಿಘಟನೆಗೊಳ್ಳುತ್ತಿವೆ. ಅದರ ಪ್ರಮಾಣ ನಗರ ಪ್ರದೇಶಗಳಲ್ಲಿ ಹೆಚ್ಚಿದೆ. ನರಸಲಗಿ ತಾಂಡಾದ ಲಂಬಾಣಿಗರು ವಾಸಿಸುವ ಕುಟುಂಬಗಳ ಸ್ವರೂಪಗಳನ್ನು ಕೋಷ್ಟಕ 8 ವಿವರಿಸುತ್ತದೆ.

**ಕೋಷ್ಟಕ 8 ಮಾಹಿತಿದಾರರ ಕುಟುಂಬಗಳ ಪ್ರಕಾರಗಳ ಆಧಾರಿತ ಸಂಖ್ಯೆ ಮತ್ತು ಶೇಕಡವಾರು ಹಂಚಿಕೆ**

**(Number and percentage distribution of respondents by type of Family)**

| ಕುಟುಂಬದ ಪ್ರಕಾರಗಳು | ಸಂಖ್ಯೆ | ಪ್ರತಿಶತ |
|---|---|---|
| ವಿಭಕ್ತ ಕುಟುಂಬ | 56 | 93.33 |
| ಅವಿಭಕ್ತ ಕುಟುಂಬ | 4 | 6.67 |
| ಒಟ್ಟು | **60** | **100.00** |

ಮೇಲಿನ ಕೋಷ್ಟಕದ ಪ್ರಕಾರ ಬಹುಸಂಖ್ಯಾತ ಮಾಹಿತಿದಾರರು ಪ್ರತಿಶತ 93.33ರಷ್ಟು ವಿಭಕ್ತ ಕುಟುಂಬಗಳಲ್ಲಿ ಪ್ರತಿಶತ 6.67ರಷ್ಟು ಮಾಹಿತಿದಾರರು ಅವಿಭಕ್ತ ಕುಟುಂಬಗಳಲ್ಲಿ ವಾಸವಾಗಿದ್ದಾರೆ. ಹೆಚ್ಚಿನ ಸಂಖ್ಯೆಯಲ್ಲಿ ಲಂಬಾಣಿಗರು ವಿಭಕ್ತ ಕುಟುಂಬಗಳಲ್ಲಿ ವಾಸವಾಗಲು ಅವಿಭಕ್ತ ಕುಟುಂಬ ಹಲವಾರು ಕಾರಣಗಳಿಂದ ಬದಲಾವಣೆಯಾಗಿರುವುದೇ ಕಾರಣವಾಗಿದೆ.

**5. ಮಾಹಿತಿದಾರರ ಕುಟುಂಬದ ಗಾತ್ರ ಹಾಗೂ ಕುಟುಂಬದ ಲಿಂಗ ರಚನೆ : (Size and sex Composition of the Family):**

ಎಲ್ಲ ಸಮಾಜಗಳಂತೆ ಭಾರತದಲ್ಲಿಯೂ ಕುಟುಬಂಗಳು ಸಾಮಾಜಿಕ ವ್ಯವಸ್ಥೆಯ ಅವಿಭಾಜ್ಯ ಅಂಗಳಾಗಿವೆ. ಸಾಮಾಜಿಕ ಜೀವನದ ಹಾಗೂ ಸಂಸ್ಕೃತಿಯ ಬೇರುಗಳು ಕುಟುಂಬ ವ್ಯವಸ್ಥೆಯಲ್ಲಿ ಆಳವಾಗಿ ಬೇರೂರಿವೆ. ಭಾರತದಲ್ಲಿ ಅನೇಕ ಶತಮಾನಗಳಿಂದ ಪೋಷಿಸಿಕೊಂಡು ಬಂದ ಸಂಯುಕ್ತ ಕುಟುಂಬಗಳು ಇಂದು ಬದಲಾವಣೆಯಾಗುತ್ತಿವೆ. ನಾಲ್ಕು ಅಥವಾ ಐದು ಪೀಳಿಗೆಗಳ ಜನರು ವಾಸಿಸುತ್ತಿದ್ದ ಕುಟುಂಬದಲ್ಲಿ ಇಂದು ಎರುಡು ಅಥವಾ ಮೂರು ತಲೆಮಾರುಗಳು ಜನರು ವಾಸವಾಗುತ್ತಿದ್ದಾರೆ. ಒಂದು ಕಾಲದಲ್ಲಿ ಸರಾಸರಿ 15 ರಿಂದ 30 ಜನರು ವಾಸಿಸುತ್ತಿದ್ದು, ಇಂದು 6 ರಿಂದ 10 ಜನರು ಮಾತ್ರ ಕಂಡುಬರುತ್ತಾರೆ. ಹಾಗೂ ರಕ್ತ ಸಂಬಂಧದ ಆಧಾರದ ಮೇಲೆ ಒಂದೇ ಕಡೆ ವಾಸಿಸುತ್ತಿದ್ದ, ಕುಟುಂಬಗಳು ಇಂದು ಕಂಡುಬರುತ್ತಿಲ್ಲ. ಉದ್ಯೋಗ, ಶಿಕ್ಷಣ, ಕುಟುಂಬದ ಸದಸ್ಯರ ಪ್ರತ್ಯೇಕ ವಾಸವಾಗುವ ಬಯಕೆ, ಸಂಪಾದನೆಯನ್ನು ತಾವೇ ಅನುಭೋಗಿಸುವ ಬಯಕೆ, ಮುಂತಾದ ಕಾರಣಗಳಿಂದ ಕುಟುಂಬಗಳು ಬದಲಾವಣೆಗೊಳ್ಳುತ್ತಿವೆ. ಮೊದಲು ಅವಿಭಕ್ತ ಕುಟುಂಬಗಳಲ್ಲಿ ಹೆಚ್ಚು ಮಕ್ಕಳನ್ನು ಪಡೆಯುತ್ತಿದ್ದರು. ಆದರೆ ಇಂದು ಕಡಿಮೆ ಮಕ್ಕಳನ್ನು ಪಡೆಯುತ್ತಿರುವುದರಿಂದ ಕುಟುಂಬದ ಗಾತ್ರ ಚಿಕ್ಕದಾಗುತ್ತಿದೆ.

ನರಸಲಗಿ ತಾಂಡಾದಲ್ಲಿ ಹೆಚ್ಚಿನ ಸಂಖ್ಯೆಯ ಲಂಬಾಣಿಗರು ವಿಭಕ್ತ ಕುಟುಂಬಗಳಲ್ಲಿ ವಾಸವಾಗಿದ್ದಾರೆ. ಅವರ ಕುಟುಂಬದ ಗಾತ್ರವನ್ನು ಕೆಳಗಿನ ಕೋಷ್ಟಕದ ಸಹಾಯದಿಂದ ತಿಳಿಯಬಹುದು.

**ಕೋಷ್ಟಕ 9 ಮಾಹಿತಿದಾರರ ಕುಟುಂಬದ ಗಾತ್ರ ಆಧಾರಿತ ಸಂಖ್ಯೆ ಮತ್ತು ಶೇಕಡವಾರು ಹಂಚಿಕೆ**

**(Number and percentage distribution of respondents by Household size)**

| ಕುಟಂಬದ ಗಾತ್ರ | ಪುರುಷರು | | ಮಹಿಳೆಯರು | | ಒಟ್ಟು | |
|---|---|---|---|---|---|---|
| | ಸಂಖ್ಯೆ | ಪ್ರತಿಶತ | ಸಂಖ್ಯೆ | ಪ್ರತಿಶತ | ಸಂಖ್ಯೆ | ಪ್ರತಿಶತ |
| 0 | 3 | 5 | 2 | 3.33 | 0 | 0 |
| 1 to 2 | 8 | 13.33 | 33 | 55.00 | 2 | 3.33 |
| 3 to 4 | 35 | 58.33 | 23 | 38.33 | 14 | 23.33 |
| 5 to 6 | 11 | 18.33 | 2 | 3.33 | 18 | 30.00 |
| 7 to 8 | 2 | 3.33 | 0 | 0.00 | 15 | 25.00 |
| 9 to 10 | 1 | 1.67 | 0 | 0.00 | 11 | 18.33 |
| ಒಟ್ಟು | **60** | **100.00** | **60** | **100.00** | **60** | **100.00** |

ಮೇಲಿನ ಕೋಷ್ಟಕವು ಮಾಹಿತಿದಾರರ ಕುಟುಂಬದ ಗಾತ್ರ ಹಾಗೂ ಲಿಂಗರಚನೆಯನ್ನು ವಿವರಿಸುತ್ತದೆ. ಪ್ರತಿಶತ 5 ರಷ್ಟು ಕುಟುಂಬಗಳಲ್ಲಿ ಮಹಿಳೆಯರು ಕಂಡುಬರುವುರಲ್ಲಿ ಹಾಗೂ ಪ್ರತಿಶತ 3.33ರಷ್ಟು ಕುಟಂಬಗಳಲ್ಲಿ ಪುರುಷರು ಕಂಡುಬರುವುರಲ್ಲಿ ಸ್ತ್ರೀಯರು ಮಾತ್ರ ವಾಸವಾಗಿದ್ದಾರೆ. ಎರಡನೆಯದಾಗಿ ಪ್ರತಿಶತ 13.33ರಷ್ಟು ಕುಟುಂಬಗಳಲ್ಲಿ 1 ರಿಂದ 2 ಪುರುಷರು ಹಾಗೂ ಪ್ರತಿಶತ 55ರಷ್ಟು ಕುಟುಂಬಗಳಲ್ಲಿ 1 ರಿಂದ 2 ಸ್ತ್ರೀಯರು ವಾಸವಾಗಿದ್ದಾರೆ. ಇದರಿಂದ ಚಿಕ್ಕಕುಟುಂಬಗಳಲ್ಲಿ ಸ್ತ್ರೀಯರ ಸಂಖ್ಯೆ ಹೆಚ್ಚಿಗೆ ಇರುವುದು ಕಂಡುಬರುತ್ತದೆ. ಪ್ರತಿಶತ 58.33ರಷ್ಟು ಕುಟುಂಬಗಳಲ್ಲಿ 3 ರಿಂದ 4 ಪುರುಷರು ಹಾಗೂ ಪ್ರತಿಶತ 38ರಷ್ಟು ಕುಟುಂಬಗಳಲ್ಲಿ 3 ರಿಂದ 4 ಸ್ತ್ರೀಯರು ವಾಸವಾಗಿದ್ದಾರೆ. ಮುಂದುವರಿದು ಪ್ರತಿಶತ 18.33ರಷ್ಟು ಕುಟುಂಬಗಳಲ್ಲಿ 5 ರಿಂದ 6 ಪುರುಷರು ಹಾಗೂ ಪ್ರತಿಶತ 3.33ರಷ್ಟು ಕುಟುಂಬಗಳಲ್ಲಿ 5 ರಿಂದ 6 ಸ್ತ್ರೀಯರು ವಾಸವಾಗಿದ್ದಾರೆ. ಕೊನೆಯದಾಗಿ ಪ್ರತಿಶತ 5ರಷ್ಟು ಕುಟುಂಬಗಳಲ್ಲಿ 7 ರಿಂದ 10 ಪುರುಷರು ಮಾತ್ರ ವಾಸವಾಗಿದ್ದು ಸ್ತ್ರೀಯರು ಕಂಡುಬರುವುದಿಲ್ಲ.

### 6. ಕುಟುಂಬದ ಮುಖ್ಯಸ್ಥರ ಉದ್ಯೋಗಗಳು (Occupation of the heads of the house holds):

ಭಾರತವು ಹಳ್ಳಿಗಳಿಂದ ಕೂಡಿದ ರಾಷ್ಟ್ರವಾಗಿದೆ ಆದ್ದರಿಂದ ಸಹಜವಾಗಿ ಹೆಚ್ಚಿನ ಸಂಖ್ಯೆಯ ಜನರು ಪ್ರತಿಶತ 70ರಷ್ಟು ಒಕ್ಕಲುತನದಲ್ಲಿ ತೊಡಗಿದ್ದಾರೆ. ಇಷ್ಟು ದೊಡ್ಡ ಸಂಖ್ಯೆಯಲ್ಲಿ ಜನರು ಕೃಷಿಯಲ್ಲಿ ನಿರತರಾಗಿದ್ದರೂ, ಉಳಿದ ಪ್ರತಿಶತ 30ರಷ್ಟು ಜನರಿಗೆ ಆಹಾರ ಒದಗಿಸುವಲ್ಲಿ ಅಸಮರ್ಥರಾಗಿದ್ದಾರೆ. ಆದರೆ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಪ್ರತಿಶತ 5 ರಿಂದ 10ರಷ್ಟು ಜನರು ಒಕ್ಕಲುತನ ಕೈಕೊಂಡು ಪ್ರತಿಶತ 85ರಿಂದ 95ರಷ್ಟು ಜನರಿಗೆ ಆಹಾರವನ್ನು ಪೂರೈಸಿ ಹೆಚ್ಚಿಗೆ ಉಳಿದ ಆಹಾರಧಾನ್ಯಗಳನ್ನು ಹೊರದೇಶಗಳಿಗೆ ರಫ್ತು ಮಾಡುತ್ತಾರೆ. ಇದಕ್ಕೆ ಕೃಷಿಯಲ್ಲಿ ತಾಂತ್ರಿಕತೆ ಬಳಸಿ ಹೆಚ್ಚು ಉತ್ಪಾದನೆ ಮಾಡುತ್ತಿರುವುದೇ

ಕಾರಣವಾಗಿದೆ. ಭಾರತೀಯರು ಕೃಷಿಯಲ್ಲಿ ಹೆಚ್ಚಾಗಿ ತಾಂತ್ರಿಕತೆಯನ್ನು ಬಳಸುತ್ತಿಲ್ಲವಾದ್ದರಿಂದ ಕೃಷಿ ಉತ್ಪಾದನೆ ಕಡಿಮೆಯಿದೆ.

ಭಾರತದಲ್ಲಿ ಜಾತಿಗೂ ಉದ್ಯೋಗಕ್ಕೂ ಅನ್ಯೋನ್ಯವಾದ ಸಂಬಂಧವಿದ್ದು ಪ್ರತಿಯೊಂದು ಜಾತಿ ಹಾಗೂ ಜನಾಂಗಕ್ಕೆ ತನ್ನದೆ ಆದ ಸಾಂಪ್ರದಾಯಿಕ ಉದ್ಯೋಗವಿದೆ ಉದ್ಯೋಗದ ಆಧಾರದ ಮೇಲೆ ವ್ಯಕ್ತಿಯ ಜಾತಿ ಗುರುತಿಸುವ ಕ್ರಮವೂ ಇದೆ. ಲಂಬಾಣಿಗರು ಮೂಲತಃ ದವಸ ಧಾನ್ಯಗಳ ವ್ಯಾಪಾರಿಗಳಾಗಿದ್ದು, ದೇಶ-ವಿದೇಶಗಳಲ್ಲಿ ಸಂಚರಿಸಿ ವ್ಯಾಪಾರ ಮಾಡುತ್ತಿದ್ದರೆಂಬುದು ಇತಿಹಾಸದಿಂದ ಸ್ಪಷ್ಟವಾಗುತ್ತದೆ. ಕಾಲಾಂತರದಲ್ಲಿ ತಂತ್ರಜ್ಞಾನದ ಪರಿಣಾಮದಿಂದ ಭಾರತದಲ್ಲಿ ಆಧುನಿಕ ಸಾರಿಗೆ ಸಾಗಾಣಿಕೆಯ ಸಾಧನಗಳು ಬಂದ ಮೇಲೆ ಲಂಬಾಣಿಗರ ಸಾಂಪ್ರದಾಯಿಕ ಉದ್ಯೋಗ ನಿಂತು ಹೋಯಿತು. ಆದರೆ ಲಂಬಾಣಿಗರು ನಿರುದ್ಯೋಗಿಗಳಾಗಿ ಉಳಿಯದೆ ಬೇರೆ ಬೇರೆ ಉದ್ಯೋಗಗಳಲ್ಲಿ ತೊಡಗಿದರು. ವಿದ್ವಾಂಸರಾದ ಥರ್ಸ್ಟನ್ (Thurstan) ಹಾಗೂ ರಂಗಾಚಾರಿ[17]ರವರ ಪ್ರಕಾರ. ಮೈಸೂರು ಪ್ರದೇಶದಲ್ಲಿ ವಾಸವಾಗಿರುವ ಲಂಬಾಣಿಗರ ಉದ್ಯೋಗವು ದನಕರುಗಳ ಮೇಲೆ ಆಹಾರಧಾನ್ಯ ಹೇರಿಕೊಂಡು ಮಾರಾಟ ಮಾಡುವುದಾಗಿತ್ತು. ಶಾಶ್ವತವಾಗಿ ತಾಂಡಾಗಳಲ್ಲಿ ನೆಲೆಸಿದ ನಂತರ ಒಕ್ಕಲುತನವನ್ನು ಅವಲಂಬಿಸಬೇಕಾಯಿತು. ಇದೇ ಪ್ರಕಾರವಾಗಿ ಬಳ್ಳಾರಿ ಜಿಲ್ಲೆಯ ಲಂಬಾಣಿಗರ ಉದ್ಯೋಗ ಕುರಿತು ರೈಸ್‌ರವರು ಬರೆಯುತ್ತಾ ಲಂಬಾಣಿಗರು ಕಟ್ಟಿಗೆ ಕಡಿಯುವದು, ಕಟ್ಟಿಗೆ ಸಾಗಾಣಿಕೆ ಮತ್ತು ಕೂಲಿಕೆಲಸ ಮಾಡುವುದು ಕೆಲವರು ಒಕ್ಕಲುತನದಲ್ಲಿ ನಿರತರಾಗಿದ್ದರು ಎಂದಿದ್ದಾರೆ. ಆದ್ದರಿಂದ ಸಾಮಾನ್ಯವಾಗಿ ಕರ್ನಾಟಕದ ಹೆಚ್ಚಿನ ಸಂಖ್ಯೆಯ ಲಂಬಾಣಿಗರು ಒಕ್ಕಲುತನ ಹಾಗೂ ಕೃಷಿಕಾರ್ಮಿಕರಾಗಿದ್ದಾರೆ. ಮುಂದಿನ ಕೋಷ್ಟಕ 10 ರಲ್ಲಿ ನರಸಲಗಿ ತಾಂಡಾದ ಮಾಹಿತಿದಾರರ ಉದ್ಯೋಗದ ಸವಿಸ್ತಾರವಾದ ಮಾಹಿತಿಯನ್ನು ವಿವರಿಸಲಾಗಿದೆ.

**ಕೋಷ್ಟಕ 10, ಮಾಹಿತಿದಾರರ ಉದ್ಯೋಗ ಆಧಾರಿತ ಸಂಖ್ಯೆ ಮತ್ತು ಶೇಕಡವಾರು ಹಂಚಿಕೆ**

**(Number & percentage distribution of respondents by occupation)**

| ಉದ್ಯೋಗ | ಸಂಖ್ಯೆ | ಪ್ರತಿಶತ |
|---|---|---|
| ಕಾರ್ಮಿಕ | 31 | 51.67 |
| ವ್ಯವಸಾಯ | 23 | 38.33 |
| ಇತರೆ | 6 | 10.00 |
| ಒಟ್ಟು | **60** | **100.00** |

ಕೋಷ್ಟಕ 10 ರಿಂದ ತಿಳಿದುಬರುವುದೇನೆಂದರೆ, ಹೆಚ್ಚಿನ ಸಂಖ್ಯೆಯಲ್ಲಿ ಮಾಹಿತಿದಾರರು ಪ್ರತಿಶತ 51.67ರಷ್ಟು ಕೂಲಿಕಾರರಾಗಿದ್ದಾರೆ. ತದನಂತರ ಪ್ರತಿಶತ 38.33ರಷ್ಟು ಒಕ್ಕಲುತನ, ಹಾಗೂ ಪ್ರತಿಶತ 10ರಷ್ಟು ಮಾಹಿತಿದಾರರು ವ್ಯಾಪಾರ, ಭಟ್ಟಿಸಾರಾಯಿ ಇಳಿಸುವುದು ಹಾಗೂ ಜೀತದಾಳುಗಳಾಗಿದ್ದಾರೆ.

---

17. Thurstan E. and Rangachari. Castes and Tribes of Southern India, Vol- IV, Delhi (1909), P, 214

ಮೇಲಿನ ಅಂಕಿ-ಅಂಶಗಳಿಂದ ನಾವು ಕಂಡುಕೊಳ್ಳುವುದೇನೆಂದರೆ ಲಂಬಾಣಿಗರು ಸಾಂಪ್ರದಾಯಿಕ ಆಹಾರಧಾನ್ಯ ಸಾಗಾಣಿಕೆಯ ಉದ್ಯೋಗ ಬದಲಾವಣೆ ಮಾಡಿಕೊಂಡಿದ್ದಾರೆ. ಕೂಲಿ ಕೆಲಸಕ್ಕೆ ಯಾವುದೇ ಕೌಶಲ್ಯ ತರಬೇತಿ, ಶಿಕ್ಷಣ ಅಗತ್ಯವಾಗಿಲ್ಲವಾದ್ದರಿಂದ ಹಾಗೂ ಒಕ್ಕಲುತನವು ಜಾತಿ ಮುಕ್ತ ಉದ್ಯೋಗವಾಗಿರುವುದರಿಂದ ಹೆಚ್ಚಾಗಿ ಕೃಷಿ ಸಂಬಂಧಿ ಉದ್ಯೋಗಗಳನ್ನು ಅವಲಂಬಿಸಿದ್ದಾರೆ.

**7. ಮಾಹಿತಿದಾರರ ಕುಟುಂಬದ ವಾರ್ಷಿಕ ಆದಾಯ (Annual Household Income of the Respondents) :**

ಒಂದು ಕುಟುಂಬದ ನಿರ್ದಿಷ್ಟ ಆದಾಯ ತಿಳಿದುಕೊಳ್ಳುವುದು ತುಂಬಾ ಕಷ್ಟದಾಯಕವಾಗಿದೆ. ಏಕೆಂದರೆ ಇದು ಬಹಳ ಸೂಕ್ಷ್ಮವಾದ ವಿಷಯವಾಗಿದೆ ಆದರೂ ಮಾಹಿತಿದಾರರು ನೀಡಿದ ವರಮಾನದ ಮಾಹಿತಿಯನ್ನು ಇಲ್ಲಿ ಒದಗಿಸಲಾಗಿದೆ. ವಾರ್ಷಿಕ ಆದಾಯವು ಕುಟುಂಬದ ಎಲ್ಲಾ ಮೂಲಗಳಿಂದ ಬರುವ ಅಥವಾ ಎಲ್ಲಾ ದುಡಿಯುವ ಸದಸ್ಯರ ಒಟ್ಟು ಆದಾಯವಾಗಿದ್ದು, ಇದು ವೈಯಕ್ತಿಕ ಆದಾಯಕ್ಕಿಂತ ಭಿನ್ನ ಸ್ವರೂಪದ್ದಾಗಿದೆ.

**ಕೋಷ್ಠಕ 11, ಮಾಹಿತಿದಾರರ ಕುಟುಂಬದ ವಾರ್ಷಿಕ ಆದಾಯ ಆಧಾರಿತ ಸಂಖ್ಯೆ ಮತ್ತು ಶೇಕಡವಾರು ಹಂಚಿಕೆ (Number & percentage distribution of respondents by annual household income)**

| ಕುಟುಂಬದ ವಾರ್ಷಿಕ ಆದಾಯ | ಸಂಖ್ಯೆ | ಪ್ರತಿಶತ |
|---|---|---|
| Rs.10,000-20,000 | 9 | 15.00 |
| Rs. 20,001-30,000 | 7 | 11.67 |
| Rs. 30,001-40,000 | 11 | 18.33 |
| Rs. 40,001+ | 33 | 55.00 |
| **ಒಟ್ಟು** | **60** | **100.00** |

ಕೋಷ್ಠಕ 11 ಮಾಹಿತಿದಾರರ ಕುಟುಂಬದ ವಾರ್ಷಿಕ ಆದಾಯ ಕುರಿತು ಸ್ಪಷ್ಟವಾದ ಸಮಗ್ರ ಮಾಹಿತಿ ಒದಗಿಸುತ್ತದೆ. ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಂಡ ಒಟ್ಟು ನಮೂನೆಯ ಪ್ರತಿಶತ 15ರಷ್ಟು ಮಾಹಿತಿದಾರರು 10,000 ರಿಂದ 20,000 ರೂಪಾಯಿ ಪ್ರತಿಶತ 11.67ರಷ್ಟು 20,000 ರಿಂದ 30,000 ರೂಪಾಯಿ ಪ್ರತಿಶತ 18.33ರಷ್ಟು ಮಾಹಿತಿದಾರರು 30,000-40,000 ರೂಪಾಯಿ ಹಾಗೂ ಪ್ರತಿಶತ 55ರಷ್ಟು ಮಾಹಿತಿದಾರರು 40,000 ರೂಪಾಯಿಗಿಂತ ಹೆಚ್ಚು ಆದಾಯವನ್ನು ಹೊಂದಿದ್ದು ಕಂಡು ಬರುತ್ತದೆ. ಈ ಮೇಲಿನ ಅಂಕಿ ಅಂಶಗಳಿಂದ ತಿಳಿದುಬರುವುದೇನೆಂದರೆ ಪ್ರತಿಶತ 45ರಷ್ಟು ಕಡಿಮೆ ಆದಾಯವನ್ನು ಹೊಂದಿ ಬಡವರಾಗಿದ್ದಾರೆ. ಹಾಗೂ ಪ್ರತಿಶತ 55ರಷ್ಟು ಲಂಬಾಣಿಗರು ಮಧ್ಯಮ ಆದಾಯವನ್ನು ಹೊಂದಿದ್ದು ಪಡೆಯುವ ಆದಾಯದಿಂದ ಕುಟುಂಬದ ಅವಲಂಬಿತ ಸದಸ್ಯರ ಬೇಕು ಬೇಡಿಕೆಗಳನ್ನು ಈಡೇರಿಸಲು ಸಾಧ್ಯವಾಗುವುದಿಲ್ಲ. ಹಾಗೂ ಪ್ರಸ್ತುತ ಪಡೆಯುತ್ತಿರುವ ಆದಾಯ ತಪ್ಪದೆ ನಿರಂತರವಾಗಿ ಬರುವ ಆದಾಯವಲ್ಲ. ಬರಗಾಲ, ಸಂಭವಿಸಿದಾಗ ಆದಾಯದಲ್ಲಿ ಕುಗ್ಗುವಿಕೆ ಕಂಡುಬರುವುದು.

## 8. ಮಾಹಿತಿದಾರರ ಶೈಕ್ಷಣಿಕ ಸ್ಥಿತಿಗತಿ : (Education of the Respondents)

ಆಧುನಿಕ ಕಾಲದಲ್ಲಿ ಶಿಕ್ಷಣವು ಪ್ರತಿಯೊಬ್ಬರಿಗೆ ಅತ್ಯವಶ್ಯಕವಾಗಿದೆ. ಸಮಾಜದಲ್ಲಿ ವ್ಯಕ್ತಿಗೆ ಅವನ ನಾಗರಿಕತ್ವದ ಅರಿವು ಹಕ್ಕುಗಳು, ಕರ್ತವ್ಯಗಳು ಹಾಗೂ ಆರ್ಥಿಕತೆಯ ವಿವಿಧ ಮಗ್ಗಲುಗಳಾದ ವಲಸೆ, ಉದ್ಯೋಗ ಮುಂತಾದವುಗಳ ಮನವರಿಕೆಯಾಗಬೇಕಾದರೆ ಶಿಕ್ಷಣದಿಂದ ಮಾತ್ರ ಸಾಧ್ಯ ಜಗತ್ತು ವಿಜ್ಞಾನ ಹಾಗೂ ತಂತ್ರಜ್ಞಾನದ ಕಡೆಗೆ ಮುನ್ನಡೆಯುತ್ತಿದೆ. ಇಂತಹ ಸಮಾಜಕ್ಕೆ ಹೊಂದಿಕೊಂಡು ನಡೆಯಲು ಹಾಗೂ ಅಜ್ಞಾನ, ಮೂಢನಂಬಿಕೆಗಳು ಸಾಮಾಜಿಕ ಅನಿಷ್ಠಪದ್ಧತಿಗಳು ಹೋಗಬೇಕಾದರೆ ಪ್ರತಿಯೊಬ್ಬರಿಗೂ ಶಿಕ್ಷಣ ಅವಶ್ಯಕವಾಗಿದೆ. ಒಂದು ರಾಷ್ಟ್ರದ ಪ್ರಗತಿಯು ಶಿಕ್ಷಣದಿಂದ ಮಾತ್ರ ಸಾಧ್ಯವಿದೆ. ಆದ್ದರಿಂದ ಪ್ರತಿಯೊಂದು ರಾಷ್ಟ್ರ ತನ್ನ ನಾಗರಿಕರನ್ನು ಸಾಕ್ಷರಸ್ಥರನ್ನಾಗಿ ಮಾಡಲು ಪ್ರಯತ್ನಿಸುತ್ತದೆ. ಶಿಕ್ಷಣವು ಮುಂದೆ ಬರಲಿರುವ ಸಂತತಿಗೆ ಸಾಮಾಜಿಕ ಮೌಲ್ಯಗಳಿಗೆ ಹೊಂದಿಕೊಂಡು ನಡೆಯುವ ಹಾಗೆ ಸಹಾಯವಾಗುತ್ತದೆ. ಇಂದು ಜಗತ್ತು ಮಾಹಿತಿ ತಂತ್ರಜ್ಞಾನ ಕುರಿತು ಮಾತನಾಡುತ್ತಿದೆ. ಆದರೆ ಲಂಬಾಣಿಗಳಂತಹ ಸಾಂಸ್ಕೃತಿಕ ಕುಲಸಮೂಹದ ಜನರಿಗೆ ಸಾಮಾನ್ಯ ಅಕ್ಷರಜ್ಞಾನ ಪಡೆಯಲು ಸಾಧ್ಯವಾಗುತ್ತಿಲ್ಲ. ಮುಖ್ಯ ಸಮಾಜದಿಂದ ದೂರ ನೆಲೆಸಿರುವುದೇ ಅವರ ಅನಕ್ಷರತೆಗೆ ಕಾರಣವಾಗಿದೆ. 1997ರಲ್ಲಿ ಅಖಿಲ ಕರ್ನಾಟಕ ಬಂಜಾರಾ ವಿದ್ಯಾರ್ಥಿ ವೇದಿಕೆ ಕೈಕೊಂಡ ಸಮೀಕ್ಷೆಯ ಪ್ರಕಾರ ಕರ್ನಾಟಕದಲ್ಲಿ ಅನಕ್ಷರಸ್ಥ ಲಂಬಾಣಿಗರ ಸಂಖ್ಯೆ ಪ್ರತಿಶತ 83.93ರಷ್ಟು ಮುಂದಿನ ಕೋಷ್ಟಕದ ಸಹಾಯದಿಂದ ನರಸಲಗಿ ತಾಂಡಾದ ಮಾಹಿತಿದಾರರ ಶೈಕ್ಷಣಿಕ ಸ್ಥಿತಿಗತಿಗಳನ್ನು ತಿಳಿಯಬಹುದು.

**ಕೋಷ್ಟಕ 12, ಮಾಹಿತಿದಾರರ ಶೈಕ್ಷಣಿಕ ಸ್ಥಿತಿಗತಿ ಆಧಾರಿತ ಸಂಖ್ಯೆ ಮತ್ತು ಶೇಕಡವಾರು ಹಂಚಿಕೆ**

**(Number & percentage distribution of respondents by education)**

| ಶಿಕ್ಷಣ | ಸಂಖ್ಯೆ | ಪ್ರತಿಶತ |
|---|---|---|
| ಅನಕ್ಷರಸ್ಥರು | 41 | 68.33 |
| 5ನೇ ತರಗತಿ | 18 | 30.00 |
| ಎಸ್.ಎಸ್.ಎಲ್.ಸಿ. | 1 | 1.67 |
| **ಒಟ್ಟು** | **60** | **100.00** |

ಮೇಲಿನ ಕೋಷ್ಟಕದ ಪ್ರಕಾರ ಪ್ರತಿಶತ 68.33ರಷ್ಟು ಮಾಹಿತಿದಾರರು ಓದುವ, ಬರೆಯುವ ಜ್ಞಾನ ಇಲ್ಲದವರಾಗಿದ್ದಾರೆ. ಅಂದರೆ ನರಸಲಗಿ ತಾಂಡಾವನ್ನು ಕರ್ನಾಟಕದ ರಾಜ್ಯದ ಲಂಬಾಣಿ ಜನರ ಶೈಕ್ಷಣಿಕತೆಯೊಂದಿಗೆ ಹೋಲಿಸಿದ್ದು ಅವರು ಸ್ವಲ್ಪ ಮಟ್ಟಿಗೆ ಈ ನಿಟ್ಟಿನಲ್ಲಿ ಮುಂದುವರೆದಿದ್ದಾರೆ ಎನ್ನಬಹುದಾದರೂ ಅನಕ್ಷರತೆಯ ಪ್ರಮಾಣ ಹೆಚ್ಚು ಎಂದೇ ಹೇಳಬೇಕು. ಅಂದರೆ ಅನಕ್ಷರಸ್ಥರಾಗಿದ್ದಾರೆ. ನಂತರ ಪ್ರತಿಶತ 30ರಷ್ಟು ಮಾಹಿತಿದಾರರು ಐದನೆಯ ತರಗತಿವರೆಗಿನ ಪ್ರಾಥಮಿಕ ಶಿಕ್ಷಣ ಹಾಗೂ ಕೇವಲ 1.67ರಷ್ಟು ಮಾಹಿತಿದಾರರು ಮಾಧ್ಯಮಿಕ ಶಿಕ್ಷಣ ಪಡೆದಿರುವುದನ್ನು ಕಾಣುತ್ತವೆ.

**ಶೈಕ್ಷಣಿಕ ಅರಿವು:**

ಶಿಕ್ಷಣದ ಮಹತ್ವದ ಬಗ್ಗೆ ಲಂಬಾಣಿಗರಿಗೆ ಅರಿವು ಇದೆ. ಶಿಕ್ಷಣದಿಂದ ಲಂಬಾಣಿಗರು ಸುಧಾರಿಸಲು ಸಾಧ್ಯವೇ? ಎಂದು ಪ್ರಶ್ನೆಕೇಳಲಾಗಿತ್ತು. ಅದಕ್ಕೆ ಪ್ರತಿಯಾಗಿ ಪ್ರತಿಶತ 96.67ರಷ್ಟು ಮಾಹಿತಿದಾರರು ಹೌದು ಎಂದು ಪ್ರತಿಕ್ರಿಯೆ ನೀಡಿದ್ದು ಇದರಿಂದ ಲಂಬಾಣಿಗರಿಗೆ ಶಿಕ್ಷಣದ ಬಗ್ಗೆ ಜಾಗೃತಿ ಇರುವುದು ಕಂಡುಬರುತ್ತದೆ. ಪ್ರತಿಶತ 55ರಷ್ಟು ಮಾಹಿತಿದಾರರು ತಮ್ಮ ಮಕ್ಕಳಿಗೆ ಕೆಳಗಿನ ಕಾರಣಗಳಿಗಾಗಿ ಶಿಕ್ಷಣಕೊಡಿಸಲು ಆಶೆ-ಆಕಾಂಕ್ಷೆ ಹೊಂದಿದ್ದಾರೆ. ಉನ್ನತ ಉದ್ಯೋಗ ಪಡೆಯಲು ಪ್ರತಿಶತ 54.55, ಹೆಚ್ಚು ಹಣಗಳಿಸಲು 33.33 ಸಾಮಾಜಿಕ ಜೀವನ ಸುಧಾರಿಸಲು ಪ್ರತಿಶತ 12.12 ಶಿಕ್ಷಣದಿಂದ ಉನ್ನತ ಉದ್ಯೋಗ ಪಡೆದು ಆರ್ಥಿಕತೆ ಹಾಗೂ ಸಾಮಾಜಿಕ ಜೀವನ ಸುಧಾರಿಸಲು ಲಂಬಾಣಿಗರು ತಮ್ಮ ಮಕ್ಕಳಿಗೆ ಶಿಕ್ಷಣ ಕೊಡಿಸುತ್ತಿದ್ದಾರೆ. ಪ್ರತಿಶತ 45ರಷ್ಟು ಲಂಬಾಣಿಗರು ತಮ್ಮ ಮಕ್ಕಳಿಗೆ ಈ ಕೆಳಗಿನ ಕಾರಣಗಳಿಂದ ಶಿಕ್ಷಣ ಕೊಡಿಸಲು ಸಾಧ್ಯವಾಗುತ್ತಿಲ್ಲ. ಇವರಲ್ಲಿ ಬಡತನದಿಂದ ಪ್ರತಿಶತ 66.67ರಷ್ಟು, ವಲಸೆ ಹೋಗುವುದರಿಂದ ಪ್ರತಿಶತ 22.22, ಅಂದರೆ ಹೊಲ-ಮನೆ ಕೆಲಸಗಳಿಗಾಗಿ ಕೂಲಿಕಾರರನ್ನೂ ನಿಯಮಿಸಿಕೊಳ್ಳಲು ಅಶಕ್ತರಾದ್ದರಿಂದ ತಮ್ಮ ಮಕ್ಕಳನ್ನು ಶಾಲೆ ಬಿಡಿಸಿ. ಹೊಲ-ಮನೆ ಕೆಲಸಗಳಿಗೆ ತೊಡಗಿಸುತ್ತಾರೆ. ಪ್ರತಿಶತ ಹಾಗೂ ಒಕ್ಕಲುತನದಲ್ಲಿ ಪ್ರತಿಶತ 7.41 ಬಡತನ ಹಾಗೂ ವಲಸೆಯಿಂದ ಲಂಬಾಣಿಗರಿಗೆ ತಮ್ಮ ಮಕ್ಕಳಿಗೆ ಶಿಕ್ಷಣಕೊಡಿಸಲು ಸಾಧ್ಯವಾಗುತ್ತಿಲ್ಲ. ಪ್ರತಿಶತ 63.33ರಷ್ಟು ಲಂಬಾಣಿಗರು ಶಿಕ್ಷಣ ಕೊಡಿಸಲು ಸಾಧ್ಯವಾಗದೆ ತಮ್ಮ ಮಕ್ಕಳು ಶಿಕ್ಷಣ ಪಡೆಯುತ್ತಿರುವ ಹಂತದಲ್ಲಿಯೇ ಅರ್ಧಕ್ಕೆ ನಿಲ್ಲಿಸುತ್ತಿದ್ದಾರೆ.

**ಕೋಷ್ಟಕ 13, ಮಾಹಿತಿದಾರರು ತಮ್ಮ ಮಕ್ಕಳ ಶಿಕ್ಷಣ ಅರ್ಧಕ್ಕೆ ನಿಲ್ಲಿಸಲು ಕಾರಣವಾದ ಅಂಶಗಳನ್ನು ಆಧಾರಿತ ಸಂಖ್ಯೆ ಮತ್ತು ಶೇಕಡವಾರು ಹಂಚಿಕೆ (Number and percentage distribution of respondents by reason for discontinuation of education to their children)**

| ಕಾರಣ | ಸಂಖ್ಯೆ | ಪ್ರತಿಶತ |
|---|---|---|
| ಬಡತನ | 31 | 81.58 |
| ಮನೆಯಲ್ಲಿ ಹಾಗೂ ಗದ್ದೆಗಳಲ್ಲಿ ಕೆಲಸಮಾಡುವುದು | 2 | 5.26 |
| ವಲಸೆ ಹೋಗುವುದರಿಂದ | 2 | 5.26 |
| ಸರ್ಕಾರಿ ಉದ್ಯೋಗ ದೊರೆತಿದ್ದರಿಂದ | 3 | 7.9 |
| ಒಟ್ಟು | **38** | **100.00** |

ಮೇಲಿನ ಕೋಷ್ಟಕದ ಪ್ರಕಾರ ಪ್ರತಿಶತ 81.58ರಷ್ಟು ಬಡತನದಿಂದ, ಪ್ರತಿಶತ 5.26ರಷ್ಟು ಮನೆಯಲ್ಲಿ ಹಾಗೂ ಗದ್ದೆಗಳಲ್ಲಿ ಕೆಲಸ ಮಾಡುವುದರಿಂದ, ಪ್ರತಿಶತ 5.26ರಷ್ಟು ವಲಸೆ ಹೋಗುವುದರಿಂದ ಹಾಗೂ ಪ್ರತಿಶತ 7.9ರಷ್ಟು ಮಾಹಿತಿದಾರರ ಮಕ್ಕಳಿಗೆ ಉದ್ಯೋಗ ದೊರೆತಿರುವುದರಿಂದ ತಮ್ಮ ಮಕ್ಕಳ ಶಿಕ್ಷಣವನ್ನು ಮುಂದುವರಿಸಲು ಸಾಧ್ಯವಾಗಿಲ್ಲ. ಶಿಕ್ಷಣ ಮುಂದುವರಿಸದೆ ಇರುವುದಕ್ಕೆ ಬಡತನವೇ ಮುಖ್ಯ ಕಾರಣವಾಗಿದೆ. ಎಂಬ ವಿಷಯ ಇಲ್ಲಿ ಸುಸ್ಪಷ್ಟ.

**ಶೈಕ್ಷಣಿಕ ಸೌಲಭ್ಯಗಳು :**

ನರಸಲಗಿ ತಾಂಡಾದಲ್ಲಿ ಒಂದು ಪ್ರಾಥಮಿಕ ಶಾಲೆ ಒಂದನೆಯ ತರಗತಿಯಿಂದ ನಾಲ್ಕನೆಯ ತರಗತಿಯವರೆಗೆ ಹಾಗೂ ಒಂದು ಪೂರ್ವ ಪ್ರಾಥಮಿಕ ಶಾಲೆ ಇದ್ದು, ಇವುಗಳಲ್ಲಿ ಕೇವಲ ಲಂಬಾಣಿಗರ ಮಕ್ಕಳು ಮಾತ್ರ ಪ್ರವೇಶ ಪಡೆದಿದ್ದಾರೆ. ನಾಲ್ಕನೆಯ ತರಗತಿಯ ನಂತರದ ಶಿಕ್ಷಣ ಪಡೆಯಲು ವಿದ್ಯಾರ್ಥಿಗಳು 2 ಕಿ.ಮೀ. ದೂರದಲ್ಲಿರುವ ನರಸಲಗಿ ಗ್ರಾಮದ ಹಿರಿಯ ಪ್ರಾಥಮಿಕ ಶಾಲೆಗೆ ಹೋಗುತ್ತಾರೆ. ಲಂಬಾಣಿಗರ ಅನಕ್ಷರತೆಗೆ ಬಡತನ ಕಾರಣವಾಗುವುದರ ಜೊತೆಗೆ ಹಿರಿಯ ಪ್ರಾಥಮಿಕ ಶಾಲೆ ತಾಂಡಾದಲ್ಲಿ ಇಲ್ಲದಿರುವುದು, ಪೋಷಕರ ನಿರ್ಲಕ್ಷ್ಯ, ಹೆಣ್ಣು ಮಕ್ಕಳ ಶಿಕ್ಷಣ ನಿರ್ಲಕ್ಷ್ಯ ಮುಂತಾದವುಗಳು ಕಾರಣವಾಗಿವೆ.

ಪ್ರಾಥಮಿಕ ಹಂತದಲ್ಲಿ ಲಂಬಾಣೇತರರು ಶಿಕ್ಷಕರಿರುವುದರಿಂದ, ಭಾಷಾ ಸಮಸ್ಯೆಯಿಂದ, ಹೆಸರು ನೋಂದಾಯಿಸಿದರೂ ಮಕ್ಕಳು ಶಾಲೆಗೆ ಹೋಗುವುದಿಲ್ಲ. ಈ ವಿಷಯವನ್ನು ಕುರಿತು ಶಿಕ್ಷರರನ್ನು ಕೇಳಿದಾಗ ಪಾಲಕರು ತಮ್ಮ ಮಕ್ಕಳನ್ನು ದಿನಂಪ್ರತಿ ಶಾಲೆಗೆ ಕಳುಹಿಸುವುದಿಲ್ಲ ಎಂದು ಪ್ರತಿಕ್ರಿಯೆ ನೀಡಿದ್ದಾರೆ. ಇದಕ್ಕೆ ಪ್ರತಿಯಾಗಿ ಪಾಲಕರು ಶಿಕ್ಷಕರು ಪ್ರಾಮಾಣಿಕವಾಗಿ ಬೋಧಿಸುವುದಿಲ್ಲ ಸರಿಯಾಗಿ ಶಾಲೆಗೆ ಬರುವುದಿಲ್ಲ ಎಂದು ಪ್ರತಿಕ್ರಿಯೆ ನೀಡಿದ್ದಾರೆ. ಕೆಲವು ಲಂಬಾಣಿ ವಿದ್ಯಾರ್ಥಿಗಳು ಕಷ್ಟಪಟ್ಟು ಪ್ರಾಥಮಿಕ ಶಿಕ್ಷಣ ಮುಗಿಸಿ ಬಸವನ ಬಾಗೇವಾಡಿಯಲ್ಲಿ ಸಮಾಜ ಕಲ್ಯಾಣ ಇಲಾಖೆಯು ಹಿಂದುಳಿದ ಜಾತಿಗಳ ಮಕ್ಕಳಿಗಾಗಿ ನಡೆಸುತ್ತಿರುವ ವಸತಿಗೃಹದಲ್ಲಿ ಪ್ರವೇಶ ಪಡೆದು ಶಿಕ್ಷಣ ಪಡೆಯುತ್ತಿದ್ದಾರೆ. ವಸತಿಗೃಹದಲ್ಲಿ ಉಚಿತ ಊಟ, ಪಠ್ಯಪುಸ್ತಕ, ಸಮವಸ್ತ್ರ, ಲೇಖನಸಾಮಗ್ರಿಗಳು, ಹಾಗೂ ಇನ್ನಿತರ ಸೌಲಭ್ಯಗಳನ್ನು ನೀಡುತ್ತಾರೆ.

ಲಂಬಾಣಿಗರು ಶಿಕ್ಷಣದ ಬಗ್ಗೆ ನಿರ್ಲಕ್ಷಧೋರಣೆ ತಾಳುತ್ತಿದ್ದಾರೆ. ಉನ್ನತ ಶಿಕ್ಷಣದ ಲಾಭಗಳು, ಸರ್ಕಾರ ನೀಡುವ ಮೀಸಲಾತಿ ಶೈಕ್ಷಣಿಕ ಸೌಲಭ್ಯಗಳ ಪ್ರಯೋಜನೆ ಹೆಚ್ಚಾಗಿ ಪಡೆಯುತ್ತಿಲ್ಲ. ಇತ್ತೀಚೆಗೆ ಕೆಲವರು ತಮ್ಮ ಹೆಣ್ಣು ಮಕ್ಕಳಿಗೆ ಪ್ರಾಥಮಿಕ ಶಿಕ್ಷಣ ಕೊಡಿಸಲು ಮುಂದಾಗುತ್ತಿದ್ದಾರೆ. ಮಾಧ್ಯಮಿಕ ಹಂತದ ಶಿಕ್ಷಣದಲ್ಲಿ ಲಂಬಾಣಿ ಬಾಲಕಿಯರು ಅಷ್ಟಾಗಿ ಕಂಡುಬರುವುದಿಲ್ಲ ಇದಕ್ಕೆ ಪಾಲಕರ ನಿರ್ಲಕ್ಷ್ಯ, ಬಡತನ, ಬಾಲ್ಯವಿವಾಹಗಳು ಹೆಣ್ಣುಮಕ್ಕಳನ್ನು ಕುಟುಂಬದ ಕೆಲಸ ಕಾರ್ಯಗಳಲ್ಲಿ ತೊಡಗಿಸಿಕೊಳ್ಳುವಿಕೆ, ವಲಸೆ, ಮುಂತಾದ ಅಂಶಗಳು ಕಾರಣವಾಗಿವೆ.

**ಮೀಸಲಾತಿ (Reservation)**

ಶತಮಾನಗಳಿಂದ ಶೋಷಣೆಗೆ ಒಳಗಾಗಿ ಆರ್ಥಿಕವಾಗಿ ಹಾಗೂ ಸಾಮಾಜಿಕವಾಗಿ ಹಿಂದುಳಿದ ಕೆಲವು ಜಾತಿ ಹಾಗೂ ಪಂಗಡಗಳಿಗೆ ಸರ್ಕಾರ ಪರಿಶಿಷ್ಟ ಜಾತಿ ಹಾಗೂ ಜನಾಂಗದ ಪಟ್ಟಿಗೆ ಸೇರಿಸಿ ಶಿಕ್ಷಣ, ಉದ್ಯೋಗ, ರಾಜಕೀಯ ಮುಂತಾದ ಕ್ಷೇತ್ರಗಳಲ್ಲಿ ಮೀಸಲಾತಿಯ ಸೌಲಭ್ಯಗಳನ್ನು ಕಲ್ಪಿಸಿದೆ. ಇದು ಅವರ ಸಾಮಾಜಿಕ-ಆರ್ಥಿಕ ಸ್ಥಾನಮಾನಗಳನ್ನು ಸುಧಾರಿಸಿಕೊಳ್ಳಲು ಸಹಾಯವಾಗಿದೆ. ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಗಳ ಅಧಿಸೂಚನೆ (ಪರಿಸ್ಕೃತ) ಕಾಯ್ದೆ 1976ರ ಪ್ರಕಾರ ಭಾರತದ ವಿವಿಧ ರಾಜ್ಯಗಳಲ್ಲಿ ಲಂಬಾಣಿಗರನ್ನು ಪರಿಶಿಷ್ಟ ಪಂಗಡ ಹಾಗೂ ಪರಿಶಿಷ್ಟ ಜಾತಿಯ ಪಟ್ಟಿಗೆ ಸೇರಿಸಿದ್ದು ಕರ್ನಾಟಕದಲ್ಲಿ ಲಂಬಾಣಿಗರಿಗೆ ಪರಿಶಿಷ್ಟ ಜಾತಿಯ ಪಟ್ಟಿಗೆ ಸೇರಿಸಿ ಮೀಸಲಾತಿಯ ಸೌಲಭ್ಯ ಕಲ್ಪಿಸಲಾಗಿದೆ. ಆದರೆ ಹೆಚ್ಚಿನ

ಸಂಖ್ಯೆಯಲ್ಲಿ ಅನಕ್ಷರಸ್ಥರಾದುದರಿಂದ ಮುಖ್ಯವಾಹಿನಿಯಿಂದ ದೂರವಿರುವುದರಿಂದ, ಮೀಸಲಾತಿಯ ಬಗ್ಗೆ ಸರಿಯಾದ ಅರಿವು ಇಲ್ಲದಿರುವುದರಿಂದ ಹಾಗೂ ವಲಸೆ ಹೋಗುವುದರಿಂದ ಸೌಲಭ್ಯಗಳುನ್ನು ಹೆಚ್ಚಾಗಿ ಪಡೆಯುತ್ತಿಲ್ಲ. ನಾವು ಕೈಕೊಂಡ ಅಧ್ಯಯನದಲ್ಲಿ ನರಸಲಗಿ ತಾಂಡಾದ ಪ್ರತಿಶತ 80ರಷ್ಟು ಲಂಬಾಣಿಗರಿಗೆ ಮೀಸಲಾತಿಯ ಸೌಲಭ್ಯಗಳ ಬಗ್ಗೆ ಅರಿವು ಇಲ್ಲದಿರುವುದರಿಂದ ಮಾಹಿತಿದಾರರು ಮೀಸಲಾತಿಯ ಸೌಲಭ್ಯ ಪಡೆದಿಲ್ಲ. ಪ್ರತಿಶತ 20ರಷ್ಟು ಮಾಹಿತಿದಾರರು ಮಾತ್ರ ಮೀಸಲಾತಿಯ ಸೌಲಭ್ಯ ಪಡೆದಿದ್ದಾರೆ. ಹೆಚ್ಚಿನ ಮಾಹಿತಿಯನ್ನು ಈ ಮುಂದಿನ ಕೋಷ್ಟಕದಿಂದ ತಿಳಿಬಹುದು.

**ಕೋಷ್ಟಕ 14, ಮಾಹಿತಿದಾರರ ಕುಟುಂಬಗಳು ಮೀಸಲಾತಿ ಸೌಲಭ್ಯ ಪಡೆಯುತ್ತಿರುವ ಕ್ಷೇತ್ರ ಆಧಾರಿತ ಸಂಖ್ಯೆ ಮತ್ತು ಶೇಕಡವಾರು ಹಂಚಿಕೆ. (Number and percentage distribution of respondents getting reservation facility by area)**

| ಕ್ಷೇತ್ರ | ಸಂಖ್ಯೆ | ಪ್ರತಿಶತ |
|---|---|---|
| ಉದ್ಯೋಗ | 4 | 33.33 |
| ಭಾವಿ / ಕೊಳವೆಭಾವಿ ಸೌಲಭ್ಯ | 2 | 16.67 |
| ಮನೆ | 5 | 41.57 |
| ಭೂಮಿ | 1 | 8.34 |
| ಒಟ್ಟು | **12** | **100.00** |

ಮೇಲಿನ ಕೋಷ್ಟಕದ ಪ್ರಕಾರ ಮೀಸಲಾತಿ ಸೌಕರ್ಯ ಪಡೆದವರಲ್ಲಿ ಸೌಕರ್ಯಪಡೆದ ಕ್ಷೇತ್ರಗಳೆಂದರೆ ಉದ್ಯೋಗದಲ್ಲಿ ಪ್ರತಿಶತ 33.33, ಭಾವಿ ಮತ್ತು ಕೊಳವೆಭಾವಿಯ ಸೌಲಭ್ಯ ಪ್ರತಿಶತ 16.67, ಮನೆಯ ಸೌಲಭ್ಯ ಪ್ರತಿಶತ 41.57 ಹಾಗೂ ಸರ್ಕಾರಿ ಭೂಮಿಯನ್ನು ಪ್ರತಿಶತ 8.33ರಷ್ಟು ಮಾಹಿತಿದಾರರು ಪಡೆದಿದ್ದಾರೆ. ಲಂಬಾಣಿಗರು ಉದ್ಯೋಗ ಹಾಗೂ ಮನೆಯ ಸೌಕರ್ಯಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಮೀಸಲಾತಿಯ ಲಾಭ ಪಡೆದಿದ್ದಾರೆ. ಪ್ರತಿಶತ 80ರಷ್ಟು ಮಾಹಿತಿದಾರರು ಮೀಸಲಾತಿಯ ಸೌಲಭ್ಯ ಪಡೆಯದಿರಲು ಕೆಳಗಿನ ಅಂಶಗಳು ಕಾರಣವಾಗಿವೆ.

**ಕೋಷ್ಟಕ 15, ಮಾಹಿತಿದಾರರು ಮೀಸಲಾತಿ ಸೌಲಭ್ಯ ಪಡೆಯದಿರುವುದಕ್ಕೆ ಕಾರಣವಾದ ಅಂಶಗಳ ಆಧಾರಿತ ಸಂಖ್ಯೆ ಮತ್ತು ಶೇಕಡವಾರು ಹಂಚಿಕೆ. (Number and percentage distribution of respondents not getting reservation facility by reason)**

| ಕಾರಣಗಳು | ಸಂಖ್ಯೆ | ಪ್ರತಿಶತ |
|---|---|---|
| ಅರಿವು ಇಲ್ಲದ್ದರಿಂದ | 29 | 60.42 |
| ವಲಸೆಹೋಗುವುದರಿಂದ | 15 | 31.15 |
| ಇತರೆ | 4 | 8.34 |
| ಒಟ್ಟು | **48** | **100.00** |

ಮೇಲಿನ ಕೋಷ್ಟಕದ ಪ್ರಕಾರ ಪ್ರತಿಶತ 60.42ರಷ್ಟು ಮಾಹಿತಿದಾರರಿಗೆ ಮೀಸಲಾತಿಯ ಬಗ್ಗೆ ಅರಿವು ಇಲ್ಲದ್ದರಿಂದ, ಹಾಗೂ ಪ್ರತಿಶತ 31.15ರಷ್ಟು ಮಾಹಿತಿದಾರರು ವಲಸೆ ಹೋಗುವುದರಿಂದ ಹಾಗೂ ಮೀಸಲಾತಿಯ ಸೌಕರ್ಯ ಕಲ್ಪಿಸಲು ಅಧಿಕಾರಿಗಳು ಲಂಚ ಕೇಳುವುದರಿಂದ ಪ್ರತಿಶತ 8.34ರಷ್ಟು ಮಾಹಿತಿದಾರರು ಮೀಸಲಾತಿ ಸೌಲಭ್ಯ ಪಡೆಯುವಲ್ಲಿ ವಿಫಲರಾಗಿದ್ದಾರೆ.

**ಮಾಹಿತಿದಾರರು ಹೊಂದಿರುವ ಪ್ರಾಣಿಗಳು, ಕೃಷಿ ಸಾಮಗ್ರಿಗಳು ಹಾಗೂ ಇತರ ಉಪಕರಣಗಳು**

ಲಂಬಾಣಿಗರು ತಮ್ಮ ಸಾಂಪ್ರದಾಯಿಕ ಉದ್ಯೋಗದಲ್ಲಿ ಪ್ರಾಣಿಗಳನ್ನು, ಚಕ್ಕಡಿಗಳನ್ನು ಬಳಸುತ್ತಿದ್ದರು. ಇವು ಅವರ ಆದಾಯದ ಮೂಲಗಳಾಗಿದ್ದವು. ಸಾಂಪ್ರದಾಯಿಕ ಉದ್ಯೋಗ ಕಳೆದುಕೊಂಡ ನಂತರ ಲಂಬಾಣಿಗರು ಪ್ರಾಣಿಗಳನ್ನು ಕೃಷಿಕಾರ್ಯಗಳಲ್ಲಿ ಹಾಗೂ ಹೈನುಗಾರಿಕೆಗಾಗಿ ಬಳಸುತ್ತಿದ್ದಾರೆ. ಮೊದಲು ತಮ್ಮ ಜೀವನಕ್ಕೆ ಹಾಗೂ ವೃತ್ತಿಗೆ ಬೇಕಾದ ಚಕ್ಕಡಿ, ಕಾಡುಪ್ರಾಣಿಗಳಿಂದ ರಕ್ಷಿಸಿಕೊಳ್ಳಲು ಖಡ್ಗಗಳನ್ನು, ಗೂಣಿಗಳನ್ನು (ಪ್ರಾಣಿಗಳ ಮೇಲೆ ವಸ್ತುಗಳನ್ನು ಹೇರುವ ಬಟ್ಟೆಯಿಂದ ನಿರ್ಮಿಸಿದ ಚೀಲಗಳು) ಬಳಸುತ್ತಿದ್ದರು. ಆದರೆ ಇಂದು ಇವುಗಳ ಬದಲಾಗಿ ತಮ್ಮ ದಿನನಿತ್ಯದ ಜೀವನಕ್ಕೆ ಅಗತ್ಯವಾದ ವಸ್ತುಗಳನ್ನು ಬಳಸುತ್ತಿದ್ದಾರೆ. ನರಸಲಗಿ ತಾಂಡಾದ ಲಂಬಾಣಿಗರು ಈ ಕೆಳಗಿನ ಪ್ರಾಣಿಗಳು ಹಾಗೂ ಉಪಕರಣಗಳನ್ನು ಹೊಂದಿದ್ದಾರೆ.

**ಕೋಷ್ಟಕ 16, ಮಾಹಿತಿದಾರರು ಹೊಂದಿರುವ ಪ್ರಾಣಿಗಳ ಸಂಖ್ಯೆ ಹಾಗೂ ಮನೆಯ ಉಪಕರಣಗಳ ಮಾಲೀಕತ್ವ ಆಧಾರಿತ ಸಂಖ್ಯೆ ಮತ್ತು ಶೇಕಡವಾರು ಹಂಚಿಕೆ. (Number and percentage distribution of respondents by ownership of number of animals & household durables)**

| ಹೊಂದಿರುವ ಉಪಕರಣಗಳು | | ಗಂಡು | | ಹೆಣ್ಣು | | ಒಟ್ಟು | |
|---|---|---|---|---|---|---|---|
| | | ಸಂಖ್ಯೆ | ಪ್ರತಿಶತ | ಸಂಖ್ಯೆ | ಪ್ರತಿಶತ | ಸಂಖ್ಯೆ | ಪ್ರತಿಶತ |
| ಎತ್ತುಗಳು | ಹೌದು | 16 | 34.04 | 1 | 7.69 | 17 | 28.33 |
| | ಇಲ್ಲ | 31 | 65.96 | 12 | 92.31 | 43 | 71.67 |
| ಹೌದಾದರೆ ಸಂಖ್ಯೆ | ಎರಡು | 16 | 34.04 | 1 | 7.69 | 17 | 28.33 |
| ಮೇಕೆಗಳು | ಹೌದು | 14 | 29.79 | 2 | 15.38 | 16 | 26.67 |
| | ಇಲ್ಲ | 33 | 70.21 | 11 | 84.62 | 44 | 73.33 |
| ಹೌದಾದರೆ ಸಂಖ್ಯೆ | 5 ಕ್ಕಿಂತ ಕಡಿಮೆ | 9 | 19.15 | 2 | 15.38 | 11 | 18.33 |
| | 5 ಕ್ಕಿಂತ ಹೆಚ್ಚು | 5 | 10.64 | 0 | 0 | 5 | 8.33 |
| ಹಸು | ಹೌದು | 4 | 8.51 | 3 | 23.08 | 7 | 11.67 |
| | ಇಲ್ಲ | 43 | 91.49 | 10 | 76.92 | 53 | 88.33 |
| ಹೌದಾದರೆ ಸಂಖ್ಯೆ | ಒಂದು | 1 | 2.13 | 1 | 7.69 | 2 | 3.33 |
| | ಎರಡು | 3 | 6.38 | 2 | 15.38 | 5 | 8.33 |

| | | | | | | | |
|---|---|---|---|---|---|---|---|
| ಎಮ್ಮೆ | ಹೌದು | 13 | 27.66 | 1 | 7.69 | 14 | 23.33 |
| | ಇಲ್ಲ | 34 | 72.34 | 12 | 92.31 | 46 | 76.67 |
| ಹೌದಾದರೆ ಸಂಖ್ಯೆ | ಒಂದು | 7 | 14.89 | 1 | 7.69 | 8 | 13.33 |
| | ಎರಡು | 6 | 12.77 | 0 | 0 | 6 | 10.00 |
| ಎತ್ತಿನ ಚಕ್ಕಡಿ | ಹೌದು | 12 | 25.53 | 1 | 7.69 | 13 | 21.67 |
| | ಇಲ್ಲ | 35 | 74.47 | 12 | 92.31 | 47 | 78.33 |
| ಹೌದಾದರೆ ಸಂಖ್ಯೆ | ಒಂದು | 12 | 25.53 | 1 | 7.69 | 13 | 21.67 |
| ದೂರವಾಣಿ | ಹೌದು | 5 | 10.64 | 1 | 7.69 | 6 | 10.00 |
| | ಇಲ್ಲ | 42 | 89.36 | 12 | 92.31 | 54 | 90.00 |
| ಹೌದಾದರೆ ಸಂಖ್ಯೆ | ಒಂದು | 5 | 10.64 | 1 | 7.69 | 6 | 10.00 |
| ದ್ವಿಚಕ್ರ ವಾಹನ | ಹೌದು | 2 | 4.26 | 1 | 7.69 | 3 | 5.00 |
| | ಇಲ್ಲ | 45 | 95.74 | 12 | 92.31 | 57 | 95.00 |
| ಹೌದಾದರೆ ಸಂಖ್ಯೆ / | ಒಂದು | 2 | 4.26 | 1 | 7.69 | 3 | 5.00 |
| ಟೇಪ್ ರೆಕಾರ್ಡ್‌ರ್ | ಹೌದು | 21 | 44.68 | 5 | 38.46 | 26 | 43.33 |
| | ಇಲ್ಲ | 26 | 55.32 | 8 | 61.54 | 34 | 56.67 |
| ಹೌದಾದರೆ ಸಂಖ್ಯೆ / | ಒಂದು | 21 | 44.68 | 5 | 38.46 | 26 | 43.33 |
| ಟೀವಿ | ಹೌದು | 5 | 10.64 | 5 | 38.46 | 10 | 16.67 |
| | ಇಲ್ಲ | 42 | 89.36 | 8 | 61.54 | 50 | 83.33 |
| ಹೌದಾದರೆ ಸಂಖ್ಯೆ | ಒಂದು | 5 | 10.64 | 5 | 38.46 | 10 | 16.67 |
| ರೇಡಿಯೋ | ಹೌದು | 7 | 14.89 | 3 | 23.08 | 10 | 16.67 |
| | ಇಲ್ಲ | 40 | 85.11 | 10 | 76.92 | 50 | 83.33 |
| ಹೌದಾದರೆ ಸಂಖ್ಯೆ | ಒಂದು | 7 | 14.89 | 3 | 23.08 | 10 | 16.67 |
| **ಒಟ್ಟು ಸಂಖ್ಯೆ** | | **47** | | **13** | | **60** | |

ಮೇಲಿನ ಕೋಷ್ಟಕದ ಪ್ರಕಾರ ಪ್ರತಿಶತ 28.33ರಷ್ಟು ಮಾಹಿತಿದಾರರು ಜೋಡಿ ಎತ್ತುಗಳನ್ನು, ಪ್ರತಿಶತ 26.67ರಷ್ಟು ಮಾಹಿತಿದಾರರು ಅವರಲ್ಲಿ ಪ್ರತಿಶತ 18.33ರಷ್ಟು 5ಕ್ಕಿಂತ ಕಡಿಮೆ ಹಾಗೂ ಪ್ರತಿಶತ 8.33ರಷ್ಟು 5ಕ್ಕಿಂತ ಹೆಚ್ಚು ಮೇಕೆಗಳನ್ನು ಹೊಂದಿದ್ದಾರೆ. ಇಷ್ಟೆ ಅಲ್ಲದೆ ಈ ಕೋಷ್ಟಕ ಸೂಚಿಸುವುದೇನೆಂದರೆ ಪ್ರತಿಶತ 11.67ರಷ್ಟು ಮಾಹಿತಿದಾರರು ಆಕಳುಗಳನ್ನು ಹೊಂದಿದ್ದು ಅವರಲ್ಲಿ ಪ್ರತಿಶತ 3.33ರಷ್ಟು 1 ಆಕಳು ಹೊಂದಿದರೆ. ಪ್ರತಿಶತ 8.33ರಷ್ಟು ಎರಡು ಆಕಳುಗಳನ್ನು ಹೊಂದಿದ್ದಾರೆ. ಲಂಬಾಣಿಗರು

ಹೈನುಗಾರಿಕೆಗಾಗಿ ಹಾಗೂ ಹಾಲಿನ ಉತ್ಪನ್ನಗಳಿಗಾಗಿ ಎಮ್ಮೆ ಸಾಕುತ್ತಿದ್ದು, ಪ್ರತಿಶತ 13.33ರಷ್ಟು ಒಂದು ಹಾಗೂ ಪ್ರತಿಶತ 10ರಷ್ಟು ಮಾಹಿತಿದಾರರು ಎರಡು ಎಮ್ಮೆಗಳನ್ನು ಹೊಂದಿದ್ದಾರೆ.

ಈ ಮೇಲಿನ ಅಂಕಿ-ಅಂಶಗಳ ಪ್ರಕಾರ ದನಕರುಗಳ ಸಹಾಯದಿಂದ ವ್ಯಾಪಾರ-ವ್ಯವಹಾರಗಳನ್ನು ಮಾಡುತ್ತಿದ್ದ ಲಂಬಾಣಿಗರು ಇಂದು ಅವುಗಳ ಪ್ರಯೋಜನ ಮೊದಲಿನಷ್ಟು ಇಲ್ಲವಾದ್ದರಿಂದ ಹೆಚ್ಚಿನ ಸಂಖ್ಯೆಯಲ್ಲಿ ಹೊಂದಿಲ್ಲ. ಕೃಷಿ ಕಾರ್ಯಗಳಿಗಾಗಿ ಹಾಗೂ ಹೈನುಗಾರಿಕೆಗಾಗಿ ಮಾತ್ರ ಉಪಯೋಗಿಸುತ್ತಿದ್ದಾರೆ. ಲಂಬಾಣಿಗರು ಹೆಚ್ಚಾಗಿ ವಲಸೆ ಹೋಗುವುದರಿಂದ, ಬರಗಾಲವಿರುವುದರಿಂದ, ಭೂಮಿ ಇಲ್ಲದ್ದರಿಂದ ಕಡಿಮೆ ಸಂಖ್ಯೆಯಲ್ಲಿ ಪ್ರಾಣಿಗಳನ್ನು ಹೊಂದಿರುವುದು ಕಂಡುಬರುತ್ತದೆ.

**ಉಪಕರಣಗಳು:**

ಮೇಲಿನ ಕೋಷ್ಟಕ 16 ವಿವರಿಸುವಂತೆ ಪ್ರತಿಶತ 21.67ರಷ್ಟು ಮಾಹಿತಿದಾರರು ಎತ್ತಿನ ಚಕ್ಕಡಿಗಳನ್ನು ಪ್ರತಿಶತ 10ರಷ್ಟು ಮಾಹಿತಿದಾರರು ದೂರವಾಣಿ ಸಂಪರ್ಕ, ಪ್ರತಿಶತ 5ರಷ್ಟು ಮಾಹಿತಿದಾರರು ಮೋಟಾರು ಸೈಕಲ್, ಪ್ರತಿಶತ 43.33ರಷ್ಟು ಮಾಹಿತಿದಾರರು ಟೇಪ್‌ರೇಕಾರ್ಡರ್ ಹಾಗೂ ಪ್ರತಿಶತ 16.67ರಷ್ಟು ಮಾಹಿತಿದಾರರು ರೇಡಿಯೋಗಳನ್ನು ಹೊಂದಿದ್ದಾರೆ. ಇದರಿಂದ ಲಂಬಾಣಿಗರು ಆಧುನಿಕರಣದ ಪ್ರಭಾವಕ್ಕೆ ಒಳಗಾಗುತ್ತಿದ್ದಾರೆ. ಎಂಬುದು ಸ್ಪಷ್ಟವಾಗುತ್ತದೆ.

**ಮಾಹಿತಿದಾರರು ಹೊಂದಿರುವ ಭೂಮಿಯ ಒಡೆತನ : (Details of the Land Owned):**

ಬಹು ಕಾಲದವರೆಗೆ ವ್ಯಾಪಾರ ಮಾಡುತ್ತ ಸಂಚರಿಸುತ್ತಿದ್ದರಿಂದ ಲಂಬಾಣಿಗರಿಗೆ ಶಾಶ್ವತ ನೆಲೆ ಇರಲಿಲ್ಲ ಆದ್ದರಿಂದ ಇವರಿಗೆ ಭೂಮಿ ಖರೀದಿಸಲು ಸಾಧ್ಯವಾಗಲಿಲ್ಲ. ಕಾಲಾಂತರದಲ್ಲಿ ತಲೆದೋರಿದ ಆರ್ಥಿಕ ಮತ್ತು ತಾಂತ್ರಿಕ ಬದಲಾವಣೆಯಿಂದ ಸಾಂಪ್ರದಾಯಿಕ ಉದ್ಯೋಗ ಕಳೆದುಕೊಂಡು ನಿರ್ದಿಷ್ಟ ಪ್ರದೇಶಗಳಲ್ಲಿ ನೆಲೆಸಿದ ಲಂಬಾಣಿಗರು ಜೀವನೋಪಾಯಕ್ಕಾಗಿ ಬೇರೆ ಉದ್ಯೋಗಗಳಲ್ಲಿ ಕೌಶಲ್ಯವಿಲ್ಲದೆ ಕೃಷಿ ಕಾರ್ಮಿಕರಾದರು. ಅನಕ್ಷರಸ್ಥರಾದ, ಬಡತನದಲ್ಲಿದ್ದ ಇವರು ದೀರ್ಘ ಅವಧಿಯವರೆಗೆ ಕೃಷಿ ಕಾರ್ಮಿಕರಾಗಿ ಮುಂದುವರಿದರು ಸಾಂಪ್ರದಾಯಿಕ ಉದ್ಯೋಗ ಕಳೆದುಕೊಂಡ, ಅಲೆಮಾರಿ ಹಾಗೂ ಅನಕ್ಷರಸ್ಥ ಲಂಬಾಣಿಗರ ದಿನ ನಿತ್ಯದ ಜೀವನ ಕಷ್ಟದಾಯಕವಾಯಿತು. ಭೂಮಾಲಿಕರು, ಲೇವಾದೇವಿದಾರದಿಂದ ಹಾಗೂ ಮೇಲ್ಜಾತಿಯ ಜನರಿಂದ ಅತಿರೇಕವಾಗಿ ಶೋಷಣೆಗೆ ಒಳಗಾದರು.[18] ಇಂತಹ ಸಂಕಷ್ಟದ ಪರಿಸ್ಥಿತಿಯಲ್ಲಿ ಮೇಲ್ಜಾತಿಯ ಜನರಾಗಲಿ ಸರ್ಕಾರವಾಗಲಿ ಸಹಾಯಕ್ಕೆ ಬರಲಿಲ್ಲ. ರಾಜಕೀಯ ಜನರು ಮತ ಪಡೆಯಲು ಇವರ ಹತ್ತಿರ ಬಂದರೆ ವಿನಃ ಇವರ ಸಮಸ್ಯೆಗಳಿಗೆ ಸ್ಪಂದಿಸಲಿಲ್ಲ. ಹೀಗೆ ಮೇಲ್ಜಾತಿಯ ಜನರಿಂದ ಕೃಷಿ ಕಾರ್ಮಿಕರಾಗಿ ಶೋಷಣೆಗೆ ಒಳಗಾಗಿದ್ದ ಲಂಬಾಣಿಗರು ಶೋಷಣೆಗಳಿಂದ ತಪ್ಪಿಸಿಕೊಳ್ಳಲು ಕಷ್ಟಪಟ್ಟು ದುಡಿದು ಭೂಮಿ ಖರೀದಿಸಲು ಪ್ರಾರಂಭಿಸಿ ಇತ್ತೀಚಿಗೆ ನಿಧಾನವಾಗಿ ಕೃಷಿಕರಾಗುತ್ತಿದ್ದಾರೆ. ಆದರೆ ಒಂದು ಶೋಚನೀಯ ವಿಷಯವೆಂದರೆ ಸ್ಥಳೀಯ ಲಂಬಾಣೇತರ ಶ್ರೀಮಂತ ಜನರು ಲಂಬಾಣಿ ಜನರು ಭೂಮಿ ಖರೀದಿಸುವುದನ್ನು ಸಹಿಸಲಾರದೆ ಅವರು ಅಡ್ಡಿಪಡಿಸುತ್ತಿದ್ದಾರೆ ಎಂದು ನನ್ನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಲಂಬಾಣಿ ಜನರು

18. Y.Rupla Naik, (1998) Colourful Banjaras(Lambani) Tribe Through the Ages: S.B.c. Publications, Bangalore, Pg.228.

ಪ್ರತಿಕ್ರಿಯೆ ನೀಡಿದ್ದಾರೆ. ನರಸಲಗಿ ತಾಂಡಾದ ಜನಸಂಖ್ಯೆಗೂ ಲಂಬಾಣಿಗರು ಹೊಂದಿರುವ ಭೂಮಿಯ ಪ್ರಮಾಣಕ್ಕೂ, ಅಂತರವಿದೆ ಹೆಚ್ಚಿನ ಪ್ರಮಾಣದಲ್ಲಿ ಇವರು ತುಂಡುಭೂಮಿ ಹಾಗೂ ಕಡಿಮೆ ಗುಣಮಟ್ಟದ ಮರಡಿಭೂಮಿಯನ್ನು ಹೊಂದಿದ್ದಾರೆ. ಅಂದರೆ ಮರಡಿಭೂಮಿ, ಕಡಿಮೆ ಹಣದಲ್ಲಿ ಖರೀದಿಸಿಕೊಂಡಿದ್ದಾರೆ. ಉತ್ತಮ ದರ್ಜೆಯ ಎರಿಭೂಮಿ ಉನ್ನತ ಜಾತಿಯ ಜನರು ಹೊಂದಿದ್ದಾರೆ. ಆದ್ದರಿಂದ ಬಂಜರು ಭೂಮಿ ನೀರಾವರಿ ಸೌಕರ್ಯಗಳಿಂದ ವಂಚಿತವಾಗಿದೆ. ಕೆಲವರು ಬೇರೆಯವರ ಭೂಮಿ ಗೇಣಿ ಪಡೆದು ಕೃಷಿಯಲ್ಲಿ ತೊಡಗಿದ್ದು ಕೃಷಿಕರಿಗಿಂತ ಕೃಷಿ ಕಾರ್ಮಿಕರ ಸಂಖ್ಯೆ ಹೆಚ್ಚಾಗಿದೆ. ನರಸಲಗಿ ತಾಂಡಾದ ಲಂಬಾಣಿಗರು ಹೊಂದಿದ ಭೂಮಿಯ ಒಡೆತನವನ್ನು ಕೆಳಗಿನ ಕೋಷ್ಟಕದಿಂದ ತಿಳಿಯಬಹುದು.

**ಕೋಷ್ಟಕ 17, ಮಾಹಿತಿದಾರರು ಹೊಂದಿರುವ ಭೂಮಿಯ ಎಕರೆವಾರು ಮಾಲೀಕತ್ವ ಆಧಾರಿತ ಸಂಖ್ಯೆ ಮತ್ತು ಶೇಕಡವಾರು ಹಂಚಿಕೆ. (Number and percentage distribution of respondents by acres of land owned)**

| ಎಕರೆ | ಸಂಖ್ಯೆ | ಪ್ರತಿಶತ |
|---|---|---|
| 1-2 | 2 | 3.33 |
| 2.1-4 | 13 | 21.67 |
| 4.1-6 | 11 | 18.33 |
| 6.1-8 | 3 | 5.00 |
| 8.1+ | 10 | 16.67 |
| ಭೂಮಿ ಇಲ್ಲದವರು | 21 | 35.00 |
| **ಒಟ್ಟು** | **60** | **100.00** |

ಮೇಲಿನ ಕೋಷ್ಟಕದ ಪ್ರಕಾರ ಪ್ರತಿಶತ 65ರಷ್ಟು ಲಂಬಾಣಿಗರು ಭೂಮಿಯ ಒಡೆತನವನ್ನು ಹೊಂದಿ ಸಾಗುವಳಿ ಮಾಡುತ್ತಿದ್ದರೆ, ಪ್ರತಿಶತ 35ರಷ್ಟು ಮಾಹಿತಿದಾರರು ಭೂರಹಿತರಾಗಿದ್ದಾರೆ. ಭೂಮಿ ಹೊಂದಿದವರಲ್ಲಿ ಪ್ರತಿಶತ 3.33ರಷ್ಟು ಕುಟುಂಬಗಳು 1 ರಿಂದ 2 ಎಕರೆ, 2 ರಿಂದ 4 ಎಕರೆ ಭೂಮಿಯನ್ನು ಪ್ರತಿಶತ 21.67ರಷ್ಟು ಕುಟುಂಬಗಳು, 4 ರಿಂದ 6 ಎಕರೆ ಭೂಮಿ, ಪ್ರತಿಶತ 18.33ರಷ್ಟು ಕುಟುಂಬಗಳು, 6 ರಿಂದ 8 ಎಕರೆಭೂಮಿ, ಪ್ರತಿಶತ 5ರಷ್ಟು ಕುಟುಂಬಗಳು. ಅಂತಿಮವಾಗಿ ಪ್ರತಿಶತ 16.67ರಷ್ಟು ಕುಟುಂಬಗಳು 8 ಎಕರೆಗಿಂತ ಹೆಚ್ಚು ಭೂಮಿ ಹೊಂದಿವೆ.

ಮೇಲಿನ ಅಂಕಿ-ಅಂಶಗಳಿಂದ ಕಂಡುಬರುವುದೇನಂದರೆ ಹಚ್ಚಿನ ಸಂಖ್ಯೆಯ ಲಂಬಾಣಿಗರು ಭೂರಹಿತರಾಗಿದ್ದಾರೆ. ಹಾಗೂ ತುಂಡುಭೂಮಿ ಹೊಂದಿ ಸಣ್ಣ ರೈತರಾಗಿದ್ದಾರೆ. ಲಂಬಾಣಿಗರಿಗೆ ಬೇಸಾಯದಲ್ಲಿ ಆಸಕ್ತಿ ಇದ್ದಾಗ್ಯೂ ಬಡತನದಿಂದ ಹಾಗೂ ಉಚ್ಛ ಜಾತಿಯ ಶ್ರೀಮಂತರ ವಿರೋಧದಿಂದ ಭೂಮಿ ಖರೀದಿಸಲು ಸಾಧ್ಯವಾಗುತ್ತಿಲ್ಲ. ಲಂಬಾಣಿಗರು ಹೊಂದಿರುವ ಒಟ್ಟು ಭೂಮಿಯಲ್ಲಿ ಪ್ರತಿಶತ 35.9ರಷ್ಟು ಕುಟುಂಬಗಳ ಭೂಮಿಯು ಒಣ ಬೇಸಾಯಕ್ಕೆ ಒಳಪಟ್ಟಿದೆ ಹಾಗೂ ಪ್ರತಿಶತ 64.10ರಷ್ಟು ಕುಟುಂಬಗಳ ಭೂಮಿಗೆ ನೀರಾವರಿ ಸೌಲಭ್ಯವಿದೆ. ನೀರಾವರಿ ಮೂಲಗಳನ್ನು ಕೆಳಗಿನ ಕೋಷ್ಟಕದ ಸಹಾಯದಿಂದ ತಿಳಿದುಕೊಳ್ಳಬಹುದು.

**ಕೊಷ್ಟಕ 18, ಮಾಹಿತಿದಾರರು ಹೊಂದಿರುವ ನೀರಾವರಿ ಸೌಲಭ್ಯವಿರುವ ಭೂಮಿಯ ಮಾಲೀಕತ್ವ ಆಧಾರಿತ ಸಂಖ್ಯೆ ಮತ್ತು ಶೇಕಡವಾರು ಹಂಚಿಕೆ. (Number and percentage distribution of land owned respondent by irrigation facility)**

| ನೀರಾವರಿ ಪ್ರಕಾರಗಳು | ಸಂಖ್ಯೆ | ಪ್ರತಿಶತ |
|---|---|---|
| ಭಾವಿ | 6 | 15.38 |
| ಕೊಳವೆಭಾವಿ | 19 | 48.72 |
| ಸೌಲಭ್ಯ ಇಲ್ಲ | 14 | 35.9 |
| **ಒಟ್ಟು** | **39** | **100** |

ಮೇಲಿನ ಕೋಷ್ಠಕದ ಪ್ರಕಾರ ಪ್ರತಿಶತ 15.38ರಷ್ಟು ಮಾಹಿತಿದಾರರು ಭಾವಿಯ ಮೂಲದಿಂದ ಹಾಗೂ ಪ್ರತಿಶತ 48.72ರಷ್ಟು ಮಾಹಿತಿದಾರರು ಕೊಳವೆಬಾವಿಗಳ ಮೂಲದಿಂದ ತಮ್ಮ ಭೂಮಿಗೆ ನೀರಾವರಿ ಸೌಲಭ್ಯ ಪಡೆದಿದ್ದಾರೆ. ನರಸಲಗಿ ತಾಂಡಾದ ಲಂಬಾಣಿಗರಿಗೆ ಕೆರೆ, ಕಾಲುವೆಗಳ ಮೂಲಗಳಿಂದ ನೀರಾವರಿ ಸೌಲಭ್ಯಗಳು ದೊರೆತಿಲ್ಲ. ಕೆರೆ ನಿರ್ಮಿಸಲು ಸರಕಾರಕ್ಕೆ ಮನವಿಪತ್ರ ಸಲ್ಲಿಸಿದರೂ, ಲಂಬಾಣೇತರರ ಭೂಮಿ, ನಷ್ಟವಾಗುತ್ತದೆಂದು ಲಂಬಾಣೇತರ ಜನರು ಕೆರೆ ನಿರ್ಮಾಣಕ್ಕೆ ಅಡೆ-ತಡೆ ಒಡ್ಡುತ್ತಿದ್ದಾರೆ. ಪ್ರಸ್ತುತ ನಾಲ್ಕು ವರ್ಷಗಳಿಂದ ಈ ಪ್ರದೇಶ ಬರಗಾಲಕ್ಕೆ ತುತ್ತಾಗಿದ್ದು, ಅಂತರ್‌ಜಲ ಕಡಿಮೆಯಾಗಿ ಭಾವಿಗಳು ಬತ್ತಿಹೋಗಿವೆ. ಈಗ ಪ್ರತಿಶತ 28.21ರಷ್ಟು ಕುಟುಂಬಗಳ ಭೂಮಿಗೆ ಮಾತ್ರ ಅಲ್ಪ-ಸ್ವಲ್ಪ ನೀರಾವರಿಯ ಸೌಲಭ್ಯವಿದೆ. ನೀರಾವರಿ ಸೌಕರ್ಯ ಪಡೆಯದಿರಲು ಕಾರಣಗಳನ್ನು ಕೆಳಗಿನ ಕೋಷ್ಠಕದ ಸಹಾಯದಿಂದ ತಿಳಿಯಬಹುದು.

**ಕೋಷ್ಠಕ 19, ಮಾಹಿತಿದಾರರಿಗೆ ನೀರಾವರಿ ಸೌಲಭ್ಯ ಸರಿಯಾಗಿ ದೊರೆಯದಿರುವುದಕ್ಕೆ ಕಾರಣವಾದ ಅಂಶಗಳ ಆಧಾರಿತ ಸಂಖ್ಯೆ ಮತ್ತು ಶೇಕಡವಾರು ಹಂಚಿಕೆ. (Number and percentage distribution of respondents not getting proper irrigation by reason)**

| ಕಾರಣಗಳು | ಸಂಖ್ಯೆ | ಪ್ರತಿಶತ |
|---|---|---|
| ನೀರಾವರಿ ಸೌಕರ್ಯ ಇಲ್ಲದ್ದರಿಂದ | 11 | 39.28 |
| ಆರ್ಥಿಕ ತೊಂದರೆ ಇರುವುದರಿಂದ | 1 | 3.57 |
| ಬರಗಾಲವಿರುವುದರಿಂದ ಭಾವಿ, ಕೊಳವೆಭಾವಿಗಳು ಬತ್ತಿಹೋಗಿವೆ. | 13 | 46.43 |
| ಸೌಲಭ್ಯ ಒದಗಿಸಲು ಲಂಚಕೇಳುತ್ತಿದ್ದಾರೆ. | 3 | 10.72 |
| ಒಟ್ಟು | **28** | **100.00** |

ಮೇಲಿನ ಕೋಷ್ಠಕದ ಪ್ರಕಾರ ಮಾಹಿತಿದಾರರು ನೀರಾವರಿ ಸೌಕರ್ಯಗಳಿಂದ ವಂಚಿತರಾಗಲು ಕಾರಣಗಳೆಂದರೆ ಹಣಕಾಸಿನ ತೊಂದರೆಯಿಂದ, ಕೊಳವೆಭಾವಿಗಳು ಬತ್ತಿ ಹೋಗಿದ್ದರಿಂದ ನೀರಾವರಿ ಸೌಕರ್ಯ ಒದಗಸಲು

ಅಧಿಕಾರಿಗಳು ಲಂಚ ಕೇಳುವುದರಿಂದ ಒಟ್ಟು ಪ್ರತಿಶತ 71.79ರಷ್ಟು ಕುಟುಂಬಗಳ ಭೂಮಿಗೆ ನೀರಾವರಿಯ ಸೌಲಭ್ಯಗಳು ದೊರೆಯುತ್ತಿಲ್ಲ. ಅಷ್ಟು ಮಾತ್ರವಲ್ಲ ನರಸಲಗಿ ತಾಂಡದ ಹೆಚ್ಚಿನ ಸಂಖ್ಯೆಯ ಲಂಬಾಣಿಗರು ತಮ್ಮ ಭೂಮಿಗಳಿಗೆ ನೀರಾವರಿ ಸೌಲಭ್ಯಗಳಿಗಾಗಿ ಕೊಳವೆಭಾವಿಗಳನ್ನು ಮಂಜೂರು ಮಾಡಲು ಅರ್ಜಿ ಸಲ್ಲಿಸಿದಾಗ್ಯೂ ಅಧಿಕಾರಿಗಳಿಗೆ ಲಂಚ ನೀಡಿದರೂ ಸೌಲಭ್ಯಗಳು ದೊರೆತಿಲ್ಲವೆಂದು ದೂರಿದ್ದಾರೆ.

ನೀರಾವರಿ ಸೌಲಭ್ಯಗಳು ಕಡಿಮೆ ಇರುವುದರಿಂದ, ಭೂಮಿ ಇಲ್ಲದಿರುವದರಿಂದ, ಬರಗಾಲದಿಂದ ಲಂಬಾಣಿಗರು ಕಡಿಮೆ ಆದಾಯ ಪಡೆಯುತ್ತಿದ್ದಾರೆ. ಹಸಿರು ಕ್ರಾಂತಿಯ ಸಾಧನಗಳಾದ ಉತ್ತಮ ತಳಿಯಬೀಜ, ಗೊಬ್ಬರ, ಕ್ರಿಮಿನಾಶಕಗಳು, ತಂತ್ರಜ್ಞಾನ, ಆಧುನಿಕ ಕೃಷಿಉಪಕರಣಗಳು, ಕೃಷಿಉತ್ಪಾದನೆಯನ್ನು ಹೆಚ್ಚಿಸಲೂ ಕಾರಣವಾದರೂ ಕೃಷಿ ಸಂಶೋಧನೆಗಳನ್ನು ಕೆಳಮಟ್ಟದಲ್ಲಿ ಸ್ವೀಕರಿಸಲು ಅವರ ಆದಾಯದ ಕೊರತೆ, ತುಂಡುಭೂಮಿ, ಒಣಬೇಸಾಯ, ಅನಕ್ಷರತೆ ಮುಂತಾದ ಕಾರಣಗಳಿಂದ ಲಂಬಾಣಿಗರು ಸುಧಾರಿಸಿದ ಕೃಷಿ ಸಾಧನಗಳನ್ನು ಬಳಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ನೀರಾವರಿ ಸೌಕರ್ಯಗಳನ್ನು ಹೊಂದಿದ 39 ಮಾಹಿತಿದಾರರಿಗೆ ಕೃಷಿ ಬೆಳೆಯ ವೃದ್ಧಿಗಾಗಿ ರಾಸಾಯನಿಕ ಗೊಬ್ಬರ ಉಪಯೋಗಿಸುತ್ತೀರಾ? ಎಂದು ಪ್ರಶ್ನೆಕೇಳಲಾಗಿತ್ತು. ಅದಕ್ಕೆ ಪ್ರತಿಯಾಗಿ 33.33ರಷ್ಟು ಮಾಹಿತಿದಾರರು ಹೌದು ಎಂದು ಪ್ರತಿಕ್ರಿಯೆ ನೀಡಿದರೆ ಪ್ರತಿಶತ 66.67ರಷ್ಟು ಮಾಹಿತಿದಾರರು ಇಲ್ಲ ಎಂದು ಪ್ರತಿಕ್ರಿಯೆ ನೀಡಿದ್ದು ಇವರು ಗೊಬ್ಬರ ಉಪಯೋಗಿಸದಿರುವುದಕ್ಕೆ ಭಾವಿಗಳು ಬತ್ತಿಹೋಗಿ ನೀರಾವರಿ ಸೌಕರ್ಯಗಳಿಂದ ವಂಚಿತವಾಗಿರವುದೇ ಕಾರಣವಾಗಿದೆ. ಲಂಬಾಣಿಗರಿಗೆ ಆಧುನಿಕ ಕೃಷಿ ತಂತ್ರಜ್ಞಾನದ ಬಗ್ಗೆ ತಿಳುವಳಿಕೆ ಇದ್ದರೂ, ನೀರಾವರಿ ಸೌಲಭ್ಯ ಇಲ್ಲದಿರುವುದರಿಂದ ಅವುಗಳನ್ನು ಅಳವಡಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಅಲ್ಪಸ್ವಲ್ಪ ನೀರಾವರಿ ಸೌಕರ್ಯವಿರುವ ಲಂಬಾಣಿಗರು ಕೃಷಿಯಲ್ಲಿ ಸುಧಾರಿಸಿದ ಬೀಜ, ಗೊಬ್ಬರ, ಬಳಸುತ್ತಿದ್ದಾರೆ.

## ಅಧ್ಯಾಯ ೩

## ವಲಸೆಯ ಚಲನ-ವಲನಗಳು ಸಮಾಜಶಾಸ್ತ್ರೀಯ ದೃಷ್ಟಿಕೋನ

**(Migratory Movements Sociological Perspective)**

ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ವಲಸೆಹೋಗುವುದು ಸಾಮಾನ್ಯ ಸಂಗತಿಯಾಗಿದೆ. ಮಾನವ ಭೂಮಿಯ ಮೇಲೆ ಶಾಶ್ವತವಾಗಿ ನೆಲೆಸಲು ಪ್ರಾಚೀನ ಕಾಲದ ಆಹಾರ ಹುಡುಕುವ ಹಂತದಿಂದ ಒಕ್ಕಲುತನ ಹಂತದವರೆಗೆ ವಲಸೆಯಲ್ಲಿ ತೊಡಗಿದ್ದ. ವಲಸೆ ಸಾರ್ವತ್ರಿಕವಾಗಿದೆ. ಎಲ್ಲಾ ಕಾಲಗಳಲ್ಲಿಯೂ, ಎಲ್ಲಾ ದೇಶಗಳಲ್ಲಿಯೂ ಕಂಡುಬರುತ್ತಿದ್ದು ಇದು ಮಾನವನಿಗೆ ಮಾತ್ರ ಸೀಮಿತವಾಗಿಲ್ಲ ಪ್ರಾಣಿಗಳು ಪ್ರತಿಕೂಲವಾದ ವಾತಾವರಣವನ್ನು ಎದುರಿಸಲಾಗದೇ ಆಹಾರ ಹುಡುಕಲು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ವಲಸೆ ಹೋಗುತ್ತವೆ. ಅದೇ ರೀತಿ ಪಕ್ಷಿಗಳು, ಜಲಚರಗಳು ಸಹ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ವಲಸೆ ಹೋಗುವುದನ್ನು ಕಾಣುತ್ತೇವೆ. ಸಮಾಜದಲ್ಲಿ ನಡೆಯುವ ಎಲ್ಲಾ ಹೋಗುಬರುವುಗಳನ್ನು ವಲಸೆ ಎಂದು ಹೇಳಲಾಗದು. ನೌಕರಿಗಾಗಿ ಒಂದು ಊರಿನಿಂದ ಸನಿಹದ ಇನ್ನೊಂದು ಊರಿಗೆ ದಿನಂಪ್ರತಿ ಹೋಗಿಬರುವುದು, ಪ್ರವಾಸಿಗರು ಅಲೆದಾಡುವುದನ್ನು ಕಾರ್ಮಿಕರು ದುಡಿಯಲು ಹೋಗುವುದನ್ನು ವಲಸೆ ಎನ್ನಲಾಗದು. ಏಕೆಂದರೆ ಈ ಹೋಗುಬರುವಿಕೆ (ಸಂಚಲನ) ತಾತ್ಕಾಲಿಕವಾಗಿರುತ್ತವೆ. ಸಮಾಜಶಾಸ್ತ್ರೀಯ ದೃಷ್ಟಿಕೋನದಿಂದ ಜನರು ತಮ್ಮ ಮೂಲಸ್ಥಾನವನ್ನು ಬಿಟ್ಟು ಒಂದು ನಿರ್ದಿಷ್ಟ ಅವಧಿಯವರಿಗೆ ಮತ್ತೊಂದು ಸ್ಥಳಕ್ಕೆ ಹೋಗಿ ವಾಸವಾಗುವುದನ್ನು ವಲಸೆ ಎಂದು ಕರೆಯುತ್ತೇವೆ.

"ಪ್ರಾಚೀನ ಕಾಲದಲ್ಲಿ ಭೌಗೋಳಿಕ ಅಂಶಗಳಾದ ನೈಸರ್ಗಿಕ ವಿಕೋಪಗಳು, ನೆರೆಹಾವಳಿ, ಬರಗಾಲ, ಮಾರಕ ರೋಗಗಳು, ವೈರಿಗಳ ದಾಳಿಗಳು ಹಾಗೂ ಅಧಿಕಾರದವತ್ತಾಯಗಳಿಂದ ಜನರು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ವಲಸೆ ಹೋಗುತ್ತಿದ್ದರು"[1] ಮಾನವನಿಗೆ ಒಕ್ಕಲುತನದ ಕಲೆ ಗೊತ್ತಾದ ಮೇಲೆ ಭೂಮಿಯ ಮೇಲೆ ಶಾಸ್ವತವಾಗಿ ನೆಲೆಸಿದ್ದರೂ, ವಲಸೆ ನಿರಂತರವಾಗಿ ಮುಂದುವರೆದಿದೆ. ಆರ್ಥಿಕ ಕೊರತೆ ಮಾನವನನ್ನು ವಲಸೆಗೆ ತಳ್ಳುತ್ತದೆ. ಉತ್ತಮ ಆರ್ಥಿಕ ಅವಕಾಶಗಳು ದೊರೆಯುವ ಪ್ರದೇಶಕ್ಕೆ ಮಾನವ ವಲಸೆ ಹೋಗುತ್ತಾನೆ. ಭಾರತದಲ್ಲಿ ಗ್ರಾಮೀಣ ಪ್ರದೇಶದಿಂದ ನಗರ ಪ್ರದೇಶಕ್ಕೆ ವಲಸೆ ಹೋಗುವುದನ್ನು ಕಾಣುತ್ತೇವೆ. ಗ್ರಾಮೀಣ ಆರ್ಥಿಕ ಪರಿಸ್ಥಿತಿ ಜನರ ಬೇಕು ಬೇಡಿಕೆಗಳನ್ನು ಈಡೇರಿಸುವಲ್ಲಿ ವಿಫಲವಾಗಿದ್ದರಿಂದ ಹಾಗೂ ನಿರುದ್ಯೋಗ, ಒಕ್ಕಲುತನದಿಂದ ಬರುವ ಕಡಿಮೆ ಆದಾಯ, ಗುಡಿ ಕೈಗಾರಿಕೆಗಳಿಗೆ ಪ್ರೋತ್ಸಾಹ

1. Encyclopaedia Americana, American corporation new york, Vol-19- 1969 P- 48

ದೊರಕದೆ ಇರುವುದು ವಲಸೆಗೆ ಕಾರಣವಾದ ಅಂಶಗಳಾಗಿವೆ. 18ನೇ ಶತಮಾನದಲ್ಲಿ ಇಂಗ್ಲೆಂಡಿನಲ್ಲಿ ಸಂಭವಿಸಿದ ಕೈಗಾರಿಕಾ ಕ್ರಾಂತಿಯು ಜಗತ್ತಿನಾದ್ಯಂತ ತೀವ್ರವಾಗಿ ವ್ಯಾಪಿಸಿ ಬಂಡವಾಳಶಾಹಿತ್ವ ಬೆಳೆಯಲು ಕಾರಣವಾಯಿತು. ನಗರಗಳು ಔದ್ಯೋಗಿಕ ಕೇಂದ್ರಗಳಾಗಿ ಪರಿಣಮಿಸಿ ಉದ್ಯೋಗದ ಅವಕಾಶಗಳು ಹೆಚ್ಚಾಗಿದ್ದರಿಂದ ಉದ್ಯೋಗ ಪಡೆಯಲು ಜನರು ಗ್ರಾಮಗಳಿಂದ ನಗರಗಳಿಗೆ ವಲಸೆ ಹೋಗುತ್ತಾರೆ. ವಲಸೆ ಹೋಗುವುದರಿಂದ ವ್ಯಕ್ತಿ ಆರ್ಥಿಕವಾಗಿ ಸುಧಾರಿಸಬಹುದು. ಆದರೆ ಇನ್ನೊಂದು ಕಡೆ ಜನರ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದಲಾವಣೆಗಳು ಕಂಡುಬರುತ್ತವೆ. ಹೀಗಿದ್ದರೂ ಆಧುನಿಕ ಮಾನವನ ಬೇಡಿಕೆಗಳ ಪೂರೈಕೆಗಾಗಿ ವಲಸೆ ಅನಿವಾರ್ಯವಾಗಿದೆ. ಬುಡಕಟ್ಟು ಸಮುದಾಯಗಳು ವಲಸೆಯಲ್ಲಿ ತೊಡಗಿದ್ದರಿಂದ ಜನರು ಬದಲಾಗುತ್ತಿದ್ದಾರೆ. ಆದ್ದರಿಂದ ವಲಸೆಯ ಸಮಾಜಶಾಸ್ತ್ರೀಯ ಅಧ್ಯಯನ ಕೈಕೊಳ್ಳುವುದು ಅವಶ್ಯಕವಾಗಿದೆ. ವಲಸೆಯ ಅರ್ಥವನ್ನು ಈ ಕೆಳಗಿನಂತೆ ನೋಡಬಹುದು.

**ವಲಸೆಯ ಅರ್ಥ ಮತ್ತು ವ್ಯಾಖ್ಯೆಗಳು: Meaning and Definitions of Migration:**

ವಲಸೆ ಎಂಬ ಪದವು ಲ್ಯಾಟಿನ್ ಭಾಷೆಯ ಮೂಲದ ಪದವಾದ ಮೈಗ್ರೇರ್ (Migrare) ಎಂಬ ಪದದಿಂದ ಬಂದಿದೆ. ಈ ಪದದ ಅರ್ಥ 'ವಾಸಸ್ಥಳದ ಬದಲಾವಣೆ' ಎಂದಾಗುತ್ತದೆ. ಇನ್ನೊಂದು ಅರ್ಥದಲ್ಲಿ ಒಬ್ಬ ವ್ಯಕ್ತಿ ಅಥವಾ ಜನರ ಗುಂಪು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಸ್ಥಳಾಂತರವಾಗುವ ಪ್ರಕ್ರಿಯೆಯೇ ವಲಸೆ. ವಲಸೆ ಪದದ ಅರ್ಥ ತಿಳಿಯಲು ಕೆಲವು ವ್ಯಾಖ್ಯೆಗಳನ್ನು ನೋಡುವುದು ಅವಶ್ಯವಾಗಿದೆ. ಅಂತರ್‌ರಾಷ್ಟ್ರೀಯ ಸಮಾಜವಿಜ್ಞಾನಗಳ ವಿಶ್ವಕೋಶವು ವಲಸೆ ಎಂಬ ಪದವನ್ನು ಈ ರೀತಿ ವ್ಯಾಖ್ಯಾನಿಸಿದೆ. "a relatively permanent movement of persons over a significant distance"[2]

"ಒಂದು ಪ್ರದೇಶದಿಂದ ಗಣನೀಯವಾದ ಅಂತರದಲ್ಲಿರುವ ಇನ್ನೊಂದು ಪ್ರದೇಶಕ್ಕೆ ಜನರ ಹೆಚ್ಚು ಕಡಿಮೆ (ಸಾಪೇಕ್ಷ) ಶಾಶ್ವತ ಚಲನೆ". ಈ ವ್ಯಾಖ್ಯೆಯ ಪ್ರಕಾರ ಗಮನಿಸಬೇಕಾದ ಎರಡು ವಿಷಯಗಳೆಂದರೆ ಗಣನೀಯ ಅಂತರ ಹಾಗೂ ಹೆಚ್ಚು ಕಡಿಮೆ (ಸಾಪೇಕ್ಷ) ಶಾಶ್ವತ ಚಲನೆ ಗಣನೀಯ ಅಂತರವೆಂದರೆ ಎಷ್ಟು? ಒಂದು ಕುಟುಂಬ ಊರೊಳಗಿನ ಒಂದು ಓಣಿಯಿಂದ ಇನ್ನೊಂದು ಓಣಿಗೆ ಸ್ಥಳಾಂತರಗೊಂಡರೆ ಅದಕ್ಕೆ ವಲಸೆ ಎನ್ನಬಹುದೆ? ಇಲ್ಲ, ಗಣನೀಯ ಅಂತರವೆಂದರೆ ಅದು ವಲಸಿಗರು ವಲಸೆ ಹೋದ ಅಂತರ ಅವರ ಸಮೂಹ ಜೀವನದ ಬದಲಾವಣೆಯನ್ನು ತರಬೇಕು. ಹೆಚ್ಚು ಕಡಿಮೆ (ಸಾಪೇಕ್ಷ) ಶಾಶ್ವತ ಚಲನೆ ಅಂದರೆ ವಲಸೆಹೋದ ಸ್ಥಳದಲ್ಲಿ ವಲಸಿಗರು ಕನಿಷ್ಠ ಒಂದು ವರ್ಷದ ಮಟ್ಟದ್ದಾಗಿರಬೇಕು. ಇಂತಹ ಸ್ಥಿತಿಗೆ ವಲಸೆ ಎಂದು ಕರೆಯಬಹುದು. ಈ ಮೇಲಿನ ವ್ಯಾಖ್ಯೆಯ ಪ್ರಕಾರ ವ್ಯಕ್ತಿ ತನ್ನ ಮೂಲ ಸ್ಥಾನವನ್ನು ಬಿಟ್ಟು ಇನ್ನೊಂದು ಪ್ರದೇಶಕ್ಕೆ ವಲಸೆ ಹೋಗಿ ಹೆಚ್ಚು ಕಡಿಮೆ ಶಾಶ್ವತ ನೆಲೆಸುವಿಕೆ ವಲಸೆ ಎಂದು ಕರೆಯಲ್ಪಡುತ್ತದೆ.

International Encyclopedia of Population ಅಂತರ್‌ರಾಷ್ಟ್ರೀಯ ಜನಸಂಖ್ಯಾ ವಿಶ್ವಕೋಶವು ವಲಸೆಯನ್ನು "Migration is a geographical mobility that involves, a change of usual

---

2. International Encyclopedia of the Social Sciences, Macmillion and Free Press-Vol-10, (1968) P-286

residence between defined Political or statistical area's or between residence areas of different types. In general usage,the term has been restricted to the relatively permanent change"[3]

"ವಲಸೆಯು ಒಂದು ಭೌಗೋಳಿಕ ಸಂಚಲನೆ ಜನರು ತಮ್ಮ ವಾಡಿಕೆಯ ವಸತಿ ಸ್ಥಳದಿಂದ ಇನ್ನೊಂದು ರಾಜಕೀಯವಾಗಿ ನಿರ್ಧರಿತ ಇಲ್ಲವೆ ಸಂಖ್ಯಾಶಾಸ್ತ್ರೀಯವಾಗಿ ನಿರ್ಧರಿತ ಪ್ರದೇಶಕ್ಕೆ ಸ್ಥಳಾಂತರಗೊಂಡರೆ ಅದಕ್ಕೆ ವಲಸೆ ಎನ್ನುವರು. ಸಾಮಾನ್ಯವಾಗಿ ವಲಸೆಯು ಹೆಚ್ಚು ಕಡಿಮೆ ಶಾಶ್ವತವಾದ ಸ್ಥಳಾಂತರವನ್ನು ಸೂಚಿಸುತ್ತದೆ." ಈ ವ್ಯಾಖ್ಯೆಯು ಮಾನವನ ಒಂದು ಭೌಗೋಳಿಕ ಪ್ರದೇಶದಿಂದ ಇನ್ನೊಂದು ಭೌಗೋಳಿಕ ಪ್ರದೇಶಕ್ಕೆ ಶಾಶ್ವತವಾದ ವಾಸಸ್ಥಾನದ ಬದಲಾವಣೆಯನ್ನು ವಲಸೆ ಎಂದು ಅರ್ಥೈಸಿದೆ. ಅಮೇರಿಕಾ ವಿಶ್ವಕೋಶವು "Encyclopedia Americana ವಲಸೆಯನ್ನು "Migration is a Co-ordinated voluntary movement of a considerable number of people from an accustomed habitat to an new one"[4]

"ಒಂದು ಹೊಂದಿಕೊಂಡ ಪ್ರದೇಶದಿಂದ ಹೊಸದೊಂದು ಪ್ರದೇಶಕ್ಕೆ ಗಣನೀಯ ಸಂಖ್ಯೆಯಲ್ಲಿ ಜನರ ಸ್ವಯಂಪ್ರೇರಿತ ಚಲಿಸುವಿಕೆ" ವಲಸೆ ಎಂದು ವ್ಯಾಖ್ಯಾನಿಸಿದೆ. ವಲಸೆಯು ಸಮಾಜದಲ್ಲಿ ನಿರಂತರ ನಡೆಯುವ ಪ್ರಕ್ರಿಯೆಯಾಗಿದೆ. ಇದು ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ರಂಗಳಲ್ಲಿ ಹಾಗೂ ಜನಸಂಖ್ಯಾ ರಚನೆಯಲ್ಲಿ ಬದಲಾವಣೆ ಉಂಟುಮಾಡುತ್ತದೆ. ಆದ್ದರಿಂದ ವಲಸೆಯನ್ನು ಕುರಿತು ಆಳವಾಗಿ ಅಭ್ಯಸಿಸುವುದು ಅವಶ್ಯಕವಾಗಿದೆ.

**ವಲಸೆಯ ಪ್ರಕಾರಗಳು (Types of Migration) :**

ವಲಸೆಯನ್ನು ಮುಖ್ಯವಾಗಿ ಎರಡು ಪ್ರಕಾರಗಳಲ್ಲಿ ವಿಂಗಡಿಸಲಾಗಿದೆ.




**ಅಂತರ್‌ರಾಷ್ಟ್ರೀಯ ವಲಸೆ (International Migration)**

ಅಂತರ್‌ರಾಷ್ಟ್ರೀಯ ವಲಸೆಯನ್ನು ಬ್ರೀಟಾನಿಕಾ ವಿಶ್ವಕೋಶವು Encyclopaedia of Britanica "a permanent movement of people of their own free will from one sovereign country

3. International Encyclopedia of Population, The Free Press, New Yerk, Val-II, (1982) Pg.448.
4. Encyclopaedia Americana, American corporation new york vol-19, 1969 P- 98

to another"[5] "ಜನರು ಸ್ವಯಂಪ್ರೇರಿತವಾಗಿ ಒಂದು ಸಾರ್ವಭೌಮತ್ವ ದೇಶದಿಂದ ಇನ್ನೊಂದು ದೇಶಕ್ಕೆ ಶಾಸ್ವತವಾಗಿ ಚಲಿಸುವುದಕ್ಕೆ ಅಂತರ್‌ರಾಷ್ಟ್ರೀಯ ವಲಸೆ" ಎಂದು ವ್ಯಾಖ್ಯಾನಿಸಿದೆ. ಕೆಲವೊಂದು ಸಲ ಅಂತರ್‌ರಾಷ್ಟ್ರೀಯ ವಲಸೆಯು ಒತ್ತಾಯ ಪೂರ್ವಕವಾದದ್ದೂ, ತಾತ್ಕಲಿಕವಾಗಿರುವುದನ್ನು ಕಾಣುತ್ತೇವೆ. ಸಾಮಾನ್ಯವಾಗಿ ಒಂದು ರಾಷ್ಟ್ರದಲ್ಲಿ ವಾಸವಾಗಿರುವ ಜನರು ತಮ್ಮ ರಾಷ್ಟ್ರದ ರಾಷ್ಟ್ರೀಯ ಸೀಮೆ ದಾಟಿ ಹೋಗಿ ಮತ್ತೊಂದು ರಾಷ್ಟ್ರದಲ್ಲಿ ನೆಲೆಸುವುದನ್ನು ಅಂತರ್ ರಾಷ್ಟ್ರೀಯ ವಲಸೆ ಎಂದು ಕರೆಯುತ್ತಾರೆ. ಕೈಗಾರಿಕರಣ, ಸಂಪನ್ಮೂಲಗಳ ಕೊರತೆ, ವಾಣಿಜ್ಯ ಉದ್ಯಮಗಳಲ್ಲಿ ಹಿಂದುಳಿದ ಬಡರಾಷ್ಟ್ರಗಳ ಜನರು ಉದ್ಯೋಗಕ್ಕಾಗಿ, ಆರ್ಥಿಕವಾಗಿ ಸುಧಾರಿಸಿಕೊಳ್ಳಲು ಮುಂದುವರೆದ ರಾಷ್ಟ್ರಗಳಿಗೆ ವಲಸೆ ಹೋಗಿ ನೆಲೆಸುತ್ತಾರೆ.. ಅಂತರ್‌ರಾಷ್ಟ್ರೀಯ ವಲಸೆಗೆ ಆರ್ಥಿಕ ಅಂಶವು ಬಹುಮುಖ್ಯವಾದ ಕಾರಣವಾಗಿದೆ. ಸುಧಾರಿಸಿದ ಜೀವನಮಟ್ಟವಿರುವ ದೇಶಗಳಲ್ಲಿಯ ಉದ್ಯೋಗದ ಅವಕಾಶಗಳು ಹಿಂದುಳಿದ ದೇಶಗಳ ಜನರ ಜೀವನ ಮಟ್ಟವನ್ನು ಸುಧಾರಿಸಲು ನೆರವಾಗುತ್ತದೆ.

**ಆಂತರಿಕ ವಲಸೆ (Internal Migration)**

ಯಾವುದೇ ದೇಶದ ಗಡಿಯ ವ್ಯಾಪ್ತಿಯಲ್ಲಿ ನಡೆಯುವ ಜನರ ಸಂಚಾರಗಳಿಗೆ ಆಂತರಿಕ ವಲಸೆ ಎಂದು ಕರೆಯುತ್ತಾರೆ. ಉದ್ಯೋಗದಿಂದ ವಂಚಿತರಾದ, ಕಡಿಮೆ ಜೀವನ ಮಟ್ಟದಲ್ಲಿರುವ ಒಂದು ಗ್ರಾಮದ ಬಡ ಜನರು, ಉನ್ನತ ಜೀವನಮಟ್ಟವಿರುವ, ಉದ್ಯೋಗಾವಕಾಶಗಳಿರುವ, ಹೆಚ್ಚಿನ ಕೂಲಿದರಗಳಿರುವ, ಇನ್ನೊಂದು ಗ್ರಾಮಕ್ಕಾಗಲೀ ಅಥವಾ ನಗರಕ್ಕಾಗಲೀ ವಲಸೆ ಹೋಗುವುದು ಹೆಚ್ಚಾಗಿ ಕಂಡುಬರುತ್ತದೆ. ಆಂತರಿಕ ವಲಸೆಗೆ ಆರ್ಥಿಕ ಅಂಶಗಳು, ಭೌಗೋಳಿಕ ಅಂಶಗಳು, ಬರಗಾಲ, ದಬ್ಬಾಳಿಕೆ ಮುಂತಾದ ಅಂಶಗಳು ಕಾರಣವಾಗಿವೆ.

**ಆಂತರಿಕ ವಲಸೆಯ ಪ್ರಕಾರಗಳು (Types of Internal Migration)**

**1. ಗ್ರಾಮದಿಂದ ಗ್ರಾಮಕ್ಕೆ ವಲಸೆ (Rural to Rural Migration)**

ಒಂದು ರಾಷ್ಟ್ರದಲ್ಲಿ ವಾಸಿಸುವ ಜನರು ಒಂದು ಗ್ರಾಮದಿಂದ ಇನ್ನೊಂದು ಗ್ರಾಮಕ್ಕೆ ವಲಸೆ ಹೋದರೆ ಗ್ರಾಮದಿಂದ ಗ್ರಾಮಕ್ಕೆ ವಲಸೆ ಎಂದು ಕರೆಯುತ್ತಾರೆ. ಈ ಪ್ರಕಾರದ ವಲಸೆ ಭಾರತದಲ್ಲಿ ಹೆಚ್ಚಾಗಿ ಕಂಡುಬರುತ್ತದೆ.

**2. ಗ್ರಾಮದಿಂದ ನಗರಕ್ಕೆ ವಲಸೆ Rural to Urban Migration:**

ಔದ್ಯೋಗಿಕರಣದ ಪ್ರಭಾವದಿಂದ ನಗರಗಳಲ್ಲಿ ಉದ್ಯೋಗವಕಾಶಗಳು ಸೃಷ್ಟಿಯಾಗಿದ್ದರಿಂದ ಉದ್ಯೋಗ ಪಡೆಯಲು ಜನರು ಗ್ರಾಮಗಳಿಂದ ನಗರಗಳಿಗೆ ವಲಸೆ ಹೋಗುತ್ತಾರೆ. ವ್ಯವಸಾಯದಿಂದ ಬರುವ ಕಡಿಮೆ ಆದಾಯ, ಗೃಹಕೈಗಾರಿಕೆಗಳ ಕ್ಷೀಣಿಸುವಿಕೆ, ಕಡಿಮೆ ಕೂಲಿದರಗಳು, ನಿರುದ್ಯೋಗ ಈ ಬಗೆಯ ವಲಸೆಗೆ ಪ್ರಮುಖ ಕಾರಣಗಳಾಗಿವೆ. ಕೆಲವರು ಶಿಕ್ಷಣ ಪಡೆಯಲು, ವ್ಯಾಪಾರ, ಮನೋರಂಜನೆಗಾಗಿ ಗ್ರಾಮಗಳಿಂದ ನಗರಗಳಿಗೆ ವಲಸೆ ಹೋಗುತ್ತಾರೆ. ಹೀಗೆ ಗ್ರಾಮದಿಂದ ನಗರಗಳಿಗೆ ನಡೆಯುವ ವಲಸೆಯು ನೈಸರ್ಗಿಕ ಪ್ರಕ್ರಿಯೆಯಾಗಿದೆ.

---

5. Encyclopaedia of Britanica, vol- 18- P- 292

### 3. ನಗರದಿಂದ ಮತ್ತೊಂದು ನಗರಕ್ಕೆ ವಲಸೆ (Urban to Urban Migration)

ಒಂದು ನಗರದಿಂದ ಜನರು ವ್ಯಾಪಾರ, ಕೈಗಾರಿಕೆ, ಉದ್ಯೋಗ, ವಾಣಿಜ್ಯೋದ್ಯಮಗಳಲ್ಲಿ ಹೆಚ್ಚಿನ ಪ್ರಗತಿ ಸಾಧಿಸಲು ಮತ್ತೊಂದು ನಗರ ಪ್ರದೇಶಕ್ಕೆ ಹೋಗಿ ನೆಲೆಸುವುದನ್ನು ನಗರ-ನಗರಗಳ ವಲಸೆ ಎಂದು ಕರೆಯುತ್ತಾರೆ. ಶಿಕ್ಷಣ ಪಡೆದಜನರು, ಉದ್ಯಮಿಗಳು, ಆಶಾವಾದಿಗಳು ಈ ಪ್ರಕಾರದ ವಲಸೆಯಲ್ಲಿ ನಿರತರಾಗಿದ್ದಾರೆ. ಉದಾಹರಣೆಗೆ ವ್ಯಾಪಾರಕ್ಕಾಗಿ ಹುಬ್ಬಳ್ಳಿ ನಗರದಿಂದ ಬೆಂಗಳೂರು ನಗರಕ್ಕೆ ಅನೇಕ ಜನರು ವಲಸೆ ಹೋಗುವುದು ಕಂಡುಬರುತ್ತದೆ.

### 4. ನಗರದಿಂದ ಗ್ರಾಮಕ್ಕೆ ವಲಸೆ (Urban to Rural Migration)

ಔದ್ಯೋಗಿಕರಣದಿಂದ ನಗರಗಳು ತೀವ್ರವಾಗಿ ಬೆಳೆದು ಅತಿಯಾದ ಜನಸಂದಣಿ, ವಸತಿಸಮಸ್ಯೆ, ಕೊಳಚೆ ಪ್ರದೇಶದಲ್ಲಿವಾಸವಾಗುವಿಕೆ, ಉಸಿರುಗಟ್ಟುವ ವಾತಾವರಣ, ಅಪರಾಧಗಳು, ಹೀಗೆ ಹಲವಾರು ಸಮಸ್ಯೆಗಳು ಉದ್ಭವಿಸಿವೆ. ಈ ಬೆಳವಣಿಗೆಯಿಂದ ನಗರವಾಸಿಗಳು ಬೇಸರಗೊಂಡು ಪ್ರಕೃತಿ ಪ್ರಶಾಂತ ಪ್ರಿಯರು ಆರೋಗ್ಯಕರ ಮತ್ತು ಶಾಂತಿಯುತ ಜೀವನ ಸಾಗಿಸಲು ಗ್ರಾಮಗಳಿಗೆ ವಲಸೆ ಬಂದು ನೆಲೆಸುವುದಕ್ಕೆ ನಗರದಿಂದ ಗ್ರಾಮಕ್ಕೆ ವಲಸೆ ಅಥವಾ ಮರುವಲಸೆ (Return Migration) ಎಂದು ಕರೆಯುತ್ತಾರೆ. ಇಂತಹ ವಲಸೆಗಳಿಗೆ "ಮರಳಿ ಮಣ್ಣಿಗೆ"ಯ ವಲಸೆಗಳೆಂದೂ ಕರೆಯುತ್ತಾರೆ.

### ವಲಸೆಯ ಅಧ್ಯಯನದಲ್ಲಿ ಪ್ರಯೋಗಿಸಲ್ಪಡುವ ಪದ ಹಾಗೂ ಪರಿಕಲ್ಪನೆಗಳು (Terms and Concepts used in the Study of Migration)

#### ತೆರೆದ ಹಾಗೂ ಮುಚ್ಚಿದ ಸಮಾಜಗಳು (Open and Closed Societies)

ಸಾಮಾನ್ಯವಾಗಿ ಸಮಾಜವನ್ನು ತೆರೆದ ಹಾಗೂ ಮುಚ್ಚಿದ ಸಮಾಜ ಎಂದು ವಿಂಗಡಿಸಲಾಗಿದೆ. ತೆರೆದ ಸಮಾಜಗಳಲ್ಲಿ ವಾಸಿಸುವವರಿಗೆ ಹೊರ ಮತ್ತು ಒಳಚಲನೆಗೆ ಮುಕ್ತ ಅವಕಾಶವಿದ್ದು ಜನರು ಯಾವುದೇ ನಿರ್ಭಂಧನೆ ಇಲ್ಲದೆ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಹೋಗಿ ನೆಲೆಸಬಹುದು. ಹಾಗೂ ಬೇರೆ ಬೇರೆ ಪ್ರದೇಶಗಳಿಂದ ಜನರು ವಲಸೆ ಬಂದು ನೆಲೆಸಬಹುದು. ಅಮೇರಿಕಾ ಮತ್ತು ಬ್ರಿಟನ್ ದೇಶಗಳು ಮುಕ್ತ ಸಮಾಜಕ್ಕೆ ಉತ್ತಮ ಉದಾಹರಣೆಗಳಾಗಿವೆ. ಮುಚ್ಚಿದ ಸಮಾಜಗಳಲ್ಲಿ ಜನರ ಒಳ ಮತ್ತು ಹೊರ ಚಲನಗಳಿಗೆ ಅನೇಕ ಅಡೆ-ತಡೆಗಳಿದ್ದು ಚಲನ-ವಲನಗಳಿಗೆ ಅವಕಾಶವಿರುವುದಿಲ್ಲ. ಇಂತಹ ಸಮುದಾಯಕ್ಕೆ ಬೇರೆ ಬೇರೆ ಪ್ರದೇಶಗಳಿಂದ ಜನರು ವಲಸೆ ಬಂದು ನೆಲಸಲು ಹಾಗೂ ಬೇರೆ ಬೇರೆ ಪ್ರದೇಶಗಳಿಗೆ ವಲಸೆ ಹೋಗಲು ಜನರ ಮೇಲೆ ಅನೇಕ ಪ್ರತಿಬಂಧಗಳನ್ನು ವಿಧಿಸುವುದರಿಂದ ವಲಸೆಯು ಸುಲಭವಾಗಿ ನಡೆಯುವುದಿಲ್ಲ. ರಶಿಯ ಮತ್ತು ಜಪಾನ್ ರಾಷ್ಟ್ರಗಳು ಮುಚ್ಚಿದ ಸಮುದಾಯಕ್ಕೆ ಉದಾಹರಣೆಗಳಾಗಿವೆ. ಆದರೆ ನೆನಪಿನಲ್ಲಿಟ್ಟುಕೊಳ್ಳಬೇಕಾದ ಸಂಗತಿ ಎಂದರೆ ನಿಜ ಜೀವನದಲ್ಲಿ ಸಂಪೂರ್ಣವಾಗಿ ಮುಚ್ಚಿದ ಅಥವಾ ಸಂಪೂರ್ಣವಾಗಿ ತೆರೆದ ಸಮಾಜಗಳನ್ನು ನಾವು ಕಾಣಲಾರೆವು. ಅವು ಕೇವಲ ಆದರ್ಶ ಪ್ರರೂಪ (Ideal types) ಅಥವಾ ಆದರ್ಶ ನಮೂನೆಗಳು ಮಾತ್ರ. ಉದಾ. ನಾವು ಅಮೇರಿಕೆಯನ್ನು ತೆರೆದ ಸಮಾಜವೆಂದು ಕರೆದರೆ ಅದರ ಅರ್ಥ ಅಲ್ಲಿ ಯಾರಾದರೂ ಬರಬಹುದೆಂದಲ್ಲ. ಅಮೇರಿಕೆಯು ಬೇರೆ ಬೇರೆ ದೇಶಗಳಿಂದ

ತನ್ನಲ್ಲಿಗೆ ವಲಸೆ ಬರುವವರ ಬಗ್ಗೆ ಅನೇಕ ನಿರ್ಭಂಧಗಳನ್ನು ಹಾಕಿದೆ ತನ್ನ ಆರ್ಥಿಕತೆಗೆ ಅನುಕೂಲರಾದವರನ್ನು ವಿವಿಧ ರಂಗಗಳಲ್ಲಿ ಹೆಸರು ಗಳಿಸಿದವರನ್ನು ಅದು ಕೈಬೀಸಿ ಕರೆದರೆ ಇನ್ನುಳಿದವರ ಬಗ್ಗೆ ಏನೆಲ್ಲಾ ನಿರ್ಭಂಧಗಳನ್ನು ಹೇರುತ್ತದೆ.

**ಕಳುಹಿಸಿಕೊಡುವ ಮತ್ತು ಬರಮಾಡಿಕೊಳ್ಳುವ ಸಮಾಜಗಳು (Sending and Receiving Societies)**

ಯಾವ ಸಮಾಜದಿಂದ ಜನರು ಬೇರೆ ಪ್ರದೇಶಗಳಿಗೆ ವಲಸೆ ಹೋಗುತ್ತಾರೋ ಅಂತಹ ಸಮಾಜವನ್ನು ಕಳುಹಿಸಿಕೊಡುವ ಸಮಾಜ (Society of orientation)ವೆಂದು ಕರೆಯುತ್ತಾರೆ. ಮತ್ತು ವಲಸಿಗರು ಹೋಗಿ ನೆಲೆಸುವ ಸಮಾಜವನ್ನು ಬರಮಾಡಿಕೊಳ್ಳುವ ಸಮಾಜ ಅಥವಾ ಸೇರಿಸಿಕೊಂಡ ಸಮಾಜ (Society of Destination) ಎಂದು ಕರೆಯುತ್ತಾರೆ.

ವಲಸೆಯು ಎರಡು ರೀತಿಯ ಪ್ರಕ್ರಿಯೆಯನ್ನು ಹೊಂದಿರುತ್ತದೆ. ಅವು ಜನರನ್ನು ಬೇರೆ ಕಡೆ ಕಳುಹಿಸಿಕೊಡುವುದು ಮತ್ತು ಜನರನ್ನು ಬೇರೆ ಕಡೆಗಳಿಂದ ಬರಮಾಡಿಕೊಳ್ಳುವುದು. ಈ ಎರಡು ಅಂಶಗಳು ಒಂದಕ್ಕೊಂದು ನಿಕಟ ಸಂಬಂಧ ಹೊಂದಿವೆ. ನೈಸರ್ಗಿಕ ವಿಕೋಪಗಳು, ಶತೃಗಳದಾಳಿ, ಅಲ್ಪಸಂಖ್ಯಾತರ ಮೇಲೆ ಬಹುಸಂಖ್ಯಾತರ ದಬ್ಬಾಳಿಕೆ. ಸಾಂಕ್ರಮಿಕ ರೋಗಗಳು ಮುಂತಾದವು ಜನರನ್ನು ಒಂದು ಪ್ರದೇಶದಿಂದ ಹೊರಗಟ್ಟುತ್ತವೆ. ಆದಕಾರಣ ವಲಸೆಯು ಅನಿವಾರ್ಯವಾಗುತ್ತದೆ. ಜನರಿಗೆ ಬೇರೆ ಪ್ರದೇಶಕ್ಕೆ ವಲಸೆ ಹೋಗಲು ಅನುಮತಿ ನೀಡಿ ಕಳುಹಿಸಿಕೊಡುವ ಸಮಾಜಕ್ಕೆ ಕಳುಹಿಸಿಕೊಡುವ ಸಮಾಜವೆಂದು ಕರೆಯುತ್ತಾರೆ. ಆಧುನಿಕ ಸಮಾಜಗಳಲ್ಲಿ ಕಂಡುಬರುವ ಮನೋರಂಜನೆ, ಶೈಕ್ಷಣಿಕ ಸೌಲಭ್ಯಗಳು, ಹೆಚ್ಚಿನ ಕೂಲಿದರ, ಉದ್ಯೋಗದ ಅವಕಾಶಗಳು, ಗ್ರಾಮೀಣ ಜನರನ್ನು ಆಕರ್ಶಿಸಿ ಬರಮಾಡಿಕೊಳ್ಳುತ್ತವೆ. ಕಳುಹಿಸಿಕೊಡುವ ಸಮಾಜದಿಂದ ವಲಸೆ ಬರುವ ಜನರನ್ನು ನಗರಗಳು ಸ್ವಾಗತಿಸುತ್ತವೆ. ಆದ್ದರಿಂದ ನಗರಗಳು ವಲಸಿಗರನ್ನು ಬರಮಾಡಿಕೊಳ್ಳುವ ಸಮಾಜವಾಗಿದೆ.

**ಹೊರವಲಸಿಗ ಮತ್ತು ಒಳವಲಸಿಗ (Emigrants and Immigrants)**

ವಲಸಿಗರು ಹೊರವಲಸಿಗರೋ ಅಥವಾ ಒಳವಲಸಿಗರೋ ಎಂಬ ವಿಷಯವನ್ನು ನಿರ್ಧರಿಸುವುದು ಆ ಆ ಪ್ರದೇಶಗಳನ್ನು ಅವಲಂಬಿಸಿದೆ ಒಂದು ಪ್ರದೇಶವನ್ನು ತ್ಯಜಿಸಿ ಇನ್ನೊಂದು ಪ್ರದೇಶಕ್ಕೆ ಹೊರ ಹೊರಟವರನ್ನು ಕಳುಹಿಸಿಕೊಡುವ ಸಮಾಜದ ದೃಷ್ಟಿಯಲ್ಲಿ ಹೊರವಲಸಿಗರಾಗುತ್ತಾರೆ. ಆದರೆ ಅದೇ ಜನರು ಬರಮಾಡಿಕೊಳ್ಳುವ ಸಮಾಜದ ದೃಷ್ಟಿಯಲ್ಲಿ ಒಳವಲಸಿಗರಾಗುತ್ತಾರೆ.

**ತಳ್ಳುವ ಮತ್ತು ಸೆಳೆಯುವ ಅಂಶಗಳು (Push and Pull Factors)**

ಎಲ್ಲಾ ರೀತಿಯ ವಲಸೆಯ ಚಲನ-ವಲನಗಳು ಎರಡು ಪ್ರಮುಖ ಅಂಶಗಳನ್ನು ಆಧರಿಸಿರುತ್ತವೆ. ಅವು ತಳ್ಳುವ ಮತ್ತು ಸೆಳೆಯುವ ಅಂಶಗಳು ವಲಸೆಗೆ ಈ ಎರಡೂ ಅಂಶಗಳು ಸಮ ಪ್ರಮಾಣದಲ್ಲಿ ಅವಶ್ಯವಾಗಿವೆ. ಈ ಅಂಶಗಳನ್ನು ಒಂದು ಕತ್ತರಿಯ ಎರಡು ಅಲಗುಗಳಿಗೆ ಹೋಲಿಸಬಹುದು ಕತ್ತರಿಗೆ ಎರಡು ಅಲಗುಗಳಿಲ್ಲದಿದ್ದರೆ ನಾವು ಏನನ್ನು ಕತ್ತರಿಸಲು ಬರುವುದಿಲ್ಲ. ಹಾಗೆಯೇ ವಲಸೆ ಸುಗಮವಾಗಿ ನಡೆಯಬೇಕಾದರೆ ತಳ್ಳುವ ಮತ್ತು ಸೆಳೆದುಕೊಳ್ಳುವ ಎರಡೂ ಅಂಶಗಳು ಅವಶ್ಯಕವಾಗಿವೆ. ತಳ್ಳುವ

ಅಂಶಗಳೆಂದರೆ ಅವು ಜನರನ್ನು ಬಲವಂತವಾಗಿ ವಾಸಸ್ಥಳವನ್ನು ಬಿಡಿಸಿ. ಬೇರೆ ಕಡೆ ವಲಸೆ ಹೋಗುವಂತೆ ಪ್ರೇರೇಪಿಸುತ್ತವೆ. ಉದಾಹರಣೆಗಾಗಿ ಗ್ರಾಮೀಣ ಸಾಲ, ತುಂಡುಭೂಮಿ, ಬರಗಾಲ, ಕಡಿಮೆಕೂಲಿ ಮುಂತಾದವು ತಳ್ಳುವ ಅಂಶಗಳಾಗಿವೆ. ಇವು ಜನರನ್ನು ಒಂದು ಪ್ರದೇಶದಿಂದ ಒತ್ತಾಯ ಪೂರ್ವಕವಾಗಿ ಇನ್ನೊಂದು ಪ್ರದೇಶಕ್ಕೆ ತಳ್ಳುತ್ತವೆ. ಇದರ ಪರಿಣಾಮವಾಗಿ ಜನರು ವಲಸೆ ಹೋಗುವುದು ಅನಿವಾರ್ಯವಾಗುತ್ತದೆ.

ಸೆಳೆದುಕೊಳ್ಳುವ ಅಂಶಗಳು ಜನರನ್ನು ಒಂದು ನಿರ್ದಿಷ್ಟ ಸ್ಥಳದಲ್ಲಿ ಬಂದು ನೆಲೆಗೊಳ್ಳುವಂತೆ ಮಾಡುತ್ತವೆ. ಉದಾಹರಣೆಗೆ ನಗರಪ್ರದೇಶದಲ್ಲಿಯ ಹೆಚ್ಚಿನ ಕೂಲಿದರಗಳು, ಉದ್ಯೋಗಾವಕಾಶಗಳು, ಮನೋರಂಜನೆ ಮುಂತಾದವು ಜನರನ್ನು ಆಕರ್ಶಿಸಿ ಬರಮಾಡಿಕೊಳ್ಳುತ್ತವೆ. ಇದರ ಪರಿಣಾಮವಾಗಿ ಗ್ರಾಮೀಣ ಪ್ರದೇಶದ ಜನರು ನಗರ ಪ್ರದೇಶಗಳಿಗೆ ವಲಸೆ ಹೋಗುತ್ತಾರೆ. ಉದ್ಯೋಗವಕಾಶಗಳ ಕೊರತೆ ಇರುವ ಗ್ರಾಮೀಣ ಸಮುದಾಯಗಳು ತಳ್ಳುವ ಅಂಶಗಳಾದರೆ ಉದ್ಯೋಗಾವಕಾಶಗಳಿರುವ ನಗರ ಪ್ರದೇಶಗಳು ಸೆಳೆದುಕೊಳ್ಳುವ ಅಂಶಗಳಾಗಿವೆ.

**ಗ್ರಾಮ-ನಗರ ವಲಸೆ (Rural Urban Migration)**

ಗ್ರಾಮ-ನಗರ ವಲಸೆಯು ಸಾರ್ವತ್ರಿಕಜನಸಂಖ್ಯಾಪ್ರಕ್ರಿಯೆಯಾಗಿದೆ. ಇಂಥಹ ವಲಸೆಯು ಎಲ್ಲಾ ಕಾಲದಲ್ಲಿಯೂ, ಎಲ್ಲಾ ಸಮುದಾಯಗಳಲ್ಲಿಯೂ, ನಡೆಯುತ್ತದೆ. ಆದರೆ ವಲಸೆಯ ವೇಗ ಮತ್ತು ವ್ಯಾಪ್ತಿಯು ಸ್ಥಳದಿಂದ ಸ್ಥಳಕ್ಕೆ ಕಾಲದಿಂದ ಕಾಲಕ್ಕೆ ಬೇರೆ ಬೇರೆಯಾಗಿರುತ್ತದೆ.

ಗ್ರಾಮೀಣ ಪ್ರದೇಶದಿಂದ ಜನರು ನಗರಪ್ರದೇಶಗಳಿಗೆ ಹರಿದುಹೋಗಲು ಗ್ರಾಮ ಮತ್ತು ನಗರಪ್ರದೇಶದ ಜನಸಂಖ್ಯೆಯ ಫಲಿತತೆಯಲ್ಲಿಯ ವ್ಯತ್ಯಾಸವೇ ಕಾರಣವಾಗಿದೆ. ಫಲಿತತೆಯು ಜೈವಿಕ-ಸಾಮಾಜಿಕ ಸಂಗತಿಯಾಗಿದ್ದು ಜನರು ಮಕ್ಕಳನ್ನು ಪಡೆಯುವುದು ಅವರ ಆರ್ಥಿಕ-ಸಾಮಾಜಿಕ ಅಂಶಗಳ ಮೇಲೆ ಅವಲಂಬಿಸಿದೆ. ನಗರ ಪ್ರದೇಶದ ಫಲಿತತೆಯು ಯಾವಾಗಲೂ ಕಡಿಮೆ ಇರುತ್ತದೆ. ನಗರವಾಸಿಗಳು ಸದಾಕಾಲ ತಮ್ಮ ಸಾಮಾಜಿಕ ಅಂತಸ್ತನ್ನು ಹೆಚ್ಚಿಸಿಕೊಳ್ಳಲು ಹವಣಿಕೆಯಲ್ಲಿರುತ್ತಾರೆ. ಈ ಸತತ ಹವಣಿಕೆಗೆ "ಇಲಿಯೋಟ" (Rat race) ಎನ್ನುತ್ತಾರೆ. ಇಂತಹ ಇಲಿಯೋಟದಲ್ಲಿ ತೊಡಗಿದವರಿಗೆ ಅತೀ ಕಡಿಮೆ ಸಂಖ್ಯೆಯಲ್ಲಿ ಮಕ್ಕಳನ್ನು ಹೆತ್ತು ಚಿಕ್ಕ ಕುಟುಂಬವನ್ನು ಹೊಂದುವ ಆಸೆ. ಏಕೆಂದರೆ ಕುಟುಂಬವು ದೊಡ್ಡದಾದಂತೆ ಮೇಲ್ಚಲನ ಕುಂಠಿತಗೊಳ್ಳುತ್ತದೆ. ಆದ್ದರಿಂದ ನಗರವಾಸಿಗಳು ಹೆಚ್ಚಿನ ಪ್ರಮಾಣದ ಮಕ್ಕಳನ್ನು ಹೆರಲು ಇಚ್ಛಿಸುವುದಿಲ್ಲ. ಹೀಗಾಗಿ ಎಲ್ಲ ನಗರಗಳಲ್ಲಿ ಜನಸಂಖ್ಯೆಯ ಕೊರತೆ ಇರುತ್ತದೆ. ಆದ್ದರಿಂದ ಜನಸಂಖ್ಯಾಶಾಸ್ತ್ರಜ್ಞರು No city can ever replenish itself ಅಂದರೆ ಯಾವುದೇ ನಗರವು ತನ್ನನ್ನು ತಾನೇ ಮರು ಭರಿಸಲಾರದು ಎನ್ನುತ್ತಾರೆ. ಆದರೆ ಗ್ರಾಮೀಣ ಪ್ರದೇಶದ ಪರಿಸ್ಥಿತಿಯು ಸಂಪೂರ್ಣ ಬೇರೆಯಾಗಿರುತ್ತದೆ. ಈ ಪ್ರದೇಶಗಳಲ್ಲಿ "ಇಲಿಯೋಟ" ಕಾಣದು. ಗ್ರಾಮೀಣ ಪ್ರದೇಶದಲ್ಲಿ ಫಲಿತತೆಯು ಹೆಚ್ಚಾಗಿರುತ್ತದೆ. ಕಡಿಮೆ ಮಹಾತ್ವಾಕಾಂಕ್ಷಿಗಳಾದ ಗ್ರಾಮೀಣ ಜನರು ತಮ್ಮ ಅವಶ್ಯಕತೆಗಿಂತ ಹೆಚ್ಚಿನ ಮಕ್ಕಳನ್ನು ಪಡೆಯುತ್ತಾರೆ. ಆದ್ದರಿಂದ ಗ್ರಾಮಗಳು ಹೆಚ್ಚಿನ ಜನಸಂಖ್ಯೆ ಹೊಂದಿವೆ. ಹೆಚ್ಚು ಮಹಾತ್ವಾಕಾಂಕ್ಷಿಗಳಾದ ನಗರ ಪ್ರದೇಶದ ಜನರು ಕಡಿಮೆ ಮಕ್ಕಳನ್ನು ಪಡೆಯುತ್ತಾರೆ. ಈ ಹಿನ್ನೆಲೆಯಲ್ಲಿ

ಗ್ರಾಮಗಳು ಹೆಚ್ಚು ನಗರಗಳಲ್ಲಿ ಕಡಿಮೆ ಜನಸಂಖ್ಯೆ ಇರುತ್ತದೆ. ನಗರಗಳು ಉದ್ದ್ಯೋಶಪೂರ್ವಕವಾಗಿ ಜನಸಂಖ್ಯೆ ಹೆಚ್ಚಿಸಿಕೊಳ್ಳುವುದಿಲ್ಲ. ಗ್ರಾಮೀಣ ಪ್ರದೇಶದಲ್ಲಿನ ಹೆಚ್ಚಿಗೆ ಉಳಿದ ಜನರು ನಗರಗಳಿಗೆ ವಲಸೆ ಹೋಗುವುದರಿಂದ ನಗರಗಳಿಗೆ ಜನಸಂಖ್ಯೆಯ ಪೂರೈಕೆಯಾಗುತ್ತದೆ.

**ಸಾಮಾನ್ಯ ಮತ್ತು ಅಸಾಮಾನ್ಯ ವೇಳೆಯಲ್ಲಿ ಜರಗುವ ವಲಸೆಗಳು (Migration during Normal and Abnormal Times)**

ಗ್ರಾಮ-ನಗರ ವಲಸೆಯು ಸಾಮಾನ್ಯ ಮತ್ತು ಅಸಾಮಾನ್ಯ ವೇಳೆಗಳೆರಡರಲ್ಲೂ ನಡೆಯುತ್ತದೆ. ಸಾಮಾನ್ಯ ವೇಳೆಯಲ್ಲಿ ಗ್ರಾಮೀಣ ಮತ್ತು ನಗರಪ್ರದೇಶಗಳಲ್ಲಿ ಸಮತೋಲನವಾದ ಕೂಲಿದರಗಳು ಇರುವ ಸಂದರ್ಭಗಳಲ್ಲಿ ನಡೆಯುವ ಗ್ರಾಮ-ನಗರ ವಲಸೆಗೆ ಸಾಮಾನ್ಯ ವೇಳೆಯ ವಲಸೆ ಎಂದು ಕರೆಯುತ್ತಾರೆ. ಇಂತಹ ಸಂದರ್ಭದಲ್ಲಿ ಗ್ರಾಮಗಳಲ್ಲಿ ಕೃಷಿಕಾರ್ಯಗಳಲ್ಲಿ ತೊಡಗದೇ ಅವಶ್ಯಕತೆಗಿಂತ ಹೆಚ್ಚಿನ ಜನರು ಮಾತ್ರ ನಗರಕ್ಕೆ ವಲಸೆ ಹೋಗುತ್ತಾರೆ. ಇಂತಹ ವಲಸೆಯಿಂದ ಗ್ರಾಮ ಮತ್ತು ನಗರ ಪ್ರದೇಶಗಳೆರಡರಕ್ಕೂ ಅನುಕೂಲ ಎರಡೂ ಸಮುದಾಯಗಳ ಮೇಲೆ ದುಃಸ್ಪರಿಣಾಮವಾಗುವುದಿಲ್ಲ ಈ ಸಾಮಾನ್ಯ ವಲಸೆಯಿಂದ ಗ್ರಾಮ ಮತ್ತು ನಗರ ಪ್ರದೇಶಗಳೆರಡೂ ಲಾಭ ಪಡೆಯುತ್ತವೆ. ಇಂತಹ ಸಮಯದಲ್ಲಿ ಪರಸ್ಪರಾವಲಂಬಿಗಳಾಗಿ ಸಹಯೋಗದೊಂದಿಗೆ ಗ್ರಾಮ-ನಗರಗಳೆರಡೂ ಅಭಿವೃದ್ಧಿ ಹೊಂದುತ್ತವೆ.

ಗ್ರಾಮೀಣ ಮತ್ತು ನಗರ ಪ್ರದೇಶದ ಕೂಲಿದರಗಳಲ್ಲಿ ಸಮತೋಲನ ತಪ್ಪಿದಾಗ ಅಂದರೆ ಗ್ರಾಮೀಣ ಪ್ರದೇಶಕ್ಕಿಂತ ನಗರ ಪ್ರದೇಶದಲ್ಲಿ ಕೂಲಿದರಗಳು ಅತೀ ಹೆಚ್ಚಾದಾಗ ಇಂತಹ ವೇಳೆಯಲ್ಲಿ ನಡೆಯುವ ಗ್ರಾಮ-ನಗರ ಚಲನವಲನಗಳಿಗೆ ಅಸಾಮಾನ್ಯ ವಲಸೆ ಎಂದು ಕರೆಯುತ್ತಾರೆ. ಅಸಾಮಾನ್ಯ ವಲಸೆಯು ಗ್ರಾಮೀಣ ಪ್ರದೇಶಕ್ಕೆ ಮಾರಕವಾಗಿದೆ. ನಗರಪ್ರದೇಶದ ಹೆಚ್ಚಿನ ಕೂಲಿದರಗಳಿಗೆ ಆಕರ್ಶಕರಾಗಿ ಗ್ರಾಮೀಣ ಪ್ರದೇಶದಲ್ಲಿಯ ವಿವಿಧ ಉದ್ಯೋಗಗಳಲ್ಲಿ ತೊಡಗಿರುವ, ಗ್ರಾಮಕ್ಕೆ ಅತ್ಯವಶ್ಯಕವಾಗಿರುವ ಜನರು ಹೆಚ್ಚಿನ ಸಂಖ್ಯೆಯಲ್ಲಿ ವಲಸೆಹೋಗುತ್ತಾರೆ. ಇದರಿಂದ ಗ್ರಾಮೀಣ ಉದ್ಯೋಗಗಳಿಗೆ ಅವಶ್ಯವಿರುವ ಜನರಿಲ್ಲದೆ ಉದ್ಯೋಗಗಳು ಹಿನ್ನಡೆಯನ್ನು ಅನುಭವಿಸುತ್ತವೆ. ಹಾಗೂ ಗ್ರಾಮೀಣ ಆರ್ಥಿಕ ಚಟುವಟಿಕೆಗಳ ಮೇಲೆ ಪ್ರತಿಕೂಲ ಪರಿಣಾಮ ಉಂಟಾಗುತ್ತದೆ. ಅಸಾಮಾನ್ಯವೇಳೆಯಲ್ಲಿ ನಡೆಯುವ ವಲಸೆಯಿಂದ ಗ್ರಾಮೀಣಪ್ರದೇಶದ ಸಾರ್ವತ್ರಿಕ ಅವನತಿ ಉಂಟಾಗುತ್ತದೆ. ಹೀಗಾಗಿ ಇಂಥ ಅಸಾಮಾನ್ಯ ಪರಿಸ್ಥಿತಿಯಲ್ಲಿ ನಗರಗಳು ಗ್ರಾಮ ಭಕ್ಷಕಗಳಾಗಿ ಪರಿಣಮಿಸುತ್ತವೆ. ಅಂದರೆ ನಗರಗಳು ಗ್ರಾಮಗಳನ್ನು ಸುಲಿದು ಹಿಂಡಿ ಹಿಪ್ಪೆ ಮಾಡಿ ಅಭಿವೃದ್ಧಿಗೊಳ್ಳುತ್ತವೆ. (Cities grow at the Cost of Villages.)

**ಅಂತರ (Distance)**

ಗ್ರಾಮದಿಂದ ನಗರ ಪ್ರದೇಶಕ್ಕೆ ನಡೆಯುವ ವಲಸೆಯು ಮೂಲಭೂತವಾಗಿ ಕಡಿಮೆ ಅಂತರದ ವಲಸೆಯಾಗಿದೆ. ಇಂಥಹ ವಲಸೆಯು ದಿಢೀರನೆ ಗ್ರಾಮದಿಂದ ನಗರಕ್ಕೆ ನೆಗೆಯುವ ಪ್ರಕ್ರೀಯೆಯಾಗಿರದೆ ಹಂತ-ಹಂತವಾಗಿ ಸಾಗುವ ಪ್ರಕ್ರೀಯೆಯಾಗಿದೆ. ಸಾಮಾನ್ಯವಾಗಿ ಭಾಷಾಸಮಸ್ಯೆ, ಜಾತಿಪದ್ಧತಿ, ಹೊಂದಾಣಿಕೆಯ ಸಮಸ್ಯೆಗಳಿಂದ ಜನರು ಗ್ರಾಮದಿಂದ ನೇರವಾಗಿ ಬೃಹತ್ ನಗರ ಪ್ರದೇಶಗಳಿಗೆ ವಲಸೆ ಹೋಗುವುದಿಲ್ಲ.

ಮೊದಲು Back-woodನಿಂದ ಅರೆ-ಗ್ರಾಮೀಣ ಪ್ರದೇಶಕ್ಕೆ, ಇಲ್ಲಿಂದ ಗ್ರಾಮೀಣ ಪ್ರದೇಶಕ್ಕೆ ನಂತರ ಅರೆ-ನಗರ ಪ್ರದೇಶಕ್ಕೆ, ಕೊನೆಯದಾಗಿ ನಗರ ಪ್ರದೇಶವನ್ನು ಪ್ರವೇಶಿಸುತ್ತಾರೆ. ಈ ವಲಸೆಯು ವಿವಿಧ ಹಂತಗಳಲ್ಲಿ ಹಾಗೂ ವಿವಿಧ ತಲೆಮಾರಿನಲ್ಲಿ ನಡೆಯುತ್ತದೆ. ಇದಕ್ಕೆ ಕಾರಣವೇನೆಂದರೆ ಗ್ರಾಮೀಣ ಜನರು ನಗರದ ಔದ್ಯಮಿಕ ಉದ್ಯೋಗಗಳನ್ನು ಪಡೆಯಲು ಪರಿಣತಿ ಹೊಂದಿರುವುದಿಲ್ಲ. ಆದ್ದರಿಂದ ಇಂತಹ ಪರಿಣತಿಯನ್ನು, ತಾವು ಹಂತ ಹಂತವಾಗಿ ವಲಸೆ ಹೋಗುವಾಗ ಪಡೆದು ಕೊನೆಗೆ ನಗರ ಪ್ರದೇಶವನ್ನು ಪ್ರವೇಸಿಸುತ್ತಾರೆ. ಒಬ್ಬ ವ್ಯಕ್ತಿ ಗ್ರಾಮೀಣ ಪ್ರದೇಶದಿಂದ ವಲಸೆ ಪ್ರಾರಂಭಿಸಿದರೆ ಅವನ ಮೊಮ್ಮಗ ನಗರ ಪ್ರದೇಶವನ್ನು ಪ್ರವೇಶಿಸುತ್ತಾನೆ. ವ್ಯಕ್ತಿ ಬೃಹತ್ ನಗರಪ್ರದೇಶಗಳಿಗೆ ತಲುಪಬೇಕಾದರೆ ವಂಶಪಾರಂಪರ್ಯವಾಗಿ ನಡೆಯುವ ವಲಸೆಯಿಂದ ಮಾತ್ರ ಸಾಧ್ಯವಾಗುತ್ತದೆ. ವ್ಯಕ್ತಿ ಹಂತ-ಹಂತವಾಗಿ ಬೃಹತ್ ನಗರಗಳಿಗೆ ವಲಸೆ ಹೋಗುವುದನ್ನು ಈ ಕೆಳಗಿನ ನಕ್ಷೆಯಿಂದ ತಿಳಿಯಬಹುದು.




1. ಗುಡ್ಡಗಾಡಿನಿಂದ ಅರೆಗ್ರಾಮ
   (Back-wood (Tribe) to Semi-Rural)
2. ಅರೆಗ್ರಾಮದಿಂದ ಗ್ರಾಮ
   (From Semi Rural to Rural)
3. ಗ್ರಾಮದಿಂದ ಪಟ್ಟಣಕ್ಕೆ
   (From Rural to Town)
4. ಪಟ್ಟಣದಿಂದ ನಗರಕ್ಕೆ
   (From Town to City)

**ವಲಸಿಗರ ವಯಸ್ಸು (Age of Migrants)**

ವಲಸೆಯು ಒಂದು ಸಾಹಸಕಾರ್ಯ. ಈ ಸಾಹಸಕ್ಕೆ ಕೈಹಾಕುವವರು ಯುವಕರು. ಆದ್ದರಿಂದ ಗ್ರಾಮ-ನಗರ ವಲಸೆಯಲ್ಲಿ ತರುಣ ಗಂಡು (15 ರಿಂದ 35 ವರ್ಷ) ವಯಸ್ಸಿನ ಯುವಕರು ಹೆಚ್ಚಾಗಿ ವಲಸೆ ಹೋಗುತ್ತಾರೆ. ಇವರು ಮೊದಲಹಂತದ ವಲಸಿಗರಾಗಿದ್ದಾರೆ. ಯುವಕರು ಮೊದಲು ನಗರ ಪ್ರದೇಶಗಳಿಗೆ ವಲಸೆಹೋಗಿ, ಉದ್ಯೋಗ ಪಡೆದು ನೆಲೆಸಿದ ನಂತರ ಅವರ ಹಿಂದೆ ಅವರ ಹೆಂಡತಿ ಮಕ್ಕಳು ಹಾಗೂ ಪಾಲಕರು ಹೋಗುವುದು ಕಂಡುಬರುತ್ತದೆ. ವಲಸೆಯ ಪ್ರಕ್ರೀಯೆಯನ್ನು ತೆರೆಗಳಿಗೆ ಹೋಲಿಸಿದರೆ ಮೊದಮೊದಲನೆಯ ತೆರೆಗಳು ಯುವಕರನ್ನು, ನಂತರದ ತೆರೆಗಳು ಹೆಂಗಸರು-ಮಕ್ಕಳನ್ನು ಹಾಗೂ ವಯಸ್ಸಾದ ಹಿರಿಯರನ್ನು ಒಳಗೊಂಡಿರುತ್ತದೆ.

**ವಲಸಿಗರ ಲಿಂಗ (Sex of Migrants)**

ಗ್ರಾಮದಿಂದ ನಗರಪ್ರದೇಶಕ್ಕೆ ವಲಸೆ ಹೋಗುವ ಮೊದಲ ತರೆ ಪ್ರಬಲವಾಗಿ ಪುರುಷರಾಗಿದ್ದಾರೆ. ತರುಣ ಯುವಕರು ತಮ್ಮ ಹೆಂಡತಿ-ಮಕ್ಕಳನ್ನು ತಮ್ಮ ಸ್ವಂತಹಳ್ಳಿಗಳಲ್ಲಿ ಬಿಟ್ಟು ಉದ್ಯೋಗ ಹುಡುಕಿಕೊಂಡು

ನಗರ ಪ್ರದೇಶಗಳಿಗೆ ವಲಸೆಹೋಗುತ್ತಾರೆ. ಉದ್ಯೋಗ ಪಡೆದು ವ್ಯವಸ್ಥಿತವಾಗಿ ನಗರಗಳಲ್ಲಿ ನೆಲೆಸಿದ ಮೇಲೆ ತಮ್ಮ ಹೆಂಡತಿ ಮಕ್ಕಳನ್ನು ನಗರಗಳಿಗೆ ಕರೆದುಕೊಂಡು ಹೋಗುತ್ತಾರೆ. ಸಂಶೋಧನೆಗಳ ಪ್ರಕಾರ ಭಾರತದಲ್ಲಿ ವಲಸಿಗರ ಲಿಂಗ ಸರಾಸರಿಯನ್ನು ಅವಲೋಕಿಸಿದಾಗ, ಲಿಂಗಕ್ಕೂ ಮತ್ತು ವಲಸೆಯ ಅಂತರಕ್ಕೂ ಸಂಬಂಧವಿದೆ. ಗ್ರಾಮ-ನಗರ ವಲಸೆಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಪುರುಷರಾದರೆ ಗ್ರಾಮದಿಂದ ಗ್ರಾಮಕ್ಕೆ ನಡೆಯುವ ಕಡಿಮೆ ಅಂತರದ ವಲಸೆಗಳಲ್ಲಿ ಸ್ತ್ರೀಯರು ಹೆಚ್ಚಿನ ಸಂಖ್ಯೆಯಲ್ಲಿರುತ್ತಾರೆ. Zachariah K. ಎಂಬ ಜನಸಂಖ್ಯಾಶಾಸ್ತ್ರಜ್ಞರ ಪ್ರಕಾರ ಭಾರತದ ಗ್ರಾಮ-ನಗರ ವಲಸೆಯಲ್ಲಿ ಸ್ತ್ರೀಯರಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ಪುರುಷರು ಕಂಡುಬರುತ್ತಾರೆ.[6] ಇದಕ್ಕೆ ಪುರುಷ ಪ್ರಧಾನ ಸಮಾಜವೇ ಕಾರಣವಾಗಿದ್ದು ಕುಟುಂಬದ ಎಲ್ಲಾ ನಿರ್ಧಾರಗಳನ್ನು ಪುರುಷ ವ್ಯಕ್ತಿ ತೆಗೆದುಕೊಳ್ಳುವುದರಿಂದ ಸ್ತ್ರೀ-ಪುರುಷರ ವಲಸೆಯಲ್ಲಿ ವ್ಯತ್ಯಾಸವಿದೆ. ಹಾಗೂ "ಬೇರೆ ಬೇರೆ ಸಮುದಾಯಗಳಲ್ಲಿ ವಲಸಿಗರ ಲಿಂಗದ ವಿಚಾರದಲ್ಲಿ ವ್ಯತ್ಯಾಸ ಕಂಡುಬರುತ್ತಿದ್ದು, ಮುಸ್ಲಿಂ ಮತ್ತು ಹಿಂದೂಗಳಲ್ಲಿ ಸ್ತ್ರೀಯರು ಕಡಿಮೆ ಸಂಖ್ಯೆಯಲ್ಲಿ ವಲಸೆಹೋದರೆ, ಕ್ರೀಶ್ಚಿಯನ್ ಸಮುದಾಯದಲ್ಲಿ ಸ್ತ್ರೀಯರು ಹೆಚ್ಚಿನ ಸಂಖ್ಯೆಯಲ್ಲಿ ವಲಸೆ ಹೋಗುತ್ತಾರೆ."[7]

**ವಲಸಿಗರ ಗುಣಮಟ್ಟ (Quality of Migrants)**

ನಗರ ಪ್ರದೇಶಗಳು ಸಾಮಾನ್ಯವಾಗಿ ಗ್ರಾಮದ ಉತ್ತಮ ಗುಣಮಟ್ಟದ ಜನರನ್ನು ಸೆಳೆದುಕೊಳ್ಳುತ್ತವೆ. ಎಂಬ ನಂಬಿಕೆ ಇದೆ ಆದರೆ ಇದು ಸತ್ಯಕ್ಕೆ ದೂರವಾದದ್ದು ಏಕೆಂದರೆ ನಗರಗಳು ಗ್ರಾಮಗಳಲ್ಲಿನ ಉತ್ತಮ ಮಟ್ಟದ ಜನರನ್ನಷ್ಟೇ ಅಲ್ಲದೆ ಕನಿಷ್ಠರನ್ನು ಸೆಳೆದುಕೊಳ್ಳುತ್ತವೆ. ಅಂದರೆ ನಗರಗಳು ಗ್ರಾಮಗಳ ಕೆನೆಯನ್ನೂ, ಕೆಸರನ್ನೂ ಸೆಳೆದುಕೊಳ್ಳುತ್ತದೆ. ಒಂದೆಡೆ ಸದೃಢ, ಶಿಕ್ಷಣ ಪಡೆದ ಕ್ರಿಯಾಶೀಲ ಯುವಕರನ್ನು ಸೆಳೆದುಕೊಂಡರೆ, ಇನ್ನೊಂದೆಡೆ ಗ್ರಾಮ ಸಮಾಜದಲ್ಲಿ ಬೇಡವಾದ ಕೊಲೆಗಾರರು, ಸೂಳೆಯರು, ಹಾಗೂ ಇನ್ನಿತರ ಅನಪೇಕ್ಷಿತ ಜನರನ್ನೂ ತನ್ನೆಡೆ ಸೆಳೆದುಕೊಳ್ಳುತ್ತವೆ. ಏಕೆಂದರೆ ಕೊಲೆ ಸುಲುಗೆದಾರರು, ಸೂಳೆಯರು, ನಗರದಂಥಹ ಲಕ್ಷಾನುಲಕ್ಷ ಜನರಿರುವ ಪ್ರದೇಶದಲ್ಲಿ ತಲೆಮರೆಸಿಕೊಳ್ಳುವುದು ಸುಲಭ ಆದರೆ ಚಿಕ್ಕ ಗ್ರಾಮಗಳಲ್ಲಿ ಅವರು ತಲೆ ಎತ್ತಿ ಬದುಕುವುದು ಕಷ್ಟವಾದ್ದರಿಂದ ನಗರ ಪ್ರದೇಶಗಳಿಗೆ ವಲಸೆಬರುತ್ತಾರೆ. ಹೀಗಾಗಿ ಕನ್ನಡ ಭಾಷೆಯಲ್ಲಿ "ಕೆಟ್ಟಮೇಲೆ ಪಟ್ಟಣಸೇರು" ಎಂಬ ಒಂದು ಗಾದೆ ಇದೆ.

**ವಲಸಿಗರ ಶಿಕ್ಷಣ (Education of the Migrants)**

ವಲಸೆಯಲ್ಲಿ ಶಿಕ್ಷಣವು ಮಹತ್ವದ ಪಾತ್ರ ವಹಿಸುತ್ತದೆ. ಸಾಮಾನ್ಯವಾಗಿ ಶಿಕ್ಷಣ ಪಡೆದ ವಿದ್ಯಾವಂತ ಯುವಕರು ಗ್ರಾಮೀಣ ಪ್ರದೇಶಗಳಿಂದ ನಗರಗಳಿಗೆ ಉದ್ಯೋಗ ಹಾಗೂ ಇತರ ಅವಕಾಶ ಪಡೆಯಲು ವಲಸೆ ಬರುತ್ತಾರೆ. ಏಕೆಂದರೆ ಶಾಲಾ-ಕಾಲೇಜುಗಳಲ್ಲಿ ಔಪಚಾರಿಕ ಶಿಕ್ಷಣ ಪಡೆದ ಯುವಕರಿಗೆ ಗ್ರಾಮೀಣ

---

6. Zachariah K, (1968) Migrants in Grater Bombay Asia Publishing House Bombay.
7. Wyon J.B. and Gorden, J.E. : 1971, The Khanna study Population Problems in the Rural Punjab: Harward University press

ಪ್ರದೇಶಗಳಲ್ಲಿ ಉದ್ಯೋಗ ಅವಕಾಶಗಳು ಇರುವುದಿಲ್ಲ. ಅವರ ಅರ್ಹತೆಗೆ ತಕ್ಕ ಉದ್ಯೋಗ ಗ್ರಾಮಗಳಲ್ಲಿ ದೊರೆಯುವುದಿಲ್ಲ. ಆದ್ದರಿಂದ ವಿದ್ಯಾವಂತ ಯುವಕರು ಅನಿವಾರ್ಯವಾಗಿ ನಗರಗಳಿಗೆ ವಲಸೆಬರುತ್ತಾರೆ.

**ಜೇಷ್ಠಾಧಿಕಾರ ಹಾಗೂ ಅಂತ್ಯಾಧಿಕಾರ ವ್ಯವಸ್ಥೆಗಳು ಹಾಗೂ ವಲಸೆ (Primogeniture-Ultimogeniture and rural-urban Migrations)**

ಜೇಷ್ಠಪುತ್ರ ಅಥವಾ ಮೊದಲು ಜನಿಸಿದ ಪುತ್ರನಿಗೆ ಹಿಂದೂ ಸಮಾಜದಲ್ಲಿ ಹೆಚ್ಚಿನ ಪ್ರಾಮುಖ್ಯತೆ ನೀಡಿದ್ದು, ಅವನಿಗೆ ಧರ್ಮಪುತ್ರನೆಂದು ಕರೆಯುತ್ತಾರೆ. ಧರ್ಮಪುತ್ರ ಅಥವಾ ಜೇಷ್ಠಪುತ್ರ ತನ್ನ ಇತರ ಸಹೋದರರಿಗಿಂತ (ಕಾಮಪುತ್ರರು) ಹೆಚ್ಚಿನ ಸೌಕರ್ಯಗಳನ್ನು ಅನುಭವಿಸುತ್ತಾನೆ. ಜೇಷ್ಠಪುತ್ರ ವ್ಯವಸ್ಥೆಯಲ್ಲಿ ಮನೆತನದ ಎಲ್ಲಾ ಆಸ್ತಿ ಹಾಗೂ ಹಿರಿತನ, ಜೇಷ್ಠಪುತ್ರನಿಗೆ ಮೀಸಲಾದರೆ ಕೆಲವೊಂದು ಸಮಾಜದಲ್ಲಿ ಕೊನೆಯ ಪುತ್ರನಿಗೆ ಹೆಚ್ಚಿನ ಪ್ರಾಧಾನ್ಯತೆ ನೀಡುವ ಪದ್ಧತಿ ಇದ್ದು, ಇಂಥಹ ಸಮಾಜದಲ್ಲಿ ಕುಟುಂಬದಲ್ಲಿ ಕೊನೆಗೆ ಜನಿಸಿದ ಪುತ್ರ ಎಲ್ಲಾ ಸೌಕರ್ಯಗಳನ್ನು ಪಡೆಯುತ್ತಾನೆ. ಅಂದರೆ ಅಂತ್ಯಾಧಿಕಾರ ವ್ಯವಸ್ಥೆಯಲ್ಲಿ ಮನೆತನದ ಆಸ್ತಿ ಹಾಗೂ ಹಿರಿತನ ಎಲ್ಲಕ್ಕೂ ಕಿರಿಯ ಪುತ್ರನಿಗೆ ಮೀಸಲಾಗಿರುತ್ತವೆ. ಹೀಗಾಗಿ ಜೇಷ್ಠಪುತ್ರ ವ್ಯವಸ್ಥೆ ಹೊಂದಿದ ಸಮಾಜಗಳಲ್ಲಿ ಮನೆತನದ ಆಸ್ತಿಯನ್ನು, ಅಧಿಕಾರವನ್ನು ಪಡೆದ ಜೇಷ್ಠಪುತ್ರರು ವಲಸೆ ಹೋಗುವ ಸಂಭವ ಕಡಿಮೆ. ಅಂತಹ ಪ್ರದೇಶದಲ್ಲಿ ಇತರ ಪುತ್ರರು (ಜೇಷ್ಠಪುತ್ರನನ್ನು ಹೊರತುಪಡಿಸಿ) ಸಂಭವನೀಯ ವಲಸೆಗಾರರಾಗಿದ್ದಾರೆ. ಏಕೆಂದರೆ ಇವರಿಗೆ ಜೇಷ್ಠಪುತ್ರನ ಹಾಗೆ ಜವಾಬ್ದಾರಿಗಳಿರುವುದಿಲ್ಲ, ಸ್ವತಂತ್ರವಾಗಿರುವುದರಿಂದ ವಲಸೆಯಲ್ಲಿ ತೊಡಗುತ್ತಾರೆ.

ಅದೇ ರೀತಿ ಅಂತ್ಯಾಧಿಕಾರ ವ್ಯವಸ್ಥೆ ಹೊಂದಿದ ಸಮಾಜದಲ್ಲಿ ಪರಿಸ್ಥಿತಿಯು ಸಂಪೂರ್ಣ ವಿರುದ್ಧವಾಗಿರುತ್ತದೆ. ಮನೆತನದ ಆಸ್ತಿಯನ್ನು ಹಾಗೂ ಅಧಿಕಾರದವನ್ನು ಬಳುವಳಿಯಾಗಿ ಪಡೆದ ಕಿರಿಯ ಮಗ ವಲಸೆ ಹೋಗುವ ಪ್ರಸಂಗ ಕಡಿಮೆ. ಆದ್ದರಿಂದ ಕುಟುಂಬದ ಆಸ್ತಿ ಕಿರಿಯ ಮಗ ಹೊಂದುವುದರಿಂದ ಜೇಷ್ಠಪುತ್ರನು ತನ್ನ ಉಪಜೀವನಕ್ಕಾಗಿ ನಗರ ಪ್ರದೇಶಕ್ಕೆ ವಲಸೆ ಹೋಗುತ್ತಾನೆ.

**ಕೃಷಿ ಏಣಿ ಹಾಗೂ ಗ್ರಾಮ-ನಗರ ವಲಸೆ (Agriculture Ladder and rural-urban Migration)**

ಗ್ರಾಮೀಣ ಪ್ರದೇಶಗಳಲ್ಲಿ ವಾಸಿಸುವ ಎಲ್ಲಾ ಜನರಿಗೆ ಭೂಮಿ ಇರುವುದಿಲ್ಲ. ಕೆಲವು ಜನರಿಗೆ ಸ್ವಂತಭೂಮಿ ಇದ್ದರೆ ಭೂಮಿಯಿಲ್ಲದವರು ಕೃಷಿ ಕಾರ್ಮಿಕರಾಗಿ ಕೆಲಸಮಾಡುತ್ತಾರೆ. ಗ್ರಾಮೀಣ ಕೃಷಿ ಏಣಿಯು ನಾಲ್ಕು ಹಲ್ಲುಗಳನ್ನು (Teeth of Ladder) ಹೊಂದಿರುತ್ತದೆ. ಅವು ಯಾವುವೆಂದರೆ ಮೊದಲ ಮೆಟ್ಟಲಿನಲ್ಲಿ ಜಮೀನುದಾರ, (ಭೂಮಿಬಾಡಿಗೆ ಕೊಡುವ ಅನುಪಸ್ಥಿತ ಭೂಮಾಲೀಕರು), ಎರಡನೆಯ ಸ್ಥಾನ ಭೂಒಡೆಯ ಸಾಗುವಳಿದಾರರು, (ಸ್ವಂತ ಭೂಮಿ ಹೊಂದಿದ ಮಾಲೀಕರೆ ಭೂಮಿ ಉಳವವರು) ಮೂರನೆಯ ಮೆಟ್ಟಲಿನಲ್ಲಿ ಗೇಣಿದಾರರು, (ಇತರರ ಭೂಮಿ ಬಾಡಿಗೆ ಪಡೆದು ಊಳುವವರು) ನಾಲ್ಕನೆಯ ಮೆಟ್ಟಲನ್ನು ಜಮೀನುರಹಿತ ಕೂಲಿಕಾರರು ಪಡೆದಿದ್ದಾರೆ.

### ಗ್ರಾಮೀಣ ಪ್ರದೇಶದ ಕೃಷಿ ಏಣಿ ಸೂಚಿಸುವ ಪಿರಾಮಿಡ್




- ಜಮೀನುದಾರರು - Rentier
- ಭೂ ಒಡೆಯ ಸಾಗುವಳಿದಾರ - Owner cultivator
- ಗೇಣಿದಾರ - Who cultivated lands of others
- ಜಮೀನುರಹಿತ ಕೂಲಿಕಾರ - Landless Labourers

ಮೇಲಿನ ಕೃಷಿ ಪಿರಾಮಿಡ್‌ನ ತುದಿಯಲ್ಲಿರುವ ಜಮೀನುದಾರರು (rentier) ಮತ್ತು ಅತ್ಯಂತ ತಳದಲ್ಲಿರುವ ಜಮೀನುರಹಿತ ಕೂಲಿಕಾರರು, ಗ್ರಾಮದಿಂದ-ನಗರಕ್ಕೆ ವಲಸೆ ಹೋಗುವ ಸಂಭವ ಹೆಚ್ಚು. ಜಮೀನುದಾರರು ತಮ್ಮ ಭೂಮಿಯನ್ನು ಇತರರಿಗೆ ಬಾಡಿಗೆಕೊಟ್ಟು ಐಶಾರಾಮದ ಜೀವನ ನಡೆಸಲು ನಗರ ಪ್ರದೇಶಗಳಿಗೆ ವಲಸೆ ಹೋಗಿ ಮನೆ ನಿರ್ಮಿಸಿಕೊಂಡು, ನಗರಗಳಲ್ಲಿ ಇದ್ದುಕೊಂಡು ತಮ್ಮ ಭೂಮಿಯ ಉಸ್ತುವಾರಿ ನೋಡಿಕೊಂಡು ಹೋಗುತ್ತಾರೆ. ಈ ವರ್ಗದ ಜನರು ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿದ್ದು ಗ್ರಾಮೀಣ ಹಾಗೂ ನಗರ ಪ್ರದೇಶಗಳ ಎಲ್ಲ ಸವಲತ್ತುಗಳನ್ನು ಅನುಭೋಗಿಸುತ್ತಾರೆ. ನಗರದಲ್ಲಿ ದೊರೆಯುವ ಐಶಾರಾಮ ಜೀವನ, ಮಕ್ಕಳಿಗೆ ವಿದ್ಯೆ ಇತ್ಯಾದಿ ಕಾರಣಗಳು ಜಮೀನುದಾರರನ್ನು ನಗರಗಳ ಕಡೆಗೆ ಸೆಳೆದರೆ, ನಗರದಲ್ಲಿ ದೊರೆಯುವ ಹೆಚ್ಚಿನ ಸಂಬಳ ಕೂಲಿಕಾರರನ್ನು ನಗರಗಳ ಕಡೆಗೆ ಸೆಳೆಯುತ್ತವೆ. ಆದ್ದರಿಂದ ಜಮೀನುರಹಿತ ಕೂಲಿಕಾರರು ಗ್ರಾಮಗಳನ್ನು ಬಿಟ್ಟು ನಗರಪ್ರದೇಶಗಳಿಗೆ ವಲಸೆ ಹೋಗುವ ಸಂಭವ ಹೆಚ್ಚು ಆದರೆ ಒಡೆಯ ಸಾಗುವಳಿದಾರರು ಹಾಗೂ ಗೇಣಿದಾರರು ಭೂಸಾಗುವಳಿಯಲ್ಲಿ ತೊಡಗಿರುವುದರಿಂದ ಅವರು ತಮ್ಮ ಕಸುಬನ್ನು ತೊರೆದು ನಗರಗಳಿಗೆ ವಲಸೆ ಹೋಗುವ ಸಂಭವ ಕಡಿಮೆ.

### ಭಾರತದಲ್ಲಿ ಗ್ರಾಮ-ನಗರ ವಲಸೆ (Rural-Urban Migration in India)

ಭಾರತದ ಗ್ರಾಮೀಣ ಪ್ರದೇಶದಿಂದ-ನಗರಗಳಿಗೆ ನಡೆಯುವ ವಲಸೆಯನ್ನು ಕುರಿತು ಜನಸಂಖ್ಯಾಶಾಸ್ತ್ರಜ್ಞರಲ್ಲಿ ವಾದವಿವಾದಗಳು ಕಂಡುಬರುತ್ತವೆ. ಈ ವಾದವಿವಾದಗಳು Zachariah and Bogue ಹಾಗೂ ಕೆ.ಡೇವಿಸ್‌ರವರ ಮಧ್ಯೆ ಇದೆ Zachariah ಮತ್ತು Bogue ಈ ವಿಚಾರವಾದಿಗಳ ಪ್ರಕಾರ ಭಾರತೀಯರು 'ಚಲನಶೀಲ ಜನರು' ಇವರು ದೇಶದ ಒಳಗೂ, ಹೊರದೇಶಗಳಾದ ಬರ್ಮಾ, ಇಂಡೋನೇಶಿಯಾ, ಶ್ರೀಲಂಕಾ ಮುಂತಾದ ಕಡೆ ವ್ಯಾಪಾರಕ್ಕಾಗಿ ವಲಸೆಹೋಗಿ ನೆಲೆಸಿದ್ದು ಕಂಡುಬರುತ್ತದೆ. ಆದ್ದರಿಂದ ಭಾರತೀಯರು ಆಂತರಿಕ ಮತ್ತು ಅಂತರ್‌ರಾಷ್ಟ್ರೀಯ ವಲಸೆಯಲ್ಲಿ ತೊಡಗಿದ್ದಾರೆಂದು ಅಭಿಪ್ರಾಯಪಟ್ಟಿರುತ್ತಾರೆ. ಮೇಲಿನವರ ವಿಚಾರಗಳನ್ನು ಪ್ರಸಿದ್ಧ ಜನಸಂಖ್ಯಾಶಾಸ್ತ್ರಜ್ಞರಾದ, ಸಮಾಜಶಾಸ್ತ್ರಜ್ಞರೂ ಆದ ಕೆ.ಡೇವಿಸ್‌ರವರು ಒಪ್ಪುವುದಿಲ್ಲ. ಇವರ ಪ್ರಕಾರ ಭಾರತೀಯರು 'ಚಲನಾಹೀನ' ಜನರು ಹೆಚ್ಚಾಗಿ ವಲಸೆಯ ಚಲನ-ವಲನಗಳಲ್ಲಿ ತೊಡಗಿಲ್ಲ ತಮ್ಮ ಮೂಲಸ್ಥಳಗಳಲ್ಲಿ ಅಂಟಿಕೊಂಡಿದ್ದಾರೆ. ಎಂದು ಅಭಿಪ್ರಾಯಪಟ್ಟು ಈ ಹೇಳಿಕೆಯನ್ನು ಖಚಿತಪಡಿಸಲು ಕೆಳಗಿನ ಅಂಕಿ-ಅಂಶಗಳನ್ನು ಆಧಾರವಾಗಿ ನೀಡಿದ್ದಾರೆ. 1911ರಲ್ಲಿ ಕೇವಲ ಪ್ರತಿಶತ 8.7ರಷ್ಟು ಜನರು,

1921ರಲ್ಲಿ ಪ್ರತಿಶತ 9.8ರಷ್ಟು ಜನರು ತಮ್ಮದಲ್ಲದ ಬೇರೆ ಜಿಲ್ಲೆಗಳಲ್ಲಿ ವಾಸವಾಗಿದ್ದರು. 1931ರಲ್ಲಿ ಪ್ರತಿಶತ 3.59ರಷ್ಟು ಜನರು ತಮ್ಮ ತವರು ರಾಜ್ಯವಲ್ಲದ ಬೇರೆ ರಾಜ್ಯಗಳಲ್ಲಿ ವಾಸವಾಗಿದ್ದಾರೆ.[8] ಈ ಅಂಕಿ-ಅಂಶಗಳ ಪ್ರಕಾರ ಭಾರತೀಯರು ಅತ್ಯಂತ ಕಡಿಮೆ ಸಂಖ್ಯೆಯಲ್ಲಿ ವಲಸೆ ಹೋಗುವುದು ತಿಳಿದುಬರುತ್ತದೆ. ಆದ್ದರಿಂದ 'ಚಲನಾಹೀನ' ಜನರು ಎಂದು ವಾದಿಸಿ ವಲಸೆ ಹೋಗದಿರಲು ಕೆಳಗಿನ ಕಾರಣಗಳನ್ನು ನೀಡಿದ್ದಾರೆ.

**1. ಒಕ್ಕಲುತನವು ಜೀವನದ ಒಂದು ಮಾರ್ಗವಾಗಿದೆ (Agriculture- a way of life)**

ಭಾರತದಲ್ಲಿ ಒಕ್ಕಲುತನವು ಕೇವಲ ಒಂದು ಉದ್ಯೋಗವಾಗಿರದೇ ಜನರ ಜೀವನ ಮಾರ್ಗ ಆಗಿದೆ. ಇಲ್ಲಿ ಪ್ರತಿಶತ 70ರಷ್ಟು ಜನರು ಒಕ್ಕಲುತನದಲ್ಲಿ ತೊಡಗಿದ್ದಾರೆ. ಹಾಗೂ ಇನ್ನುಳಿದ ಪ್ರತಿಶತ 30ರಷ್ಟು ಜನರಿಗೆ ಅಪ್ರತ್ಯಕ್ಷವಾಗಿ ಒಕ್ಕವಲುತನವೇ ಆಧಾರವಾಗಿದೆ. ಇಲ್ಲಿಯ ಜನರು ಒಕ್ಕಲುತನವನ್ನು ಬಹಳ ಪ್ರೀತಿಸುತ್ತಾರೆ. ಹಿಂದೂ ಧರ್ಮವು ವ್ಯವಸಾಯಕ್ಕೆ ವಿಶೇಷ ಸ್ಥಾನ-ಮಾನಗಳನ್ನು ನೀಡಿದ್ದರಿಂದ ಜನರು ಈ ಉದ್ಯೋಗಕ್ಕೆ ಅಂಟಿಕೊಂಡಿದ್ದಾರೆ. ಅತೀವ ಇಂಗಿಸಲಾರದ ಹಸಿವು ಮತ್ತು ಯಾರಾದರು ಮರಣ ಹೊಂದಿದಾಗ ಮಾತ್ರ ಭಾರತೀಯ ರೈತರು ಕೃಷಿಕಾರ್ಯಗಳನ್ನು ಬಿಡುತ್ತಾರೆ. ಅದು ಅಲ್ಲದೆ ಗ್ರಾಮಸ್ಥರು ಕೃಷಿಕಾರ್ಯಗಳಲ್ಲಿ ಪ್ರಾಚೀನ ಕಾಲದ ಉಪಕರಣಗಳನ್ನು ಬಳಸುವುದರಿಂದ ಕೆಲಸ-ಕಾರ್ಯಗಳು ಧೀರ್ಘ ಕಾಲಾವಧಿ ಹಿಡಿಯುತ್ತವೆ. ಆಧುನಿಕ ಕೃಷಿ ಉಪಕರಣಗಳ ಸಹಾಯದಿಂದ 3 ತಿಂಗಳುಗಳಲ್ಲಿ ಮಾಡುವ ಕೆಲಸ-ಕಾರ್ಯಗಳು ಹಳೆಯ ಉಪಕರಣಗಳಿಂದ 12 ತಿಂಗಳುಗಳು ಬೇಕಾಗುತ್ತವೆ. ಆದ್ದರಿಂದ ಭಾರತೀಯರು ವರ್ಷವಿಡೀ ಕೃಷಿಯಲ್ಲಿ ತೊಡಗಿದ್ದಾರೆ. ಹೀಗಾಗಿ ಒಕ್ಕಲುತನ ಜನರನ್ನು ಕಟ್ಟಿಹಾಕಿದೆ. ಈ ಕಾರಣಕ್ಕಾಗಿ ವಲಸೆ ಹೋಗಲು ಸಾಧ್ಯವಾಗುವುದಿಲ್ಲವೆಂದು ಕೆ.ಡೇವಿಸ್‌ರವರು ಅಭಿಪ್ರಾಯಪಟ್ಟಿದ್ದಾರೆ.

**2. ಜೀವನಮಟ್ಟ (Level of living)**

ಭಾರತದಲ್ಲಿ ಬಡತನ ಹೆಚ್ಚಾಗಿ ಕಂಡುಬರುತ್ತಿದ್ದು ಪ್ರತಿಶತ 50ರಷ್ಟು ಜನರು ಬಡತನ ರೇಖೆಯ ಕೆಳಗೆ ವಾಸವಾಗಿದ್ದಾರೆ. ಪ್ರಸಿದ್ಧ ಅರ್ಥಶಾಸ್ತ್ರಜ್ಞರಾದ ದಾಂಡೇಕರ್ ಮತ್ತು ರಥ್‌ರವರು ತಮ್ಮ ಸುಪ್ರಸಿದ್ಧ ಪುಸ್ತಕವಾದ 'ಭಾರತದಲ್ಲಿ ಬಡತನ' ಎಂಬುದರಲ್ಲಿ ಈ ಕೆಳಗಿನಂತೆ ಅಭಿಪ್ರಾಯಪಟ್ಟಿದ್ದಾರೆ. 1960-61ನೆಯ ವರ್ಷದಲ್ಲಿ ಬಡತನ ರೇಖೆಯು ಪ್ರತಿವ್ಯಕ್ತಿಗೆ ಪ್ರತಿ ತಿಂಗಳಿಗೆ 15 ರೂಪಾಯಿಗಳು ಅಂದರೆ ವರ್ಷಕ್ಕೆ 180 ರೂಪಾಯಿಗಳು ಇತ್ತು. ಹಾಗೂ ನಗರ ಪ್ರದೇಶಗಳಲ್ಲಿ ಪ್ರತಿಯೊಬ್ಬರಿಗೆ 22.5 ರೂಪಾಯಿಗಳಿದ್ದಿತು. ಅಂದರೆ ವರ್ಷಕ್ಕೆ 271 ರೂಪಾಯಿಗಳು, ಅವರು ವಿಶ್ಲೇಷಿಸುವ ಪ್ರಕಾರ 1960-61ನೇ ವರ್ಷಗಳಲ್ಲಿ ಪ್ರತಿಶತ 33ರಷ್ಟು ಹಳ್ಳಿಗರು ಮತ್ತು ಪ್ರತಿಶತ 49ರಷ್ಟು ಜನ ಪಟ್ಟಣಿಗರು ಬಡತನ ರೇಖೆಯ ಕೆಳಗೆ ಜೀವಿಸುತ್ತಿದ್ದಾರೆಂದು ಗುರುತಿಸಿದ್ದಾರೆ.[9] ಮೊದಲನಿಂದಲೂ ಭಾರತದಲ್ಲಿ ಹೆಪ್ಪುಗಟ್ಟಿದ ಬಡತನವಿದೆ. ಒಬ್ಬ

8. Kingsley Davis: (1951) The Population of India and Pakistan' Princetion University Press London- Page-106
9. Dandekar and Rath: (1970): Poverty in India. (New Delhi)

ವ್ಯಕ್ತಿ ಒಂದು ದಿನಕ್ಕೆ 10 ಪೈಸೆ ವ್ಯಯಮಾಡುವವರೂ ಇದ್ದಾರೆ. ಈ ಕಾರಣಕ್ಕಾಗಿ ಭಾರತೀಯರು ಬಡತನದಿಂದ ಹಣವಿಲ್ಲದೆ ವಲಸೆಹೋಗುತ್ತಿಲ್ಲ.

### 3. ಜಾತಿಪದ್ಧತಿ (Caste System)

ಭಾರತದಲ್ಲಿ ಜಾತಿಪದ್ಧತಿಯು ಪ್ರಮುಖವಾದ ಸಾಮಾಜಿಕ ವ್ಯವಸ್ಥೆಯಾಗಿದೆ. ಎಲ್ಲಾ ಕಾರ್ಯಗಳು ಜಾತಿ ಆಧಾರಿತವಾಗಿರುತ್ತವೆ. ಪ್ರತಿಯೊಂದು ಜಾತಿಯು ತನ್ನದೇ ಆದ ಭೌಗೋಳಿಕ ಕ್ಷೇತ್ರವನ್ನು ಹೊಂದಿರುತ್ತದೆ. ಉದಾಹರಣಾರ್ಥವಾಗಿ ಪ್ರತಿಯೊಂದು ಹಳ್ಳಿಯಲ್ಲಿ ಬ್ರಾಹ್ಮಣರ ಓಣಿ, ಲಿಂಗಾಯಿತರ ಓಣಿ, ಕಮ್ಮಾರರ ಓಣಿ, ಕುಂಬಾರರ ಓಣಿ, ನೇಕಾರರ ಓಣಿ ಹೀಗೆ ಪ್ರತಿಯೊಂದು ಜಾತಿ ತನ್ನದೇ ಆದ ಭೂಪ್ರದೇಶವನ್ನು ಹೊಂದಿರುತ್ತದೆ. ಈ ಸಂಗತಿಯನ್ನು ನಾವು ಇಡಿ ಭಾರತ ದೇಶದ ಮಟ್ಟದಲ್ಲಿಯೂ ಕಾಣಬಹುದು. ಭಾರತದಲ್ಲಿ ಪ್ರತಿಯೊಂದು ರಾಜ್ಯವು ಒಂದು ಅಥವಾ ಎರಡು ಜಾತಿಗಳ ಜನಸಂಖ್ಯೆಯಿಂದ ಪ್ರಭಾವಿತವಾಗಿದೆ. ಉದಾಹರಣೆಗೆ ಹರಿಯಾಣದಲ್ಲಿ ಜಾಟರು, ಪಂಜಾಬಿನಲ್ಲಿ ಶಿಖ್ಖರು, ಮಹಾರಾಷ್ಟ್ರದಲ್ಲಿ ಮರಾಠರು, ಕರ್ನಾಟಕದಲ್ಲಿ ಲಿಂಗಾಯತ ಹಾಗೂ ಒಕ್ಕಲಿಗರು, ಆಂಧ್ರದಲ್ಲಿ ರೆಡ್ಡಿ ಹಾಗೂ ಕಮ್ಮಾ ಇತ್ಯಾದಿ ಹೀಗಿರುವುದರಿಂದ ಒಂದು ರಾಜ್ಯದ ಒಂದು ಜಾತಿಗೆ ಸೇರಿದ ಜನರು ಇನ್ನೊಂದು ರಾಜ್ಯಕ್ಕೆ ವಲಸೆಹೋಗಲು ಹಿಂಜರಿಯುತ್ತಾರೆ. ಏಕೆಂದರೆ ಅಲ್ಲಿ ಬೇರೆ ಭಾಷೆಯನ್ನಾಡುವ ಹಾಗೂ ಬೇರೆ ಬೇರೆ ಜಾತಿಪದ್ಧತಿಗಳನ್ನು ಅನುಸರಿಸುವ ಜನರೊಂದಿಗೆ ಹೊಂದಿಕೊಳ್ಳಬಹುದೇ ಇಲ್ಲವೆ ಎಂಬ ಆತಂಕದಿಂದ ವಲಸೆಹೋಗಲು ಹಿಂಜರಿಯುತ್ತಾರೆ. ಪ್ರತಿಯೊಂದು ಜಾತಿಯಲ್ಲಿ ಕೆಲವು ಜಾತಿ ನಿಷೇಧಗಳಿದ್ದು ಜನರು ಅವುಗಳಿಗೆ ಬದ್ಧರಾಗಿರಬೇಕಾಗುತ್ತದೆ. ಕೆಲವು ಜಾತಿಗಳಲ್ಲಿ ಜನರು ನದಿ ದಾಟಬಾರದು, ಪರಜಾತಿಯವರೊಂದಿಗೆ ಊಟ ಉಪಚಾರ ಮಾಡಬಾರದೆಂಬ ನಿಷೇಧಗಳಿವೆ. ಆದ್ದರಿಂದ ಜನರು ಬೇರೆ ಕಡೆ ವಲಸೆ ಹೋಗುವುದಿಲ್ಲ ಎಂದು ಕೆ.ಡೇವಿಸ್‌ರವರು ಅಭಿಪ್ರಾಯಪಟ್ಟಿದ್ದಾರೆ.

### 4. ಶೀಘ್ರ ವಿವಾಹ (Early Marriage)

ಒಂದೇ ಮಾತಿನಲ್ಲಿ ಹೇಳಬೇಕೆಂದರೆ ವಲಸೆ ಒಂದು ಸಾಹಸಕ್ರಿಯೆ, ಈ ಸಾಹಸಕ್ಕೆ ಕೈಹಾಕುವವರು ಯುವಕರು. ಆದರೆ ಭಾರತದಲ್ಲಿ ಯೌವ್ವನದ ಅವಧಿ ಕಡಿಮೆ. ಏಕೆಂದರೆ ಭಾರತದಲ್ಲಿ ಮಕ್ಕಳು "ಬಾಲ್ಯಾವಸ್ಥೆಯಿಂದ ಪ್ರೌಢಾವಸ್ಥೆಗೆ ನೆಗೆಯುವ ಪ್ರಕ್ರಿಯೆ" ಹೆಚ್ಚು ಇನ್ನೂ ಬಾಲ್ಯಾವಸ್ಥೆಯಲ್ಲಿ ಇರುವಾಗಲೇ ಮದುವೆಯಾಗುವುದರಿಂದ ಬಾಲ್ಯ ಹಾಗೂ ಪ್ರೌಢಾವಸ್ಥೆಯ ನಡುವಣವಿರುವ ಯವ್ವನಾವಸ್ಥೆಯನ್ನು ಅನುಭವಿಸದಿರುವವರೆ ಹೆಚ್ಚು, ಆದ್ದರಿಂದ ಯೌವ್ವನವೂ ಇಲ್ಲ (ವಲಸೆ) ಸಾಹಸವೂ ವಲಸೆ ಇಲ್ಲದಂತಾಗುತ್ತದೆ. In India children jump from childhood to adulthood skipping youth time of advanture. ಪ್ರಾಚೀನ ಕಾಲದಿಂದಲೂ ಭಾರತದಲ್ಲಿ ಬಾಲ್ಯವಿವಾಹಗಳು ನಡೆಯುತ್ತ ಬಂದಿವೆ. ವ್ಯಕ್ತಿ ಬೇಗ ವಿವಾಹವಾಗಿ ಮಕ್ಕಳನ್ನು ಪಡೆಯುವುದರಿಂದ ಕುಟುಂಬ ನಿರ್ವಹಿಸುವ ಜವಾಬ್ದಾರಿ ಬೀಳುತ್ತದೆ. ಆದ್ದರಿಂದ ವಲಸೆಗೆ ವಿವಾಹವು ಅಡ್ಡಿಯಾಗಿದೆ. ಈ ಕಾರಣಕ್ಕಾಗಿ ವಲಸೆ ಹೋಗುವುದಿಲ್ಲ ಎಂದಿದ್ದಾರೆ.

## 5. ಭಾಷೆ ಮತ್ತು ಸಂಸ್ಕೃತಿಯಲ್ಲಿ ವೈವಿಧ್ಯತೆ (Diversity of Language and culture)

ಭಾರತವು ವಿಭಿನ್ನ ಭಾಷೆಗಳ ದೇಶವಾಗಿದ್ದು, ಸುಮಾರು 300 ಬೇರೆ ಬೇರೆ ಭಾಷೆಗಳು ಕಂಡುಬರುತ್ತವೆ. ಹೀಗಾಗಿ ಒಂದು ರಾಜ್ಯದಲ್ಲಿನ ಒಂದು ಭಾಷೆಯನ್ನಾಡುವ ಜನರು, ಇನ್ನೊಂದು ಭಾಷೆಯನ್ನಾಡುವ ನೆರೆಯ ರಾಜ್ಯಕ್ಕೂ ವಲಸೆಹೋಗಿ ಅಲ್ಲಿ ನೆಲೆಯಾಗಲು ಹಿಂಜರಿಯುತ್ತಾರೆ. ತಮಗರಿಯದ ಭಾಷೆಯನ್ನಾಡುವ ಭಿನ್ನ-ಆಚಾರಪದ್ಧತಿಗಳನ್ನು ಹೊಂದಿದ ಜನರೊಂದಿಗೆ ಹೇಗೆ ಬದುಕಿ ಬಾಳುವೆ ಮಾಡುವದು? ಎಂಬ ಪ್ರಶ್ನೆ ಅವರನ್ನು ಕಾಡುತ್ತದೆ. ಆದ್ದರಿಂದ ವಲಸೆ ಹೋಗುವುದಿಲ್ಲ.

## 6. ಶಿಕ್ಷಣದ ಕೊರತೆ (Lack of Education)

ಭಾರತವು ಹಳ್ಳಿಗಳ ನಾಡು 1991ರ ಜನಗಣತಿಯ ಪ್ರಕಾರ ಪ್ರತಿಶತ 74.28ರಷ್ಟು ಜನರು ಸುಮಾರು 5,76,000 ಸಾವಿರ ಹಳ್ಳಿಗಳಲ್ಲಿ ವಾಸವಾಗಿದ್ದಾರೆ. ಅವರಲ್ಲಿ ಪ್ರತಿಶತ 55.31ರಷ್ಟು ಜನರು ಅನಕ್ಷರಸ್ಥರಾಗಿದ್ದಾರೆ. ಸ್ವಾತಂತ್ರ್ಯ ಬಂದು 58 ವರ್ಷಗಳಾದರೂ ಇಂದಿಗೂ ಸಹ ಗ್ರಾಮಗಳಲ್ಲಿ ಅನಕ್ಷರತೆ ತಾಂಡವಾಡುತ್ತಿದೆ. ಅನಕ್ಷರತೆಯು ಮೂಡತನಕ್ಕೆ ಮೂಲ, ಮೂಡತನ ಭಯಕ್ಕೆ ಕಾರಣ ಹೀಗಾಗಿ ದಿನಪತ್ರಿಕೆಗಳನ್ನು ಓದಿ ಬೇರೆ ಸ್ಥಳಗಳಲ್ಲಿ ಯಾವ, ಯಾವ ಅವಕಾಶ, ಸವಲತ್ತುಗಳಿವೆ ಎಂದು ತಿಳಿಯದ ಹಳ್ಳಿಯ ಮುಗ್ಧರು ತಮ್ಮ ಹುಟ್ಟೂರುಗಳನ್ನು ಬಿಟ್ಟು ಬೇರೆ ಕಡೆ ಹೋಗಲು ಹಿಂಜರಿಯುತ್ತಾರೆ. ಅವರಿಗೆ "ಕಂಡರಿತ ನರಕವು ಕಂಡರಿಯದ ಸ್ವರ್ಗಕ್ಕಿಂತ ಮೇಲು" ಎಂಬ ಭಾವನೆ ಉಂಟಾಗುತ್ತದೆ. "A known hell is better than an unknown heaven".

## 7. ಸೆಳೆಯುವ ಅಂಶಗಳ ಕೊರತೆ (Lack of Pull Factors)

ಭಾರತದಲ್ಲಿ ಜನರನ್ನು ತಮ್ಮ ಮೂಲಸ್ಥಾನದಿಂದ ತಳ್ಳುವ ನಿರುದ್ಯೋಗ, ಬಡತನ, ಕಡಿಮೆ ಕೂಲಿದರ, ಮುಂತಾದವು ಹೆಚ್ಚಾಗಿ ಕಂಡುಬರುತ್ತಿದ್ದು, ಸೆಳೆಯುವ ಅಂಶಗಳ ಕೊರತೆ ಇದೆ. ಭಾರತದಲ್ಲಿ ಬಡತನ ಸರ್ವವ್ಯಾಪಿಯಾಗಿದೆ. ಕರ್ನಾಟಕದಲ್ಲಿ ಎಷ್ಟು ಬಡತನವಿದೆಯೋ, ಅಷ್ಟೆ ಬಡತನ ಮಹಾರಾಷ್ಟ್ರದಲ್ಲಿದೆ. ಹೀಗಿರುವಾಗ ಜನರು ಒಂದು ರಾಜ್ಯವನ್ನು ಬಿಟ್ಟು ಇನ್ನೊಂದು ರಾಜ್ಯಕ್ಕೆ ವಲಸೆ ಹೋಗುವದರಲ್ಲಿ ಅರ್ಥವಿಲ್ಲದಂತಾಗುತ್ತದೆ. ಅಷ್ಟೆ ಮಾತ್ರವಲ್ಲ ಕೆಲವೊಂದು ಸಲ ತಮ್ಮೂರಿನಲ್ಲಿ ಬಡತನದ ಬೇಗೆಯನ್ನು ತಾಳಲಾರದೆ ಇನ್ನೊಂದು ಕಡೆ ಗುಳೇ ಹೋದ ಜನರು ಆಪ್ರದೇಶದಲ್ಲಿಯೂ, ತಮ್ಮೂರಿನಷ್ಟು ಇಲ್ಲವೆ ಅದಕ್ಕಿಂತ ಹೆಚ್ಚಿನ ಬಡತನವಿರುವುದನ್ನು ಕಂಡ ತಾವು ಇಲ್ಲಿಗೆ ಏಕಾದರೂ ಬಂದೆವೂ ಎಂದು ಮರುಗುವುದುಂಟು. ಅವರ ಪರಿಸ್ಥಿತಿ 'ಬಾನಲಿಯಿಂದ ಬೆಂಕಿಗೆ ಬಿದ್ದ'ವರ ಪರಿಸ್ಥಿತಿಯಾಗುತ್ತದೆ.

## 8. ಅನಾರೋಗ್ಯಕರ ನಗರೀಕರಣ (Un Healthy Urbanization)

ಭಾರತದ ನಗರಪ್ರದೇಶಗಳು ಅನೇಕ ಸಮಸ್ಯೆಗಳಿಂದ ಕೂಡಿವೆ. ಕೊಳಚೆ, ಬಡತನ, ಅನಾರೋಗ್ಯ, ನಿರುದ್ಯೋಗ, ಅಪರಾಧ ಹೀಗೆ ಮುಂತಾದ ಸಮಸ್ಯೆಗಳಿರುವುದರಿಂದ ಜನರು ವಲಸೆ ಹೋಗಲು

ಹಿಂಜರಿಯುತ್ತಾರೆ. (Davis:1951:107-109)[10] ಈ ಮೇಲಿನಂತೆ ಸಮಾಜಶಾಸ್ತ್ರಜ್ಞರೂ, ಜನಸಂಖ್ಯಾಶಾಸ್ತ್ರಜ್ಞರೂ ಆದ ಕೆ.ಡೇವಿಸ್‌ರವರು ಭಾರತೀಯರು ವಲಸೆ ಹೋಗದಿರಲು ಎಲ್ಲರೂ ಒಪ್ಪುವಂತಹ ಕಾರಣಗಳನ್ನು ಕೊಟ್ಟಿದ್ದಾರೆ.

**ಭಾರತದಲ್ಲಿ ಗ್ರಾಮ-ನಗರ ವಲಸೆಯ ಗುಣ ಲಕ್ಷಣಗಳು (Characteristics of Rura-Urban Migration in India)**

ಭಾರತೀಯರು 'ಚಲನಹೀನ' ಜನರು ಎಂದು ಜನಸಂಖ್ಯಾಶಾಸ್ತ್ರಜ್ಞರು ಅಭಿಪ್ರಾಯಪಟ್ಟಿದ್ದಾರೆ. ಕೃಷಿಯಲ್ಲಿ ಹಳೆಯ ಮಾದರಿಯ ಉಪಕರಣಗಳ ಬಳಕೆ, ಬಡತನ, ಜಾತಿಪದ್ಧತಿ, ಅಸಕ್ಷರತೆ ಮೊದಲಾದ ಅಂಶಗಳು ಜನರನ್ನು ವಲಸೆಹೋಗಲು ಬಿಡುತ್ತಿಲ್ಲ. ಆದ್ದರಿಂದ ಅಂತರ್‌ರಾಷ್ಟ್ರೀಯ ವಲಸೆಯಲ್ಲಿ ಭಾರತೀಯರು ಹೆಚ್ಚಾಗಿ ಕಂಡುಬರುತ್ತಿರಲಿಲ್ಲ. ಆದರೆ ಈಗಿನ ಜಾಗತೀಕಣದ ಕಾರಣದಿಂದ ಅಂತರಾಷ್ಟ್ರೀಯ ವಲಸೆಗಳು ಬಲಗೊಳ್ಳುತ್ತಲಿವೆ. ಭಾರತದಲ್ಲಿ ಹೆಚ್ಚಾಗಿ ಗ್ರಾಮ-ನಗರ ವಲಸೆ ನಡೆಯುತ್ತಿದ್ದು ಅದರ ಲಕ್ಷಣಗಳನ್ನು ಕೆಳಗಿನಂತೆ ನೋಡಬಹುದು.

**ತಳ್ಳುವ ಅಂಶಗಳ ಪಾತ್ರ (Role of push factors)**

ಯಾವುದೇ ವಲಸೆಯಲ್ಲಿ ಸೆಳೆದುಕೊಳ್ಳುವ ಅಂಶಗಳಷ್ಟೇ ಅಲ್ಲದೆ ತಳ್ಳುವ ಅಂಶಗಳು ಮಹತ್ವದ ಪಾತ್ರ ವಹಿಸುತ್ತವೆ. ಭಾರತದಲ್ಲಿ ಗ್ರಾಮ-ನಗರ ವಲಸೆಯಲ್ಲಿ ಸೆಳೆದುಕೊಳ್ಳುವ ಅಂಶಗಳಿಗಿಂತ ತಳ್ಳುವ ಅಂಶಗಳಾದ ನಿರುದ್ಯೋಗ, ಬಡತನ, ಕಡಿಮೆ ಕೂಲಿದರ, ಜಾತಿಪದ್ಧತಿ ಮುಂತಾದವು ಹೆಚ್ಚಾಗಿ ಕಂಡುಬರುತ್ತವೆ. ಆದ್ದರಿಂದ ಇದನ್ನು ಅಸಾಮಾನ್ಯ ವಲಸೆ (Abnormal Migration) ಎಂದು ಕರೆಯುತ್ತಾರೆ.

**ಗ್ರಾಮ-ನಗರ ವಲಸೆಯಲ್ಲಿ ಜಾತಿಯ ರಚನೆಯ ಪಾತ್ರ (Caste Composition of Rural-Urban Migration)**

ವಲಸಿಗರ ಮೇಲೆ ಜಾತಿಯು ಪ್ರಭಾವಬೀರುತ್ತದೆ. ಜಾತಿಯ ಆಧಾರದ ಮೇಲೆ ವಲಸೆ ನಡೆಯುತ್ತದೆ.

**ಜಾತಿಯ ಏಣಿಶ್ರೇಣಿ ಸೂಚಿಸುವ ಪಿರಾಮಿಡ್**



ದ್ವಿಜರು (ಬ್ರಾಹ್ಮಣರು)

ಶೂದ್ರರು

ಅಂತ್ಯಜರು (ಅತೀಶೂದ್ರರು)

10. Kingsley Davis: 1951 The Population of India and Pakistan' Princetion University Press London- Page-107-109

ಭಾರತದಲ್ಲಿ ಆಯಾ ಜಾತಿಗೆ ತಕ್ಕ ಶ್ರೇಣಿ ನೀಡಲಾಗಿದೆ. ಜಾತಿಯ ಪಿರಾಮಿಡ್‌ನಲ್ಲಿ ತುತ್ತತುದಿಯಲ್ಲಿರುವ ಬ್ರಾಹ್ಮಣರು ಮತ್ತು ತಳದಲ್ಲಿರುವ ಅತೀ ಶೂದ್ರರು ಹೆಚ್ಚಾಗಿ ವಲಸೆಯಲ್ಲಿ ತೊಡಗಿದ್ದು ಕಂಡುಬರುತ್ತದೆ. ದಕ್ಷಿಣ ಭಾರತದಲ್ಲಿ ಸ್ವಾತಂತ್ರ್ಯ ನಂತರದಲ್ಲಿ ಬ್ರಾಹ್ಮಣರು ತಮ್ಮ ಸಾಮಾಜಿಕ, ರಾಜಕೀಯ ಆರ್ಥಿಕ ಸಾಮರ್ಥ್ಯಗಳನ್ನು ಕಳೆದುಕೊಂಡು ಉದ್ಯೋಗಕ್ಕಾಗಿ, ಶಿಕ್ಷಣಪಡೆಯಲು ಗ್ರಾಮಗಳಿಂದ ನಗರ ಪ್ರದೇಶಗಳಿಗೆ ವಲಸೆ ಹೋಗುತ್ತಿದ್ದಾರೆಂದು ಭಾರತೀಯ ಸಮಾಜಶಾಸ್ತ್ರಜ್ಞ Andre Beteille[11] ರವರು ತಮ್ಮ "Caste Class and powar" ಎಂಬ ಪುಸ್ತಕದಲ್ಲಿ ಅಭಿಪ್ರಾಯಪಟ್ಟಿದ್ದಾರೆ. ಇವರು ತಮಿಳುನಾಡು ರಾಜ್ಯದಲ್ಲಿರುವ ಶ್ರೀಪುರಂ ಎಂಬ ಗ್ರಾಮವನ್ನು ಅಧ್ಯಯನ ಮಾಡಿ ಈ ಅಂಶವನ್ನು ಕಂಡುಕೊಂಡಿದ್ದಾರೆ. ಶ್ರೀಪುರಂ ಗ್ರಾಮದಲ್ಲಿ ಏನು ಜರುಗುತ್ತಿದೆಯೋ, ಅದು ಇಡೀ ದಕ್ಷಿಣಭಾರತಕ್ಕೆ ಅನ್ವಯಿಸುತ್ತದೆ ಎಂದಿದ್ದಾರೆ. ಅದೇ ರೀತಿ ದಲಿತರು ಗ್ರಾಮಗಳಲ್ಲಿ ಮೇಲ್ಜಾತಿಯ ಜನರಿಂದ ಬೇಧ ಭಾವಗಳಿಗೆ, ಶೋಷಣೆಗಳಿಗೆ ಒಳಗಾಗಿ ಈ ದುಃಸ್ಥಿತಿಯಿಂದ ತಪ್ಪಿಸಿಕೊಳ್ಳಲು ಮತ್ತು ಉದ್ಯೋಗಗಳಲ್ಲಿ ಮೀಸಲಾತಿ ಸೌಲಭ್ಯ ಪಡೆಯಲು ಗ್ರಾಮಗಳಿಂದ ನಗರಪ್ರದೇಶಕ್ಕೆ ವಲಸೆಹೋಗುತ್ತಿದ್ದಾರೆ.

### ಭೂಮಿಯ ಛಿಧ್ರೀಕರಣ ಹಾಗೂ ವಲಸೆ (Fragmentation of Land and Migration)

ಭಾರತದಲ್ಲಿ ಮೊದಲು ಕುಟುಂಬದ ಎಲ್ಲಾ ಸದಸ್ಯರೂ ಕೂಡಿಕೊಂಡು ಸಾಮೂಹಿಕವಾಗಿ ಭೂಮಿ ಉಳುತ್ತಿದ್ದರು. ಇದು 1947ರ ನಂತರ ಜಾರಿಯಲ್ಲಿ ಬಂದ ಭೂಸುಧಾರಣಾ ಕಾಯಿದೆಗಳ ಪರಿಣಾಮವಾಗಿ ಭೂಮಿಯು ಛಿಧ್ರೀಕರಣಗೊಂಡವು. ಇದರಿಂದ ಜಂಟಿ ಕುಟುಂಬಗಳು ಕೂಡಾ ಒಡೆದು ವಿಭಕ್ತ ಕುಟುಂಬಗಳು ಹುಟ್ಟಿಕೊಂಡವು. ತುಂಡುಭೂಮಿಗಳಿಂದ ಕುಟುಂಬ ನಿರ್ವಹಿಸಲು ಸಾಧ್ಯವಾಗದೆ, ನಗರ ಪ್ರದೇಶಕ್ಕೆ ಉದ್ಯೋಗಕ್ಕಾಗಿ ಜನರು ವಲಸೆಹೋಗುತ್ತಿದ್ದಾರೆ.

### ವೈವಾಹಿಕ ವಲಸೆ (Marriage migration)

ಭಾರತದಲ್ಲಿ ವಿವಾಹವು ವಲಸೆಗೆ ಕಾರಣವಾಗಿದೆ. ಕೆ.ಡೇವಿಸ್[12]ರವರ ಪ್ರಕಾರ ಭಾರತದಲ್ಲಿ ಪಿತೃ ಪ್ರಧಾನ ಕುಟುಂಬಗಳು ಹೆಚ್ಚಾಗಿರುವುದರಿಂದ ವಿವಾಹದ ನಂತರ ಸ್ತ್ರೀ ಗಂಡನ ಮನೆಗೆ ಹೋಗಿ ವಾಸಿಸಬೇಕಾಗುತ್ತದೆ. ಉತ್ತರ ಭಾರತದಲ್ಲಿ ಹೊರ ಬಾಂಧವ್ಯ ವಿವಾಹಕ್ಕೆ ಪ್ರಾಧಾನ್ಯತೆ ನೀಡಿದ್ದು, ಜನರು ಬೇರೆ ಗ್ರಾಮದ ಸ್ತ್ರೀಯರನ್ನು ವಿವಾಹವಾಗುತ್ತಾರೆ. ಈ ಕಾರಣಕ್ಕಾಗಿ ಹಿಂದೂ ಸ್ತ್ರೀಯರ-ವಲಸೆಗೆ ವಿವಾಹವು ಕಾರಣವಾಗಿದೆ. ವೈವಾಹಿಕ ವಲಸೆಯು ಹೆಚ್ಚಾಗಿ ಪೂರ್ವ ಮತ್ತು ಉತ್ತರ ಭಾರತದಲ್ಲಿ ಹಿಂದೂಗಳ ವಿವಾಹಕ್ಕೆ ಯೋಗ್ಯಕಾಲವಾದ ಫೆಬ್ರವರಿ 22ನೆಯ ತಾರೀಖಿನಿಂದ ಮಾರ್ಚ್ 2ನೇ ತಾರೀಖಿನವರೆಗೆ ನಡೆಯುತ್ತವೆ. ಹೊರಬಾಂಧವ್ಯ ವಿವಾಹಪದ್ಧತಿ, ಮುಸ್ಲಿಂ ಹಾಗೂ ಇತರ ಪಂಗಡಗಳಲ್ಲಿ ಬಲಿಷ್ಟವಾಗಿಲ್ಲವಾದ್ದರಿಂದ ವೈವಾಹಿಕ ವಲಸೆ ಇವರಲ್ಲಿ ಅಷ್ಟೊಂದು ಕಂಡುಬರುವುದಿಲ್ಲ. ಹಿಂದೂಗಳಲ್ಲಿ

---

11. Andre Beteille: 1966: "Caste Class and power" (Bombay)
12. K. Davis: 1951 The Population of India and Pakistan' Princetion University Press London- P -106

ಸ್ತ್ರೀಯರ ಚೊಚ್ಚಲ ಹೆರಿಗೆಯು ಹೆಣ್ಣಿನ ತಂದೆ-ತಾಯಿಗಳ ಮನೆಯಲ್ಲಿ ಆಗಬೇಕೆಂಬ ನಿಯಮವಿರುವುದರಿಂದ ಚೊಚ್ಚಲ ಮಗು ತಾಯಿಯ ತವರುಮನೆಯಲ್ಲಿ ಜನಿಸುತ್ತದೆ. ಈ ಕಾರಣಕ್ಕಾಗಿ ಹಿಂದೂ ಚೊಚ್ಚಲ ಮಗು ಕೂಡಾ ವಲಸೆಗೆ ಗುರಿಯಾಗುತ್ತದೆ.

**ವಲಸೆಯ ದಿಕ್ಕುಗಳು (Directions of migration)**

ಭಾರತದಲ್ಲಿ ನಡೆಯುವ ವಲಸೆಯ ದಿಕ್ಕುಗಳನ್ನು ಕೆಳಗಿನಂತೆ ಗುರುತಿಸಲಾಗಿದೆ.




ಉತ್ತರಭಾರತದಲ್ಲಿ ವಲಸೆಗಳು ಪಶ್ಚಿಮದಿಂದ ಪೂರ್ವಕ್ಕೆ ನಡೆಯುವವು. ಇದಕ್ಕೆ ಕಾರಣವೆಂದರೆ ಕಲ್ಕತ್ತಾದಲ್ಲಿನ ಕೈಗಾರಿಕಾ ಕೇಂದ್ರಗಳು ಹಾಗೂ ಅಸ್ಸಾಂನಲ್ಲಿ ಚಹಾ ತೋಟಗಳು ಕೇಂದ್ರಿಕೃತವಾಗಿದ್ದರಿಂದ ಜನರು ಉದ್ಯೋಗ ಪಡೆಯಲು ಪಶ್ಚಿಮ ಭಾರತದಿಂದ ಪೂರ್ವ ಭಾರತದ ಪ್ರದೇಶಗಳಿಗೆ ವಲಸೆ ಹೋಗುತ್ತಾರೆ. ಮಹಾರಾಷ್ಟ್ರದ ಮುಂಬೈ ನಗರ ವಲಸೆಗಾರರನ್ನು ಸೆಳೆಯುವ ಒಂದು ಪ್ರಮುಖ ಕೇಂದ್ರ ಹೀಗಾಗಿ ಉತ್ತರ ಭಾರತದ ಅನೇಕರು ಮುಂಬೈಗೆ ವಲಸೆ ಹೋಗುವರು. ದಕ್ಷಿಣ ಭಾರತದ ವಲಸಿಗರು ದಕ್ಷಿಣದಿಂದ ಉತ್ತರಕ್ಕೆ ಹಾಗೂ ಪೂರ್ವದಿಂದ ಪಶ್ಚಿಮಕ್ಕೆ ವಲಸೆಹೋಗಲು ಕಾರಣವೆಂದರೆ ಮುಂಬೈನಗರ. ಭಾರತದಲ್ಲಿ ನಡೆಯುವ ವಲಸೆಯ ದಿಕ್ಕುಗಳನ್ನು ಈ ಮುಂದಿನ ನಕ್ಷೆ(ಪುಟ.107)ಯಿಂದ ತಿಳಿದುಕೊಳ್ಳಬಹುದು.

**ಲಿಂಗ ಹಾಗೂ ವಲಸೆ (Sex and migration)**

ಲಿಂಗವು ವಲಸೆಯ ಮೇಲೆ ಪ್ರಭಾವ ಬೀರುತ್ತದೆ. ಗ್ರಾಮಗಳಿಂದ-ನಗರಗಳಿಗೆ ಹೆಚ್ಚಾಗಿ ಅವಿವಾಹಿತ ಯುವಕರು ವಲಸೆಹೋಗುತ್ತಾರೆ. ವಲಸೆಯಲ್ಲಿ ಸ್ತ್ರೀಯರ ಸಂಖ್ಯೆ ಕಡಿಮೆ ಕಂಡುಬರುತ್ತದೆ. ಸ್ತ್ರೀಯರು ಹೆಚ್ಚಾಗಿ ಸಮೀಪದ ಹಳ್ಳಿ-ಪಟ್ಟಣಗಳಿಗೆ ನಡೆಯುವ ವಲಸೆಯಲ್ಲಿ ಕಂಡುಬರುತ್ತಾರೆ. ವಲಸಿಗರ ಪ್ರಕಾರಗಳನ್ನು ಈ ಕೆಳಗಿನ ಕೋಷ್ಟಕದ ಸಹಾಯದಿಂದ ತಿಳಿದುಕೊಳ್ಳಬಹುದು.

# ಭಾರತದಲ್ಲಿ ವಲಸೆಯ ದಿಕ್ಕುಗಳನ್ನು ಸೂಚಿಸುವ ನಕಾಶೆ

## ಭಾರತ




(ಆಧಾರ : K.Davis : 'The Population of India and Pakistan')

**ಕೋಷ್ಟಕ 20, ಭಾರತದಲ್ಲಿ ವಲಸಿಗರ ಪ್ರಕಾರಗಳು (Migration Stream's in India)**

| ವಲಸೆಯ ಪ್ರಕಾರಗಳು | ಗಂಡು | ಹೆಣ್ಣು | ಒಟ್ಟು |
|---|---|---|---|
| ಗ್ರಾಮದಿಂದ ಗ್ರಾಮಕ್ಕೆ | 56.7 | 81.3 | 73.7 |
| ಗ್ರಾಮದಿಂದ ನಗರಕ್ಕೆ | 25.7 | 9.7 | 14.6 |
| ನಗರದಿಂದ ನಗರಕ್ಕೆ | 13.00 | 5.8 | 8.1 |
| ನಗರದಿಂದ ಗ್ರಾಮಕ್ಕೆ | 4.6 | 3.2 | 3.6 |
| ಒಟ್ಟು | 100.00 | 100.00 | 100.00 |

(Source: Ashish Bose: 1973: Studies in India's Urbanization 1901-1971)

### ಋತುಮಾನದ ವಲಸೆ (Seasonal migration)

ಭಾರತದಲ್ಲಿ ಹೆಚ್ಚಾಗಿ ಋತುಮಾನದ ವಲಸಿಗರು ಕಂಡುಬರುತ್ತಾರೆ. ಇವರು ಕೆಲ ಋತುಗಳಲ್ಲಿ ವಲಸೆ ಹೋಗಿ ಕೆಲವು ದಿನಗಳ ನಂತರ ಮತ್ತೆ ಗ್ರಾಮಗಳಿಗೆ ಮರಳಿ ಬರುತ್ತಾರೆ. ಈ ವಲಸೆಗಳು ಹೆಚ್ಚಾಗಿ ಸುಗ್ಗಿಯ ಕಾಲಗಳನ್ನು ಅವಲಂಬಿಸಿದೆ. ಸುಗ್ಗಿಯ ಕಾಲ ಪ್ರಾರಂಭವಾಗಿ ಗ್ರಾಮಗಳಲ್ಲಿ ಉದ್ಯೋಗಾವಕಾಶಗಳು ಹೆಚ್ಚುವುದರಿಂದ, ಇನ್ನಿತರ ಗ್ರಾಮಗಳಿಂದ ಜನರು ವಲಸೆ ಬಂದು ಸುಗ್ಗಿ ಮುಗಿಯುವವರೆಗೆ ಅಲ್ಲಿದ್ದು, ಅಲ್ಪ ಸ್ವಲ್ಪ ಹಣ-ಕಾಳು ಗಳಿಸಿ ಸುಗ್ಗಿ ಮುಗಿದ ನಂತರ ತಿರುಗಿ ತಮ್ಮತಮ್ಮ ಊರುಗಳನ್ನು ಸೇರಿಕೊಳ್ಳುತ್ತಾರೆ.

ಅಧ್ಯಾಯ ೪

---

## ವಿಜಾಪುರ ಜಿಲ್ಲೆಯಲ್ಲಿ ವಲಸೆಗಳು ಋತುಮಾನದ ವಲಸೆ ತಳ್ಳುವ ಅಂಶಗಳ ಪಾತ್ರ (Migratory Movements in Bijapur District Seasonal Migration Role of Push Factors)

ಪ್ರಾಚೀನ ಕಾಲದಿಂದಲೂ ಒಂದಿಲ್ಲ ಒಂದು ಕಾರಣಕ್ಕಾಗಿ ಜಗತ್ತಿನಾದ್ಯಂತ ಮಾನವ ಜನಾಂಗದ ಚಲನ ವಲನಗಳು ನಡೆಯುತ್ತ ಬಂದಿವೆ. ಅದರಲ್ಲಿಯೂ ಔದ್ಯೋಗಿಕ ಕ್ರಾಂತಿಯ ನಂತರದಲ್ಲಿ ಆರ್ಥಿಕ ರಂಗದಲ್ಲಿ ಆದ ಬದಲಾವಣೆಗಳಿಂದ ಗ್ರಾಮೀಣ ಸಮಾಜದ ಜನರು ತಮ್ಮ ಆರ್ಥಿಕತೆಯನ್ನು ಸುಧಾರಿಸಿಕೊಳ್ಳಲು ಹೆಚ್ಚಿನ ಸಂಖ್ಯೆಯಲ್ಲಿ ವಲಸೆಯಲ್ಲಿ ತೊಡಗಿದ್ದಾರೆ. ಆದರೆ ಇದಕ್ಕೆ ವಿರುದ್ಧವಾಗಿ ಭಾರತೀಯರ ಸ್ಥಿತಿ-ಗತಿ ಬೇರೆ ಸ್ವರೂಪದ್ದಾಗಿದೆ. ಜನಸಂಖ್ಯಾಶಾಸ್ತ್ರಜ್ಞ ಕೆ. ಡೇವಿಸ್‌ರವರು ಅವಲೋಕಿಸಿದಂತೆ "ಒಕ್ಕಲುತನದ ನೆಂಟು, ಜಾತಿ ಪದ್ಧತಿ, ಬಾಲ್ಯವಿವಾಹ, ಅವಿಭಕ್ತ ಕುಟುಂಬ, ವೈವಿಧ್ಯಮಯ ಭಾಷೆಗಳು, ಸಂಸ್ಕೃತಿ ಹಾಗೂ ಶಿಕ್ಷಣದ ಕೊರತೆಯ ಕಾರಣಗಳಿಂದ ಹೆಚ್ಚಿನ ಸಂಖ್ಯೆಯ ಭಾರತೀಯರು ವಲಸೆ ಹೋಗುತ್ತಿಲ್ಲ ಎಂದು 1931ರ ಜನಸಂಖ್ಯಾ ಅಂಕಿ-ಅಂಶಗಳನ್ನು ವಿಶ್ಲೇಷಿಸಿ ಅಭಿಪ್ರಾಯ ಪಟ್ಟಿದ್ದಾರೆ."[1] ಆದರೆ ಕೆಲವು ಪರಿಸ್ಥಿತಿಗಳಲ್ಲಿ ಜನರು ಅನಿವಾರ್ಯವಾಗಿ ವಲಸೆ ಹೋಗಬೇಕಾಗಿತ್ತು. "ಕೆಲವು ಪರಿಸ್ಥಿತಿಗಳು ವಲಸೆ ಹೋಗಲು ಅನುಕೂಲಕರವಾಗಿವೆ. ಅವು ಧಾರ್ಮಿಕ ಹಬ್ಬಗಳು, ಉತ್ಸವಗಳು, ಜಾತ್ರೆಗಳು (Commerial Fairs) ಘೋರ ಬರಗಾಲ, ಸಾಮಾನ್ಯ ಯುದ್ಧಗಳು ಹಾಗೂ ದಯಯಿಲ್ಲದ ತೆರಿಗೆಗಳು ಮುಂತಾದವು ಜನರ ವಲಸೆಗಳಿಗೆ ಉತ್ತೇಜನ ಕೊಡುತ್ತವೆ. ಇದರ ಜೊತೆಗೆ ಬ್ರಿಟಿಷರು ತಂದ ಇನ್ನಿತರ ಬದಲಾವಣೆಗಳಾದ ಒಳ್ಳೆಯ ಸಂಚಾರ (ಪ್ರಯಾಣ) ಸೌಕರ್ಯಗಳು ಹಾಗೂ ಸಂಪರ್ಕ ವಹಿವಾಟು ಹೆಚ್ಚಿನ ಶಿಕ್ಷಣ, ಜಾತಿ ಹಾಗೂ ಕುಟುಂಬದಲ್ಲಿಯ ಐಕ್ಯತೆಯ ಕ್ಷೀಣಿಸುವಿಕೆ, ಬೃಹತ್ ಕೈಗಾರಿಕೆಗಳ ಬೆಳವಣಿಗೆ, ನಗರಗಳ ಬೆಳವಣಿಗೆ, ನೀರಾವರಿ ಸೌಲಭ್ಯಗಳ ವಿಸ್ತರಣೆ, ಭದ್ರತೆಯಲ್ಲಿಯ ಸುಧಾರಣೆ ಮುಂತಾದ ಸೌಕರ್ಯಗಳಿಂದ ಭಾರತದಲ್ಲಿ ಆಂತರಿಕ ವಲಸೆ ನಡೆಯುತ್ತಿದೆ. ಈ ಬದಲಾವಣೆ ನಡೆದರೂ, ಆಂತರಿಕ ವಲಸೆಗಳಲ್ಲಿ ಹೆಚ್ಚಳವಾದರೂ ಸಂಖ್ಯಾ ಶಾಸ್ತ್ರೀಯ ಅಂಕಿ-ಅಂಶಗಳನ್ನು ಒದಗಿಸುವಲ್ಲಿ ವಿಫಲವಾಗಿದೆ"[2] ಎಂದಿದ್ದಾರೆ. ಕಾರಣಾಂತರಗಳಿಂದ ಅಕೃತ್ರಿಮ ಆಂತರಿಕ ವಲಸೆಯು ಸ್ಥಿರವಾಗಿದೆ. ಆದರೆ ಆರ್ಥಿಕ ತೊಂದರೆಗಳಿಂದ ಜನರು ಹೆಚ್ಚಾಗಿ ವಲಸೆ ಹೋಗುತ್ತಿದ್ದಾರೆ.

---

1. Kingsley Devis: The Populaton of India and Pakistan, Princeton University Press, Newyork, (1951) Pg.108
2. ಅದೇ ಪುಟ 108

ಕಡಿಮೆ ಉದ್ಯೋಗಾವಕಾಶಗಳಿರುವ ಸಮುದಾಯದ ಜನರು ಹೆಚ್ಚು ಆರ್ಥಿಕ ಅವಕಾಶಗಳಿರುವ, ಉದ್ಯೋಗಾವಕಾಶಗಳಿರುವ ಪ್ರದೇಶಗಳಿಗೆ ತಮ್ಮ ಆರ್ಥಿಕ ಸ್ಥಿತಿ ಸುಧಾರಿಸಿಕೊಳ್ಳಲು ವಲಸೆ ಹೋಗುತ್ತಾರೆ. Bulsara ಕಂಡುಕೊಂಡಂತೆ ಮೂಲಸ್ಥಳದ ಅತೃಪ್ತಿದಾಯಕ ಆರ್ಥಿಕ ಪರಿಸ್ಥಿತಿಗಳು ಮುಖ್ಯವಾಗಿ ಜನರನ್ನು ನಗರ ಪ್ರದೇಶಗಳಿಗೆ ವಲಸೆ ಹೋಗುವಂತೆ ಪ್ರಚೋದಿಸುತ್ತವೆ."[3] ಗ್ರಾಮೀಣ ಸಮುದಾಯದ ಕೆಳಮಟ್ಟದ ಆರ್ಥಿಕ ಪರಿಸ್ಥಿತಿಗಳು ಆಂತರಿಕ ವಲಸೆಗೆ ಕಾರಣವಾಗಿವೆ. ವಲಸೆಯ ಕಾರಣಗಳು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಬೇರೆ ಬೇರೆಯಾಗಿರುತ್ತವೆ. ಕೆಲವು ಪ್ರದೇಶಗಳಲ್ಲಿ ವೈಯಕ್ತಿಕ, ರಾಜಕೀಯ, ಆರ್ಥಿಕ, ನೈಸರ್ಗಿಕ ಒತ್ತಡಗಳಿಂದ ಜನರು ವಲಸೆ ಹೋದರೆ, ಇನ್ನೂ ಕೆಲವು ಪ್ರದೇಶಗಳಲ್ಲಿ ನಗರ ಜೀವನಕ್ಕೆ, ಅನುಕೂಲಕರವಾದ ಆರ್ಥಿಕ ಅವಕಾಶಗಳಿಗೆ ಆಕರ್ಷಿತರಾಗಿ ಜನರು ವಲಸೆ ಹೋಗುತ್ತಾರೆ. ಮೂಲಸ್ಥಳದಲ್ಲಿಯ ಅನಾನುಕೂಲಕರವಾದ ಸ್ಥಿತಿ-ಗತಿಗಳು ಜನರನ್ನು ವಲಸೆಗೆ ತಳ್ಳಿದರೆ ವಲಸೆ ಹೋಗುವ ಸ್ಥಳದಲ್ಲಿಯ ಅನುಕೂಲಕರವಾದ ಸ್ಥಿತಿ-ಗತಿಗಳು ಜನರನ್ನು ಆಕರ್ಷಿಸಿ ಚಲನ-ವಲನೆಗೆ ಪ್ರೋತ್ಸಾಹಿಸುತ್ತವೆ.

Dhenkeyರವರು ತಮ್ಮ ಹುಬ್ಬಳ್ಳಿ ನಗರದ ಅಧ್ಯಯನದಲ್ಲಿ ನಗರ ಪ್ರದೇಶದಲ್ಲಿಯ ಉದ್ಯೋಗ ಸಿಗುವ ಒಳ್ಳೆಯ ಸುಸಂಧಿಗಳು, ಉತ್ತಮ ಉದ್ಯೋಗ ಅಥವಾ ಉತ್ತಮ ವ್ಯಾಪಾರ, ಬರಗಾಲ, ತುಂಡುಭೂಮಿ ಕಡಿಮೆ ಆದಾಯ ಮುಂತಾದವುಗಳು ವಲಸೆಗೆ ಕಾರಣವಾಗುತ್ತವೆಂದು ಅಭಿಪ್ರಾಯ ಪಟ್ಟಿದ್ದಾರೆ."[4] ಇದೇ ಪ್ರಕಾರವಾಗಿ ಮಜುಮದಾರರವರು ವಲಸೆಗೆ ಈ ಕೆಳಗಿನ ಕಾರಣಗಳನ್ನು ನೀಡಿದ್ದಾರೆ. "ಕಡಿಮೆ ಸಾಗುವಳಿ ಭೂಮಿ, ಕುಟುಂಬದಲ್ಲಿಯ ವಾಗ್ವಾದಗಳು, ಸಹಾಯ ಮಾಡುವ ಗೆಳೆಯರು ಹಾಗೂ ಸಂಬಂಧಿಕರು, ವ್ಯಾಪಾರದಲ್ಲಿ ನಷ್ಟ, ಆಕರ್ಶಕ ನಗರಜೀವನ, ನಿರುದ್ಯೋಗ, ವರ್ಗಾವಣೆ, ಹಿರಿಯ ವಲಸೆಗಾರರ ಜೊತೆ ಇನ್ನಿತರ ಸದಸ್ಯರು ವಲಸೆ ಹೋಗುವಿಕೆ, ಉದ್ಯೋಗದ ಹುಡುಕಾಟ, ರಾಜಕೀಯ ಅಂಶಗಳು ಮುಂತಾದವು ವಲಸೆಗೆ ಕಾರಣವಾಗುತ್ತವೆ."[5] ಸಾಮಾನ್ಯವಾಗಿ ಗ್ರಾಮೀಣ ಪ್ರದೇಶದಲ್ಲಿಯ ಆರ್ಥಿಕ ಕೊರತೆ, ನಿರುದ್ಯೋಗ, ಕಡಿಮೆ ಕೂಲಿ, ತುಂಡುಭೂಮಿ, ಒಣಬೇಸಾಯ, ಬರಗಾಲ ನಗರ ಪ್ರದೇಶಗಳಲ್ಲಿ ವಾಸವಾಗುವ ಬಯಕೆಗಳು, ಸೌಕರ್ಯಗಳು, ಜಾತಿಯ ದಬ್ಬಾಳಿಕೆ ಮುಂತಾದವು ಜನರನ್ನು ವಲಸೆ ಹೋಗಲು ತಳ್ಳುತ್ತವೆ. ಆದರೆ ಬಿಜಾಪುರ ಜಿಲ್ಲೆಯ ಜನರ ವಲಸೆಗೆ ಮುಖ್ಯವಾಗಿ ಬರಗಾಲ ಕಾರಣವಾಗಿದ್ದು, ಈ ಪ್ರದೇಶದಲ್ಲಿ ಮೇಲಿಂದ ಮೇಲೆ ಬರಗಾಲ ಸಂಭವಿಸುವುದರಿಂದ ಇಲ್ಲಿಯ ಜನರು ಹೆಚ್ಚಾಗಿ ಉದ್ಯೋಗ ಅರಸಿಕೊಂಡು ನಗರ ಪ್ರದೇಶಗಳಿಗೆ ವಲಸೆ ಹೋಗುತ್ತಾರೆ.

---

3. J.F. Bulsara: (1964) Problems of Rapid Urbanisation in India, Popular Prakashan, Bombay, Pg. 103.
4. B.R.B. Dhenkey: 'Hubli City', A Study of Urban Economic Life, K.U Dharawad, (1959), Pg. 44 -51.
5. D.N. Majumdar: (1960) 'Social Contours of an Industrial City, Asia Publishing House, Bombay, Pg. 73.

**ವಿಜಾಪುರ ಜಿಲ್ಲೆಯ ಜನರನ್ನು ವಲಸೆಗೆ ತಳ್ಳುವ ಅಂಶಗಳು:**

ಇತರ ಜಿಲ್ಲೆಗಳಿಗೆ ಹೋಲಿಸಿದರೆ ವಿಜಾಪುರ ಜಿಲ್ಲೆಯು ಭಿನ್ನವಾದ ಆರ್ಥಿಕ ಸ್ಥಿತಿ-ಗತಿಗಳನ್ನು ಹೊಂದಿದೆ. ಈ ಜಿಲ್ಲೆ ನೀರಾವರಿ ಸೌಲಭ್ಯಗಳಿಂದ ವಂಚಿತವಾಗಿದ್ದು ಮೇಲಿಂದ ಮೇಲೆ ಬರಗಾಲಕ್ಕೆ ತುತ್ತಾಗುವುದರಿಂದ ಇದರ ಪರಿಣಾಮ ಜನರ ಆರ್ಥಿಕತೆಯ ಮೇಲೆ ಉಂಟಾಗುತ್ತದೆ. ಜನರ ಆರ್ಥಿಕತೆಯ ಮೇಲೆ ಪ್ರಭಾವ ಬೀರುವ ಕೆಲವು ಅಂಶಗಳನ್ನು ಈ ಮುಂದಿನಂತೆ ನೋಡಬಹುದು.

ವಿಜಾಪುರ ಐತಿಹಾಸಿಕವಾಗಿ ಪ್ರಸಿದ್ಧ ಜಿಲ್ಲೆಯಾಗಿದ್ದು, ಇಲ್ಲಿ ಅನೇಕ ಶ್ರೀಮಂತ ಮನೆತನಗಳು ರಾಜ್ಯಬಾರ ಮಾಡಿವೆ. ಐತಿಹಾಸಿಕವಾಗಿ ಪ್ರಸಿದ್ಧ ಪಡೆದ ಜಿಲ್ಲೆ ಆರ್ಥಿಕವಾಗಿ ಹಿನ್ನಡೆ ಸಾಧಿಸಿದೆ. ಸಾಮಾನ್ಯ ಜನರ ಆರ್ಥಿಕತೆ ಸುಧಾರಿಸಲು ಯಾರೂ ಅಗತ್ಯ ಕ್ರಮಗಳನ್ನು ಕೈಕೊಂಡಿಲ್ಲ. ಮೊಗಲ ಅರಸರ ಆಡಳಿತಕ್ಕೆ ಒಳಪಟ್ಟ ವಿಜಾಪುರದ ಆರ್ಥಿಕ ಪರಿಸ್ಥಿತಿಯನ್ನು ಈ ಮುಂದಿನಂತೆ ನೋಡಬಹುದು. ಮೊಗಲರಾಜ-ಮಹಾರಾಜರ ಆಡಳಿತದಲ್ಲಿದ್ದ ಪ್ರದೇಶಗಳಲ್ಲಿ ವಾಸವಾಗಿದ್ದ ಜನಸಾಮಾನ್ಯರ ಸ್ಥಿತಿ-ಗತಿಗಳು ಕಡು ಬಡತನಗಳಿಂದ ಕೂಡಿದ್ದವು. ಆ ಕಾಲದ ವಿಷಮ ಆರ್ಥಿಕ ಪರಿಸ್ಥಿತಿಯನ್ನು ಕುರಿತು ಶ್ರೀವಾಸ್ತವ ಈ ಕೆಳಗಿನಂತೆ ವಿವರಿಸಿದ್ದಾರೆ. "ಮೊಗಲರ ಆಡಳಿತಕ್ಕೆ ಒಳಪಟ್ಟ ಪ್ರದೇಶಗಳು ಸಂಪದ್ಭರಿತವಾಗಿದ್ದವು. ಆಳರಸರು ಸಂಪತ್ತು ಹಾಗೂ ಸಮೃದ್ಧಿಯಲ್ಲಿ ಓಡಾಡುತ್ತಿದ್ದರು. ಅಲ್ಲದೆ ಅಲ್ಲಿ ವಾಸವಾಗಿದ್ದ ಮಧ್ಯಮವರ್ಗದ ಜನರು, ಜಮೀನುದಾರರು, ವ್ಯಾಪಾರಸ್ಥರು ಅರಮನೆಯ ಸೇವೆಯಲ್ಲಿದ್ದ ಅಧಿಕಾರವರ್ಗದ ಜನರು ಮತ್ತು ಉಳಿದ ಅಧಿಕಾರಿಗಳು ಸಂತೃಪ್ತಿಯ ವಿಲಾಸಮಯ ಜೀವನ ನಡೆಸುತ್ತಿದ್ದರು. ಆದರೆ ಸಾಮಾನ್ಯ ಜನರು ಹಾಗೂ ಕೆಳವರ್ಗದ ಕೆಲಸ-ಕಾರ್ಯ ಮಾಡುವವರು ಬಡವರಾಗಿದ್ದರು. ಇವರು ಹುಲ್ಲಿನ ಹೊದಿಕೆಯುಳ್ಳ ಮಣ್ಣಿನ ಮನೆಗಳಲ್ಲಿ ವಾಸಿಸುತ್ತಿದ್ದಥು. ಅವರ ಹತ್ತಿರ ವಿಶೇಷ ವಸ್ತುಗಳು, ಬಟ್ಟೆ-ಬರೆಗಳು ಇರಲಿಲ್ಲ. ಅವರ ಹತ್ತಿರ ಕೇವಲ ಹೊರಸಿನಂತಹ ಸಾಧನಗಳಿದ್ದವು. ಮತ್ತು ಗ್ರಾಮಾಂತರ ಪ್ರದೇಶಗಳಲ್ಲಿ ವೈದ್ಯಕೀಯ ಸೌಕರ್ಯಗಳಿರಲಿಲ್ಲ. ಹೀಗೆ ಮೊಗಲರ ಕಾಲದಲ್ಲಿ ಜನಸಾಮಾನ್ಯರ ಆರ್ಥಿಕ ಪರಿಸ್ಥಿತಿಯು ಬಹಳ ಚಿಂತಾಜನಕವಾಗಿತ್ತು. ಈ ಸ್ಥಿತಿಗೆ ಉದ್ಯಮಶೀಲತೆಯ ಕೊರತೆಯಾಗಲಿ, ಜನರಲ್ಲಿ ಮಿತವ್ಯಯದ ಕೊರತೆಯಾಗಲಿ ಕಾರಣವೆಂದು ಪರಿಗಣಿಸಲಾಗದು. ಅದರಂತೆ ಉತ್ತಮ ಪ್ರಮಾಣದ ಉದ್ಪಾದನೆಯ ಕೊರತೆಯನ್ನಾಗಲಿ ಕಾಣಲಾಗದು. ಆದರೆ ದೋಷಪೂರಿತವಾದ ವ್ಯವಸ್ಥೆ ಹಾಗೂ ಸರಕಾರದ ಅನ್ಯಾಯದ ಕರಧೋರಣೆಗಳು ಈ ಪರಿಸ್ಥಿತಿಗೆ ಮುಖ್ಯ ಕಾರಣವಾಗಿದ್ದವು."[6] ಹೀಗೆ ವಿವಿಧ ರಾಜಮನೆತನಗಳ ದುರಾಡಳಿತದ ಹಾಗೆ ಮೊಗಲರ ಆಡಳಿತದಲ್ಲಿಯೂ, ಜನರ ಆರ್ಥಿಕ ಸ್ಥಿತಿ-ಗತಿಗಳು ಸುಧಾರಿಸದೆ ಬಡತನದಲ್ಲಿ ಬದುಕಿದರು. ಮೊಗಲರ ಸೈನಿಕರಿಗೆ ಆಹಾರ ಧಾನ್ಯ ಪೂರೈಸುವ ಉದ್ಯೋಗ ಮಾಡುತ್ತ ಅವರ ಹಿಂದೆ ವಿಜಾಪುರಕ್ಕೆ ವಲಸೆ ಬಂದ ಲಂಬಾಣಿಗರ ಆರ್ಥಿಕ ಸ್ಥಿತಿ-ಗತಿಗಳು ಕೆಳಮಟ್ಟದ್ದಾಗಿದ್ದವು ಎಂಬುದು ಸ್ಪಷ್ಟವಾಗುತ್ತದೆ.

---

6. A.L. Srivastava, in R.C. Majumdar (ed) 'The Maughal Empire', Bombay (1974), Pg. 735.

**ನೀರಾವರಿ ಸೌಲಭ್ಯಗಳು:**

ರಾಜ್ಯದ ಉಳಿದ ಜಿಲ್ಲೆಗಳಿಗೆ ಹೋಲಿಸಿದರೆ ವಿಜಾಪುರ ಜಿಲ್ಲೆಯು ಒಣ ಪ್ರದೇಶವಾಗಿದೆ "ವಿಜಾಪುರ ಜಿಲ್ಲೆಯನ್ನು ಪಂಚನದಿಗಳ ಬೀಡು, ಕರ್ನಾಟಕದ ಪಂಜಾಬ ಎಂದು ಕರೆದಿರುವುದು ಸೂಕ್ತವಾಗಿದ್ದರೂ, ನೀರಾವರಿ ಸೌಲಭ್ಯದಿಂದ ತುಂಬಾ ಹಿಂದುಳಿದ ಜಿಲ್ಲೆ ಇದಾಗಿದೆ."[7] ಜಿಲ್ಲೆಯಲ್ಲಿ ಐದು ನದಿಗಳು ಹರಿದರೂ, ಬೃಹತ್ ನೀರಾವರಿಯ ಯೋಜನೆಗಳನ್ನು ಕೈಕೊಂಡಿಲ್ಲವಾದ್ದರಿಂದ ಇಲ್ಲಿಯ ಭೂಮಿಯು ಹೆಚ್ಚಾಗಿ ನೀರಾವರಿ ಸೌಲಭ್ಯಗಳಿಗೆ ಒಳಪಟ್ಟಿಲ್ಲ. ಜನರು ಕೃಷಿಗಾಗಿ ಮಳೆಯನ್ನೇ ಅವಲಂಬಿಸಿದ್ದಾರೆ. ಆದ್ದರಿಂದ ಜಿಲ್ಲೆಯ ಹೆಚ್ಚಿನ ಭೂಮಿ ಒಣಬೇಸಾಯಕ್ಕೆ ಒಳಪಟ್ಟಿದೆ. ಇಲ್ಲಿಯ ರೈತರು ಅಲ್ಪಸ್ವಲ್ಪ ನೀರಾವರಿಗಾಗಿ ಭಾವಿ, ಕೊಳವೆಭಾವಿ ಹಾಗೂ ಕೆರೆಗಳನ್ನು ಅವಲಂಬಿಸಿದ್ದಾರೆ. ಬರಗಾಲ ಸಂಭವಿಸಿದಾಗ ಕೆರೆಭಾವಿಗಳು ಬತ್ತಿಹೋಗಿ ಜನರ ಆರ್ಥಿಕ ಪರಿಸ್ಥಿತಿಗಳು ದುಸ್ಥರವಾಗಿ ವಲಸೆ ಹೋಗುವುದು ಅನಿವಾರ್ಯವಾಗುತ್ತದೆ. ಪ್ರಸ್ತುತ ಬಸವನ ಬಾಗೇವಾಡಿ ತಾಲ್ಲೂಕಿನ ಆಲಮಟ್ಟಿ ಹತ್ತಿರ ಕೃಷ್ಣಾನದಿಗೆ ಅಡ್ಡಲಾಗಿ ಅಣೆಕಟ್ಟು ನಿರ್ಮಾಣ ಮಾಡುತ್ತಿದ್ದು, ಕೆಲಸ ಪೂರ್ಣಗೊಂಡಾಗ ಬಸವನಬಾಗೇವಾಡಿ, ಮುದ್ದೇಬಿಹಾಳ, ಇಂಡಿ, ಸಿಂದಗಿ, ತಾಲ್ಲೂಕುಗಳಿಗೆ ನೀರಾವರಿ ಸೌಲಭ್ಯ ದೊರಿಯಲಿದ್ದು, ಇದು ಜನರ ಆರ್ಥಿಕ ಪ್ರಗತಿಗೆ ಕಾರಣವಾಗಲಿದೆ. ಆದರೆ ಪ್ರಸ್ತುತ ಜಿಲ್ಲೆಯಲ್ಲಿ ಮುಖ್ಯವಾಗಿ ಒಣಬೇಸಾಯವಿದೆ.

ವಿಜಾಪುರ ಜಿಲ್ಲೆಯಲ್ಲಿ ಒಟ್ಟು 17,12348 ಹೆಕ್ಟೇರ್ ಭೌಗೋಳಿಕ ಕ್ಷೇತ್ರವಿದೆ. ಅದರಲ್ಲಿ 1996-99ನೇ ಸಾಲಿನಲ್ಲಿ 13,69,641 ಹೆಕ್ಟೇರ್ ನಿವ್ವಳ ಭೂಮಿ ಬಿತ್ತನೆಯಾಗಿತ್ತು. ಇದರಲ್ಲಿ ಎಲ್ಲಾ ಮೂಲಗಳಿಂದ 2,89747 ಹೆಕ್ಟೇರ್ ಭೂಮಿ ಮಾತ್ರ ನೀರಾವರಿಗೆ ಒಳಪಟ್ಟಿದೆ. 1977-78 ರಿಂದ 1996-97ರವರೆಗೆ ವಿವಿಧ ಮೂಲಗಳಿಂದ ನಿವ್ವಳ ನೀರಾವರಿ ಪ್ರದೇಶವನ್ನು ಮುಂದಿನ ಕೋಷ್ಠಕದ ಸಹಾಯದಿಂದ ತಿಳಿದುಕೊಳ್ಳಬಹುದು.

**ಕೋಷ್ಠಕ 21, ವಿಜಾಪುರ ಜಿಲ್ಲೆಯ ನಿವ್ವಳ ನೀರಾವರಿ ಭೂಮಿ (ಹೆಕ್ಟೇರ್‌ಗಳಲ್ಲಿ).**

| ವಿವಿಧ ನಿರಾವರಿ ಮೂಲ | | | | | | |
|---|---|---|---|---|---|---|
| ವರ್ಷ | ಕಾಲುವೆ | ಕೆರೆಗಳು | ಬಾವಿಗಳು | ಇತರೆ | ಎಲ್ಲಾ ಮೂಲ ಗಳಿಂದ | ಸಾಗುವಳಿಯಾದ ನಿವ್ವಳ ಪ್ರದೇಶ |
| 1977-78 | 32,822 | 7,766 | 53,933 | 9,307 | 1,03,828 | 13,73,136 |
| 1978-79 | 32,416 | 8,638 | 65,250 | 9,663 | 1,15,967 | 13,69,248 |
| 1979-80 | 19,292 | 5,837 | 65,285 | 11,604 | 1,02,018 | 13,09,309 |
| 1980-81 | 17,282 | 2,718 | 66,099 | 14,830 | 1,00,929 | 11,68,033 |

7. ಡಾ. ಮುನಿಸ್ವಾಮಿ, (ಸಂ). 1999: ಭಾರತದ ಗೆಜೆಟೀಯರ್ ಕರ್ನಾಟಕ ರಾಜ್ಯ, 'ವಿಜಾಪುರ ಜಿಲ್ಲೆ' ಪುಟ-616

| | | | | | | |
|---|---|---|---|---|---|---|
| 1981-82 | 23,804 | 7,080 | 75,414 | 20,913 | 1,27,211 | 13,98,324 |
| 1993-94 | 69,281 | 9,357 | 1,21,165 | 1,08,555 | 3,08,358 | 13,51,908 |
| 1995-96 | 71,117 | 7,056 | 1,02,148 | 1,01,266 | 2,81,587 | 13,12,417 |
| 1996-97 | 67,001 | 7,153 | 1,08,875 | 1,06,718 | 2,89,747 | 13,69,641 |

ಆಧಾರ ವಿಜಾಪುರ ಜಿಲ್ಲಾ ಆರ್ಥಿಕ ಸಮೀಕ್ಷೆ 1980-81 ಮತ್ತು 1982-83 ಕರ್ನಾಟಕ ಅಂಕಿ ಅಂಶಗಳ ನೋಟ 1994-95 ಮತ್ತು 1996-97.

1977-78ನೇ ಸಾಲಿನಲ್ಲಿ 13,73,136 ಹೆಕ್ಟೇರ್ ಪ್ರದೇಶ ನಿವ್ವಳ ಸಾಗುವಳಿಗೆ ಒಳಪಟ್ಟಿದೆ. ಇದರಲ್ಲಿ ಕೇವಲ 1,03,828 ಹೆಕ್ಟೇರ್ ಭೂಮಿ ಮಾತ್ರ ನಿವ್ವಳ ನೀರಾವರಿಗೆ ಒಳಪಟ್ಟಿದೆ. 1996-97ನೇ ಸಾಲಿನಲ್ಲಿ ಒಟ್ಟು 13,69,641 ಹೆಕ್ಟೇರ್ ಭೂಮಿ ಒಟ್ಟು ಸಾಗುವಳಿ ಮಾಡಲಾಗಿದೆ. ಇದರಲ್ಲಿ 2,89,747 ಹೆಕ್ಟೇರ್ ಪ್ರದೇಶ ನೀರಾವರಿಗೆ ಒಳಪಟ್ಟಿದೆ. ಒಟ್ಟು ನೀರಾವರಿ ಕ್ಷೇತ್ರದ ಮೂಲಗಳೆಂದರೆ ಕಾಲುವೆಗಳ ಮೂಲಗಳಿಂದ 67,001 ಹೆಕ್ಟೇರ್, ಕೆರೆಗಳ ಮೂಲಗಳಿಂದ 7,153 ಹೆಕ್ಟೇರ್, ಭಾವಿಗಳಿಂದ 1,08,875 ಹೆಕ್ಟೇರ್ ಹಾಗೂ ಕೊಳವೆಭಾವಿಗಳಿಂದ 23,370 ಹೆಕ್ಟೇರ್, ಏತ ನಾರಾವರಿಯಿಂದ 5,287 ಹೆಕ್ಟೇರ್ ಕೊನೆಯದಾಗಿ ಇತರೆ ಮೂಲಗಳಿಂದ 78,061 ಹೆಕ್ಟೇರ್ ಭೂಮಿ ನೀರಾವರಿಗೆ ಒಳಪಟ್ಟಿದೆ. ಈ ಅಂಕಿ-ಅಂಶಗಳ ಪ್ರಕಾರ ವಿಜಾಪುರ ಜಿಲ್ಲೆಯ ಹೆಚ್ಚಿನ ಭೂಮಿ ಒಣಬೇಸಾಯಕ್ಕೆ ಒಳಪಟ್ಟಿದೆ. ನೀರಾವರಿಗೆ ಒಳಪಟ್ಟ ಸ್ವಲ್ಪ ಭೂಮಿ ಸಣ್ಣ ನೀರಾವರಿ ಸೌಲಭ್ಯಗಳಿಗೆ ಒಳಪಟ್ಟಿದೆ. ಬರಗಾಲ ಸಂಭವಿಸಿದಾಗ ಈ ನೀರಾವರಿಯ ಮೂಲಗಳು ಬತ್ತಿ ಹೋಗಿ ಜಿಲ್ಲೆಯ ಹೆಚ್ಚಿನ ಸಂಖ್ಯೆಯ ಕೂಲಿಕಾರರು ವಲಸೆ ಹೋಗುತ್ತಾರೆ.

**ಜೀವನ ಮಟ್ಟ:**

ಜಿಲ್ಲೆಯಲ್ಲಿ ಜನರ ಜೀವನ ಮಟ್ಟವು ಸಾಮಾನ್ಯವಾಗಿ ಅವರ ಆದಾಯ ಮತ್ತು ಖರ್ಚು-ವೆಚ್ಚಗಳ ಮೇಲೆ ಅವಲಂಬಿಸಿದೆ. ವಿಜಾಪುರ ಜಿಲ್ಲೆ ಮೊದಲಿನಿಂದಲೂ ಕೃಷಿ ಪ್ರಧಾನವಾದ ಪ್ರದೇಶವಾಗಿದ್ದು, ಕೃಷಿ ಅವಲಂಬಿಸಿದವರ ಜೀವನ ಮಟ್ಟದಲ್ಲಿ ಹೆಚ್ಚು ಸುಧಾರಣೆಗಳು ಕಂಡುಬಂದಿಲ್ಲ. ಅದರಲ್ಲಿಯೂ ಕೃಷಿ ಕಾರ್ಮಿಕರ ಸ್ಥಿತಿ, ತೀರಾ ಕೆಳಮಟ್ಟದ್ದಾಗಿದೆ. "ಒಕ್ಕಲುತನವು ಮಳೆಯೊಂದಿಗೆ ಆಡುವ ಜೂಜಾಟವಾಗಿದೆ. ಹಾಗೂ ಈ ಜಿಲ್ಲೆಯ ಕೃಷಿಯ ಇತಿಹಾಸದಲ್ಲಿ ಕ್ಷಾಮ, ಬೆಳೆಗಳು ಬೆಳೆಯದಿರುವಿಕೆ ಮತ್ತು ಇತರ ಪಿಡುಗುಗಳಿಂದ ಆವರ್ತಿತವಾಗಿತ್ತು."[8] ಬರಗಾಲ, ನೀರಾವರಿಯ ಸೌಲಭ್ಯಗಳ ಕೊರತೆಯಿಂದ ಜನರು ಆರ್ಥಿಕವಾಗಿ ಸುಧಾರಿಸಲು ಸಾಧ್ಯವಾಗಿಲ್ಲ. 1961ರ ಜನಗಣತಿಯ ವರದಿಯ ಪ್ರಕಾರ ಮಧ್ಯಮವರ್ಗದ ಕುಟುಂಬಗಳ ಒಟ್ಟು ವಾರ್ಷಿಕ ಆದಾಯ ರೂಪಾಯಿ 4,500ರಿಂದ ರೂಪಾಯಿ 5000 ಇದ್ದಿತು. 1960ರಲ್ಲಿ ಕೈಕೊಂಡ ಒಂದು ಸಮೀಕ್ಷೆಯ ಪ್ರಕಾರ 12 ಸದಸ್ಯರು ವಾಸವಾಗಿರುವ ಕುಟುಂಬದ ಸರಾಸರಿ ವೆಚ್ಚ ಈ ಮುಂದಿನಂತಿತ್ತು. ಬಟ್ಟೆಗಾಗಿ ರೂಪಾಯಿ 600, ಧಾರ್ಮಿಕ ಕಾರ್ಯಗಳಿಗಾಗಿ ಮಾಡುವ ಖರ್ಚು ರೂಪಾಯಿ 350, ವೈದ್ಯಕೀಯ ವೆಚ್ಚ ರೂಪಾಯಿ 100, ಮನೆ ದುರಸ್ತಿ ವೆಚ್ಚ ಒಟ್ಟು 200 ರೂಪಾಯಿ,

8. ಡಾ. ಮುನಿಸ್ವಾಮಿ, (ಸಂ) 1999: ಭಾರತದ ಗೆಜೆಟೀಯರ್ ಕರ್ನಾಟಕ ರಾಜ್ಯ, 'ವಿಜಾಪುರ ಜಿಲ್ಲೆ' ಪುಟ-633

ಕಾಳುಕಡಿ 80ರಿಂದ ರೂಪಾಯಿ 90, ಇತರ ಖರ್ಚು ರೂಪಾಯಿ 200, ಆಳುಗಳಿಗೆ ಕೂಲಿ ಕೊಡಲು ವಾರ್ಷಿಕ 300 ರೂಪಾಯಿ, ಹೀಗೆ ಹಣ ವೆಚ್ಚ ಮಾಡಿದ ನಂತರವೂ ಹಣ ಉಳಿಯುತ್ತಿತ್ತು. ಉಳಿದ ಹಣದಿಂದ ಗೃಹೋಪಯೋಗಿ ವಸ್ತುಗಳನ್ನು ಕೊಂಡುಕೊಳ್ಳುತ್ತಿದ್ದರು. ಮಧ್ಯಮವರ್ಗದ ರೈತ ಕುಟುಂಬದ ವಾರ್ಷಿಕ ಆದಾಯ ರೂಪಾಯಿ 180 ರಿಂದ 200 ಇದ್ದಿತು. 4 ಜನರು ವಾಸವಾಗಿರುವ ಒಂದು ಮಧ್ಯಮವರ್ಗದ ಕುಟುಂಬ (ಇಬ್ಬರು ವಯಸ್ಕರು ಹಾಗೂ ಎರಡು ಮಕ್ಕಳು)ದಲ್ಲಿನ ತಿಂಗಳ ವೆಚ್ಚ ಈ ರೀತಿ ಇದ್ದಿತು. ಬಟ್ಟೆ ರೂಪಾಯಿ 200, ವೈದ್ಯಕೀಯ ಖರ್ಚು ರೂಪಾಯಿ 75, ಮಾಸಿಕ ಕಾಳು ಕಡ್ಡಿ ರೂಪಾಯಿ 35, ಇತರ ವಸ್ತುಗಳು 35 ರೂಪಾಯಿ, ವಿದ್ಯಾಭ್ಯಾಸ, ರೂಪಾಯಿ 3 ರಿಂದ 5, ಬೀಡಿ, ಪಾನ, ಅಡಿಕೆ, ರೂಪಾಯಿ 2, ಈ ಕುಟುಂಬಗಳ ವರಮಾನಕ್ಕಿಂತ ಖರ್ಚು, ಹೆಚ್ಚಾಗುತ್ತಿದ್ದರಿಂದ ತುರ್ತು ವೆಚ್ಚ ಬಂದಾಗ ಅನಿವಾರ್ಯವಾಗಿ ಸಾಲ ಮಾಡಬೇಕಾದ ಪರಿಸ್ಥಿತಿ ಇರುತ್ತಿತ್ತು. ನಂತರದ ಅವಧಿಗಳಲ್ಲಿ ಜನರ ಜೀವನಮಟ್ಟವು ಸುಧಾರಿಸುತ್ತಾ ಬಂದಿದ್ದು ಆದರೂ ಇತರೇ ಪಟ್ಟಣಗಳೊಂದಿಗೆ ಹೋಲಿಸಿದಾಗ ವಿಜಾಪುರ, ಬಾಗಲಕೋಟ ಜಿಲ್ಲೆಗಳು ಇನ್ನೂ ಹೆಚ್ಚು ಪ್ರಗತಿ ಆಗಬೇಕಾಗಿದೆ.

1997ರಲ್ಲಿನ ಆರ್ಥಿಕ ಸ್ಥಿತಿ-ಗತಿಗಳನ್ನು ಪರಿಶೀಲಿಸಿದಾಗ ಆರ್ಥಿಕವಾಗಿ ಬಡವರು ಎಂದರೆ, ವಾರ್ಷಿಕ ಸುಮಾರು 1000 ರೂಪಾಯಿ ವರಮಾನ ಇರುವವರು ಎಂದು ಪರಿಗಣಿಸಲಾಗಿತ್ತು. ಈ ಹಣವು ನಾಲ್ಕು ಜನರು ಇರುವ ಕುಟುಂಬಕ್ಕೆ ಕೇವಲ ಆಹಾರ ಮತ್ತು ಬಟ್ಟೆಗೆ ಮಿತವಾಗಿ ಬಳಸಲು ಸಾಕಾಗುವಂತಿತ್ತು. ಈ ರೀತಿ ವಿಜಾಪುರ ಜಿಲ್ಲೆಯ ಜನ ಜೀವನವು ಭಿನ್ನವಾಗಿದೆ. ವರಮಾನ ತೆರಿಗೆ ಕೊಡುವವರು ಶ್ರೀಮಂತರ ಗುಂಪಿಗೆ ಸೇರಿದವರಾಗಿದ್ದಾರೆ. ಹೆಚ್ಚಿನ ವರಮಾನ ಎಂದರೆ ಸುಮಾರು ಮಾಸಿಕ 2000 ರಿಂದ 25,000 ರೂಪಾಯಿಗಿಂತ ಹೆಚ್ಚು ವರಮಾನ ಹೊಂದಿದವರು. ಮಧ್ಯಮವರ್ಗಕ್ಕೆ ಸೇರಿದವರ ವರಮಾನ ಮಾಸಿಕ 10,000 ರೂಪಾಯಿಗಳಿಂದ 15,000 ರೂಪಾಯಿಗಳ ವರೆಗೆ ಇತ್ತು ಈ ಗುಂಪಿಗೆ ಹಿರಿಯ ಅಧಿಕಾಗಳು, ವಕೀಲರು ವೈದ್ಯರು ಮೊದಲಾದವರು ಸೇರುತ್ತಾರೆ. ಕೆಳ ಮಧ್ಯಮವರ್ಗಕ್ಕೆ ಸೇರಿದವರೆಂದರೆ ಮಾಸಿಕ ವರಮಾನ ಸುಮಾರು ರೂಪಾಯಿ 2,500 ರಿಂದ 8000 ರವರೆಗೆ ಇರುವವರು ಈ ಗುಂಪಿನ ಜನಸಂಖ್ಯೆ ಹೆಚ್ಚಿದ್ದು, ಇವರ ಜೀವನ ಮಟ್ಟ ಸಾಧಾರಣವಾಗಿದೆ. ಅಂದರೆ ಆಹಾರ, ಬಟ್ಟೆ, ಸಣ್ಣ ವಸತಿ ಇದ್ದವರು. ಈ ಗುಂಪಿನಲ್ಲಿ ಐಷಾರಾಮಿ ವಸ್ತುಗಳು ಹೆಚ್ಚು ಕಂಡುಬರುವುದಿಲ್ಲ ಬಡವರು ಎಂದರೆ ಬಡತನ ರೇಖೆಗಿಂತಲೂ ಕೆಳಗಿನವರು ಅಂದರೆ ಮಾಸಿಕ ವರಮಾನ, 1,500ಕ್ಕಿಂತಲೂ ಕಡಿಮೆ ಇರುವವರು ಎಂದು ಪರಿಗಣಿಸಲಾಗಿದೆ. ಜಿಲ್ಲೆಯಲ್ಲಿ ಈ ಗುಂಪಿಗೆ ಸೇರಿದವರು ಸುಮಾರು ಪ್ರತಿಶತ 35ರಿಂದ 40ರಷ್ಟು ಜನರು ಇರಬಹುದೆಂದು ಅಂದಾಜು ಮಾಡಲಾಗಿದೆ."[9] ಮೇಲಿನ ಸಮೀಕ್ಷೆಯ ಪ್ರಕಾರ ವಿಜಾಪುರ ಜಿಲ್ಲೆಯಲ್ಲಿನ ಜನರ ಜೀವನಮಟ್ಟವು ಕೆಳಮಟ್ಟದ್ದಾಗಿದೆ. ಹಾಗೂ ಹೆಚ್ಚಿನ ಸಂಖ್ಯೆಯಲ್ಲಿ ಜನರು ಕಡುಬಡವರಾಗಿದ್ದಾರೆ.

**ಉದ್ಯೋಗಗಳು:**

ವಿಜಾಪುರ ಜಿಲ್ಲೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಜನರು ಕೃಷಿಯಲ್ಲಿ ತೊಡಗಿದ್ದಾರೆ. ಆದ್ದರಿಂದ ಇವರ ತಲಾ ಆದಾಯ ಕಡಿಮೆ ಇದೆ. ಕೃಷಿ ಮೂಲಗಳಿಂದ ಆದಾಯ ನಿರಂತರವಾಗಿ ಬರದೆ ಇರುವುದರಿಂದ

---

9. ಡಾ. ಮುನಿಸ್ವಾಮಿ, ಸಂ. (1999): ಭಾರತದ ಗೆಜೆಟೀಯರ್ ಕರ್ನಾಟಕ ರಾಜ್ಯ, 'ವಿಜಾಪುರ ಜಿಲ್ಲೆ' ಪುಟ-633

ಹೆಚ್ಚಿನ ಸಂಖ್ಯೆಯಲ್ಲಿ ಜನರು ಬಡವರಾಗಿದ್ದಾರೆ. ಕೃಷಿಯು ಸಾಕಷ್ಟು ಸಂಖ್ಯೆಯ ಜನರಿಗೆ ಉದ್ಯೋಗ ಒದಗಿಸುತ್ತಿದ್ದರೂ, ಈ ಕ್ಷೇತ್ರದಲ್ಲಿ ಔದ್ಯೋಗಿಕ ಕ್ಷೇತ್ರಕ್ಕಿಂತ ಹೆಚ್ಚು ನಿರುದ್ಯೋಗ ಕಂಡುಬರುತ್ತದೆ. ಅರೆ ಉದ್ಯೋಗವು (ಕಡಿಮೆ ಅವಧಿಯ ಉದ್ಯೋಗ) ಈ ಜಿಲ್ಲೆಯಲ್ಲಿ ಆವರಿಸಿದೆ. "1991ರ ಜನಗಣತಿಯ ಪ್ರಕಾರ ವಿಜಾಪುರ ಜಿಲ್ಲೆಯಲ್ಲಿ ಒಟ್ಟು 29,27,990ರಷ್ಟು ಜನಸಂಖ್ಯೆ ಇದ್ದು ಇವರಲ್ಲಿ ಒಟ್ಟು ಕೆಲಸಗಾರರು ಪ್ರತಿಶತ 37.92ರಷ್ಟಿದ್ದಾರೆ. ಆದರೆ 1961ರ ಜನಗಣತಿಯ ಪ್ರಕಾರ ಒಟ್ಟು ಜನಸಂಖ್ಯೆಯಲ್ಲಿ ಪ್ರತಿಶತ 47.46ರಷ್ಟು ಜನರು ಕೆಲಸಗಾರರಾಗಿದ್ದಾರೆ. ಕೃಷಿಯಲ್ಲಿ ತೊಡಗಿದ ಕೆಲಸಗಾರರ ಸಂಖ್ಯೆ ಅನುಕ್ರಮವಾಗಿ 1961, 1971, 1981 ಹಾಗೂ 1991ರಲ್ಲಿ ಶೇ 74.67, ಶೇ 75.50, ಶೇ 71.78, ಶೇ 72.81, ಶೇ 74.67ರಷ್ಟಿದ್ದಾರೆ."[10]

ಈ ಅಂಕಿ-ಅಂಶಗಳ ಪ್ರಕಾರ ವಿಜಾಪುರ ಜಿಲ್ಲೆಯು ಕೃಷಿ ಪ್ರಧಾನ ಜಿಲ್ಲೆಯಾಗಿದೆ. ಹಾಗೂ ಕೃಷಿಯು ಎಲ್ಲಾ ಜನರಿಗೆ ಪೂರ್ಣಕಾಲಿಕ ಉದ್ಯೋಗ ಒದಗಿಸಿಲ್ಲ. ಇದರ ಜೊತೆಗೆ ಕೈಗಾರಿಕೆ, ವ್ಯಾಪಾರ, ಸಾರಿಗೆ, ವಾಣಿಜ್ಯ ವೃತ್ತಿಗಳನ್ನು ಕೆಲವರು ಅವಲಂಬಿಸಿದ್ದಾರೆ. ಕಾರ್ಮಿಕರಿಗೆ ವರ್ಷದ ಎಲ್ಲಾ ತಿಂಗಳುಗಳಲ್ಲಿ ಉದ್ಯೋಗ ಸಿಗದೆ ಇರುವುದರಿಂದ ಉಪಜೀವನಕ್ಕಾಗಿ ವಲಸೆ ಹೋಗುತ್ತಾರೆ.

**ಕೋಷ್ಟಕ 22, ವಿಜಾಪುರ ಜಿಲ್ಲೆಯಲ್ಲಿ ತಾಲ್ಲೂಕುವಾರು ಕೃಷಿ ಕಾರ್ಮಿಕರು. (1991ರ ಜನಗಣತಿಯಂತೆ)**

| ಪುರುಷರು, ಮಹಿಳೆಯರು ಹಾಗೂ ಒಟ್ಟು ಜನರು ಎಂದು ಪ್ರತ್ಯೇಕವಾಗಿ ಕೊಟ್ಟಿದೆ. | | | | | | | |
|---|---|---|---|---|---|---|---|
| ತಾಲ್ಲೂಕು / ಜಿಲ್ಲೆ | | ಮುಖ್ಯ ಕೆಲಸಗಾರರು | ಒಟ್ಟು ಜನ ಸಂಖ್ಯೆಯ ಶೇ. | ಸಾಗುವಳಿ ದಾರರು | ಮುಖ್ಯ ಕೆಲಸಗಾರರ ಶೇ. | ಕೃಷಿ ಕಾರ್ಮಿಕರು | ಮುಖ್ಯ ಕೆಲಸಗಾರರ ಶೇ. |
| 1 | 2 | 3 | 4 | 5 | 6 | 7 | 8 |
| ಬಾದಾಮಿ | ಒಟ್ಟು | 99,656 | 38.83 | 30,591 | 30.7 | 39,908 | 40.05 |
| | ಪುರುಷರು | 66,259 | 51.53 | 24,851 | 33.51 | 17,768 | 26.82 |
| | ಮಹಿಳೆಯರು | 33,397 | 26.09 | 5,740 | 17.19 | 22,140 | 66.29 |
| ಬಾಗಲ ಕೋಟೆ | ಒಟ್ಟು | 75,064 | 35.91 | 18,314 | 24.40 | 30,420 | 40.53 |
| | ಪುರುಷರು | 50,784 | 47.82 | 14,650 | 28.85 | 13,327 | 26.24 |
| | ಮಹಿಳೆಯರು | 24,280 | 23.61 | 3,664 | 15.09 | 17,093 | 70.40 |
| ಬಸವನ ಬಾಗೇವಾಡಿ | ಒಟ್ಟು | 1,01,740 | 39.57 | 32,991 | 32.43 | 52,699 | 51.80 |
| | ಪುರುಷರು | 65,842 | 50.39 | 27,378 | 41.58 | 24,716 | 37.54 |
| | ಮಹಿಳೆಯರು | 35,898 | 28.39 | 5,613 | 15.64 | 27,983 | 77.95 |

10. ಡಾ. ಮುನಿಸ್ವಾಮಿ, (ಸಂ) 1999: ಭಾರತದ ಗೆಜೆಟೀಯರ್ ಕರ್ನಾಟಕ ರಾಜ್ಯ, 'ವಿಜಾಪುರ ಜಿಲ್ಲೆ' ಪುಟ-633

| | | | | | | | |
|---|---|---|---|---|---|---|---|
| ವಿಜಾಪುರ | ಒಟ್ಟು | 1,61,192 | 34.08 | 42,814 | 26.56 | 60,550 | 37.56 |
| | ಪುರುಷರು | 1,18,386 | 48.30 | 35,083 | 29.63 | 31,870 | 26.92 |
| | ಮಹಿಳೆಯರು | 42,806 | 18.78 | 7,731 | 18.06 | 28,680 | 67.00 |
| ಬೀಳಗಿ | ಒಟ್ಟು | 52,935 | 44.48 | 18,616 | 35.17 | 26,373 | 49.82 |
| | ಪುರುಷರು | 32,014 | 53.81 | 13,751 | 42.95 | 11,734 | 36.65 |
| | ಮಹಿಳೆಯರು | 20,921 | 35.16 | 4,865 | 23.25 | 14,639 | 69.97 |
| ಹುನಗುಂದ | ಒಟ್ಟು | 93,921 | 38.29 | 28,318 | 30.15 | 34,120 | 36.33 |
| | ಪುರುಷರು | 61,907 | 50.46 | 26,529 | 35.40 | 14,092 | 22.76 |
| | ಮಹಿಳೆಯರು | 32,014 | 26.11 | 6,404 | 20.00 | 20,028 | 62.56 |
| ಇಂಡಿ | ಒಟ್ಟು | 1,22,171 | 40.30 | 43,617 | 35.70 | 61,494 | 50.33 |
| | ಪುರುಷರು | 79,850 | 50.93 | 34,637 | 43.38 | 30,467 | 38.15 |
| | ಮಹಿಳೆಯರು | 42,320 | 28.92 | 8,790 | 21.22 | 31,027 | 73.32 |
| ಜಮಖಂಡಿ | ಒಟ್ಟು | 1,19,973 | 35.35 | 39,211 | 32.68 | 39,660 | 33.06 |
| | ಪುರುಷರು | 90,704 | 52.49 | 32,635 | 35.98 | 22,915 | 25.26 |
| | ಮಹಿಳೆಯರು | 29,269 | 17.57 | 6,576 | 22.47 | 16,745 | 57.21 |
| ಮುದ್ದೇ | ಒಟ್ಟು | 83,480 | 38.08 | 26,113 | 31.28 | 39,786 | 47.66 |
| ಬಿಹಾಳ | ಪುರುಷರು | 54,116 | 49.05 | 21,324 | 39.40 | 17,684 | 32.68 |
| | ಮಹಿಳೆಯರು | 29,364 | 26.96 | 4,789 | 16.31 | 22,105 | 75.28 |
| ಮುಧೋಳ | ಒಟ್ಟು | 82,760 | 42.54 | 31,468 | 38.02 | 36,179 | 43.72 |
| | ಪುರುಷರು | 53,624 | 54.40 | 23,163 | 43.20 | 17,797 | 33.19 |
| | ಮಹಿಳೆಯರು | 29,624 | 30.66 | 8,305 | 28.50 | 18,797 | 63.09 |
| ಸಿಂದಗಿ | ಒಟ್ಟು | 1,08,294 | 38.55 | 36,844 | 34.02 | 56,437 | 52.11 |
| | ಪುರುಷರು | 71,680 | 49.65 | 31,027 | 43.29 | 27,480 | 38.34 |
| | ಮಹಿಳೆಯರು | 36,614 | 26.82 | 5,817 | 15.89 | 28,957 | 79.09 |
| ವಿಜಾಪುರ | ಒಟ್ಟು | 11,10,288 | 37.92 | 3,49,994 | 31.52 | 4,79,040 | 43.15 |
| | ಪುರುಷರು | 7,52,675 | 50.48 | 2,81,376 | 37.38 | 2,30,616 | 30.64 |
| | ಮಹಿಳೆಯರು | 3,57,613 | 24.89 | 68,618 | 19.19 | 2,48,424 | 69.47 |

(ಮೂಲ: ವಿಜಾಪುರ ಜಿಲ್ಲಾ ಜನಗಣತಿ ವರದಿ, 1991, ಜನಗಣತಿ ನಿರ್ದೇಶನಾಲಯ, ಬೆಂಗಳೂರು)

**ಕೂಲಿದರ (Wage Rate)**

ವಿಜಾಪುರ ಜಿಲ್ಲೆಯ ಭೂಮಾಲಿಕರು ವರ್ಷದ ಅವಿಶ್ರಾಂತ ಋತುಗಳಲ್ಲಿ ಅಂದರೆ ಬೀಜ ಬಿತ್ತುವ ಹಾಗೂ ಬೆಳೆ ಕಟಾವು ಮಾಡುವ ಸಂದರ್ಭಗಳಲ್ಲಿ ಅನಿಶ್ಚಿತ ಭೂಕೂಲಿಕಾರರನ್ನು ನೇಮಕ ಮಾಡಿಕೊಳ್ಳುತ್ತಾರೆ. ಇವರಲ್ಲಿ ಸಾಮಾನ್ಯವಾಗಿ ಪುರುಷರು ಭಾರವುಳ್ಳ ಕಠಿಣ ಕೆಲಸ ಕಾರ್ಯಗಳನ್ನು ಮಾಡುತ್ತಾರೆ. ಮಹಿಳೆಯರು ಕಠಿಣವಲ್ಲದ ಕೆಲಸಕಾರ್ಯಗಳಾದ ಕಳೆ ತೆಗೆಯುವುದು, ತೆನೆಗಳನ್ನು ಕುಟ್ಟುವುದು, ಕಾವಲು ಕಾಯುವ ಉದ್ಯೋಗಗಳನ್ನು ಮಾಡುತ್ತಾರೆ. ಕೂಲಿಕಾರರು ದಿನಗೂಲಿಯ ಆಧಾರದ ಮೇಲೆ ನೇಮಕಗೊಂಡಿರುತ್ತಾರೆ. ಕೂಲಿಯನ್ನು ಸಾಮಾನ್ಯವಾಗಿ ಹಣದ ಬದಲಾಗಿ ಕಾಳು-ಕಡಿಗಳನ್ನು ಪಡಿಯುತ್ತಾರೆ. ದಿನಗೂಲಿ ಕೆಲಸಗಾರರು, ಜೀತದಾಳುಗಳು ಪಡೆಯುವ ಇನ್ನಿತರ ಸೌಲಭ್ಯಗಳನ್ನು ಪಡೆಯುವುದಿಲ್ಲ. ಜಿಲ್ಲೆಯಲ್ಲಿ ಕೂಲಿದರಗಳಲ್ಲಿಯೂ, ವ್ಯತ್ಯಾಸ ಕಂಡುಬರುತ್ತದೆ. ನೀರಾವರಿ ಸೌಲಭ್ಯಗಳಿರುವ ಬಾಗಲಕೋಟೆ, ಜಮಖಂಡಿ, (ಪ್ರಸ್ತುತ ಬಾಗಲಕೋಟೆ ಜಿಲ್ಲೆಗೆ ಸೇರಿವೆ) ವಿಜಾಪುರ ತಾಲ್ಲೂಕುಗಳಲ್ಲಿ ಕೂಲಿದರ ಹೆಚ್ಚಾಗಿದೆ. ಉಳಿದ ಒಣಬೇಸಾಯ ಹೆಚ್ಚಿರುವ ಪ್ರದೇಶಗಳಾದ ಇಂಡಿ, ಸಿಂದಗಿ, ಬಸವನ ಬಾಗೇವಾಡಿ ಹಾಗೂ ಮುದ್ದೇಬಿಹಾಳ ಈ ಭಾಗದ ಕೂಲಿಕಾರರು ಕಡಿಮೆ ಕೂಲಿ ಪಡೆಯುತ್ತಾರೆ. "ಕೃಷಿ ಕಾರ್ಯಗಳಲ್ಲಿ ತೊಡಗಿದ ವಿವಿಧ ಕೂಲಿಕಾರರು 1959ರಲ್ಲಿ ಈ ಮುಂದಿನಂತೆ ಕೂಲಿ ಪಡೆಯುತ್ತಿದ್ದರು. ಒಬ್ಬ ವ್ಯಕ್ತಿ ದಿನಕ್ಕೆ ಕನಿಷ್ಠ 1 ರಿಂದ ರೂಪಾಯಿ 1.75 ಪೈಸೆ ಕೂಲಿ ಪಡೆಯುತ್ತಿದ್ದನು. ನೀರಾವರಿಯ ಕೆಲಸ ಕಾರ್ಯಗಳಿಗಾಗಿ ಕನಿಷ್ಠ ರೂಪಾಯಿ 1.25 ರಿಂದ 1.75 ಪೈಸೆ ಕೂಲಿ ಪಡೆಯುತ್ತಿದ್ದರು."[11] ಈಗ ಪುರುಷರಿಗೆ ದಿನಕ್ಕೆ 40 ರೂಪಾಯಿ, ಹಾಗೂ ಸ್ತ್ರೀಯರು 20 ರೂಪಾಯಿ ಕೂಲಿ ಪಡೆಯುತ್ತಿದ್ದು ಇದು ಸ್ಥಿರವಾಗಿದೆ. ಇದರಿಂದ ಕೂಲಿಕಾರರಿಗೆ ಕುಟುಂಬದ ಖರ್ಚು-ವೆಚ್ಚ ನಿರ್ವಹಿಸಲು ಕಷ್ಟದಾಯಕವಾಗಿದೆ.

**ಜೀತದಾಳುಗಳು (Bonded Labour)**

ಪಾಶ್ಚಿಮಾತ್ಯ ದೇಶಗಳಲ್ಲಿಯ ಗುಲಾಮಗಿರಿ ಪದ್ಧತಿಯ ಹಾಗೆ ಭಾರತದಲ್ಲಿ ಜೀತಪದ್ಧತಿ ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿದೆ. ಜಾತಿಪದ್ಧತಿಗೂ ಜೀತಪದ್ಧತಿಗೂ ಅನ್ಯೂನ್ಯ ಸಂಬಂಧವಿದ್ದು ಹೆಚ್ಚಾಗಿ ಕೆಳಜಾತಿಯ ಜನರು ಜೀತದಾಳುಗಳಾಗಿದ್ದಾರೆ. ಪರಿಶಿಷ್ಟ ಜಾತಿ ಮತ್ತು ಜನಾಂಗಗಳ ಆಯೋಗದ 24ನೆಯ ವರದಿಯಲ್ಲಿ (1975-76, 1976-77) ಜೀತವನ್ನು ಕೆಳಗಿನಂತೆ ವ್ಯಾಖ್ಯಾನಿಲಾಗಿದೆ. "ಯಾವುದೇ ಒಂದು ನಿರ್ದಿಷ್ಟ ಜಾತಿ ಅಥವಾ ಸಮುದಾಯಕ್ಕೆ ಸೇರಿದ ಜನರನ್ನು ಸಾಲ ಕೊಡುವ ಧಣಿಯು, ಒಂದು ಒಪ್ಪಂದದ ಮೇರೆಗೆ ಪೂರ್ಣವಾಗಿ ಅಥವಾ ಭಾಗಶಃ ತನಗೆ ಸೇವೆ ಸಲ್ಲಿಸಲು ಒತ್ತಾಯಿಸುವುದು ಮತ್ತು ಆ ಸೇವೆಗೆ ಯಾವುದೇ ಕೂಲಿ ಕೊಡದಿರುವುದು ಅಥವಾ ಕನಿಷ್ಠ ಕೂಲಿದರಕ್ಕಿಂತ ಕಡಿಮೆಯಾದ ಕೂಲಿಯನ್ನು ಕೊಟ್ಟರೆ ಅಂಥವರು ಜೀತದಾಳುಗಳಾಗಿದ್ದಾರೆ."[12] ಈ ವ್ಯಾಖ್ಯೆಯ ಪ್ರಕಾರ ಜೀತವು ಸಾಲದಿಂದ ಹುಟ್ಟಿಕೊಳ್ಳುತ್ತದೆ. ಸಾಲ ಕೊಡುವ ಮಾಲಿಕರು ಹಾಗೂ ಕೆಲಸಗಾರನ ಮಧ್ಯೆ ಒಪ್ಪಿಗೆಯಾಗಿ ಜೀತದ ನಿಯಮಗಳನ್ನು

---

11. B.N. Sathyan (1966) (ed), Gazetteer of India, Mysore State, Bijapur Dist. Pg. 164.

12. ಪರಿಶಿಷ್ಟ ಜಾತಿ ಮತ್ತು ಜನಾಂಗಗಳ ಆಯೋಗದ ೨೪ನೇ ವರದಿ: QUOTED BY ಎಚ್.ವಿ. ನಾಗೇಶ್: ೧೯೮೨ 'ಸಮಾಜ ಸಮ್ಮುಖ' ಸುಜಾತಾ ಪ್ರಕಾಶನ ಧಾರವಾಡ ಪುಟ - 147

ಪಾಲಿಸುತ್ತಾರೆ. ಈ ನಿಯಮದ ಪ್ರಕಾರ ಸಾಲ ಪಡೆದ ವ್ಯಕ್ತಿ ಸಾಲ ಮರಳಿಸುವವರೆಗೆ ಅಥವಾ ಸಾಲದ ಬಡ್ಡಿಯಲ್ಲಿ ದುಡಿಯಬೇಕಾಗುವುದು ಈ ಒಪ್ಪಂದ ಸ್ವಲ್ಪ ಕಾಲದವರೆಗೆ ಹಾಗೂ ಧೀರ್ಘ ಕಾಲದವರೆಗೂ ಇರಬಹುದು. ಜೀತದಾಳು ತನ್ನ ಇಡೀ ಜೀವನದುದ್ದಕ್ಕೂ ಸಾಲಕೊಟ್ಟವರ ಮನೆಯಲ್ಲಿ ದುಡಿಯುವ ಸಂದರ್ಭಗಳು ಬರಬಹುದು ಮತ್ತೆ ಕೆಲವು ಸಂದರ್ಭಗಳಲ್ಲಿ ಜೀತ ಬಂಧನವು ವಂಶಪಾರಂಪರ್ಯವಾಗಿ ತಂದೆಯಿಂದ ಮಗನಿಗೆ ಮಗನಿಂದ ಮೊಮ್ಮಗನಿಗೆ ಮುಂದುವರಿಯುತ್ತವೆ.

ವಿಜಾಪುರ ಜಿಲ್ಲೆಯಲ್ಲಿ ವಾರ್ಷಿಕ ಕೂಲಿ ಆಧಾರದ ಮೇಲೆ ಜೀತದಾಳುಗಳನ್ನು ನೇಮಕ ಮಾಡಿಕೊಳ್ಳುವ ಪದ್ಧತಿ ಇದೆ. ನಿರಂತರವಾಗಿ ಕೂಲಿ ಒದಗಿಸುವ ಭೂಒಡೆಯರು ಜೀತದಾಳುಗಳನ್ನು ನೇಮಕ ಮಾಡಿಕೊಳ್ಳುತ್ತಾರೆ. ಭೂಮಾಲೀಕರು ಕೃಷಿ ಕಾರ್ಯಗಳಲ್ಲಿ ತೊಡಗುವುದಿಲ್ಲ. ಜೀತದಾಳುಗಳು ಹಗಲು ಹಾಗೂ ರಾತ್ರಿ ವೇಳೆಯಲ್ಲಿ ಕೃಷಿಯಲ್ಲಿ ಎಲ್ಲಾ ಪ್ರಕಾರದ ಕೆಲಸ ಕಾರ್ಯಗಳನ್ನು ಮಾಡುವ ನಿರ್ಭಂದನೆಗೆ ಒಳಪಟ್ಟಿರುತ್ತಾರೆ. ಸಾಮಾನ್ಯವಾಗಿ ಒಂದು ವರ್ಷದ ಕರಾರಿನ ಆಧಾರದ ಮೇಲೆ ನಿರ್ದಿಷ್ಟ ಪಡಿಸಿದ ಹಣಕ್ಕಾಗಿ, ತಾವು ಪಡೆದ ಸಾಲದ ಬಡ್ಡಿಗೆ ಪ್ರತಿಯಾಗಿ ಅಥವಾ ಸಾಲ ತೀರುವವರೆಗೆ ಒಡೆಯರ ಹತ್ತಿರ ದುಡಿಯುತ್ತಾರೆ. ಜೀತದಾಳುಗಳು ಕೂಲಿ ಪಡೆಯುವುದರ ಜೊತೆಗೆ ಇನ್ನಿತರ ಸೌಲಭ್ಯಗಳಾದ ಆಹಾರ, ಬಟ್ಟೆ, ವಾಸಿಸಲು ಕೋಣೆ ಮುಂತಾದವುಗಳನ್ನು ಪಡೆಯುತ್ತಾರೆ. ಕೆಲವೊಂದು ಸಂದರ್ಭಗಳಲ್ಲಿ ಈ ಪ್ರಕಾರದ ಸೌಲಭ್ಯ ನಿರಾಕರಿಸಿದರೆ ಬದಲಾಗಿ ಸ್ವಲ್ಪ ಹಣ ಪಡೆಯುತ್ತಾರೆ. ಜೀತದಾಳುಗಳಿಗೆ ಕಂತುಗಳಲ್ಲಿ ಕೂಲಿ ಕೊಡುವ ಕ್ರಮಗಳೂ ಇವೆ. 1959ರ ಸುಮಾರಿಗೆ ಜೀತದಾಳುಗಳು ಇತರ ಸೌಲಭ್ಯಗಳಾದ ಆಹಾರ, ಬಟ್ಟೆ, ಚಹಾ, ತಂಬಾಕು, ಪಾದರಕ್ಷೆಗಳು, ಹಾಸಿಗೆ-ಹೊದಿಕೆಗಳ ಜೊತೆಗೆ ರೂಪಾಯಿ 100 ರಿಂದ 400 ರವೆಗೆ ವಾರ್ಷಿಕ ಕೂಲಿ ಪಡೆಯುತ್ತಾರೆ.[13] ಪ್ರಸ್ತುತ ಜಿಲ್ಲೆಯಲ್ಲಿ ಜೀತದಾಳು ಪದ್ಧತಿ ಸ್ವಲ್ಪ ಪ್ರಮಾಣದಲ್ಲಿ ಕಂಡುಬರುತ್ತಿದ್ದು ವರ್ಷಕ್ಕೆ ರೂಪಾಯಿ 5000, ಕೂಲಿ ಪಡೆಯುತ್ತಾರೆ. ಅಧ್ಯಯನಕ್ಕೆ ಒಳಪಡಿಸಿದ ನರಸಲಗಿ ತಾಂಡಾದ ಪ್ರತಿಶತ 11.11ರಷ್ಟು ಲಂಬಾಣಿಗರು ಜೀತದಿಂದ ಮುಕ್ತಿ ಹೊಂದಿ ಗೋವೆಗೆ ವಲಸೆ ಹೋಗಿದ್ದಾರೆ. ಹಾಗೂ ಪ್ರತಿಶತ 1.67ರಷ್ಟು ಕುಟುಂಬದ ಸದಸ್ಯರು ಜೀತದಾಳುಗಳಾಗಿ ದುಡಿಯುತ್ತಿದ್ದಾರೆ.

**ನೋವಿನ ಋತುಮಾನಗಳು :**

**ಬರಗಾಲ ಮತ್ತು ಪ್ರವಾಹಗಳು (Bad Seasons)**

ಬಡತನ, ಒಣಬೇಸಾಯ, ನಿರುದ್ಯೋಗ, ಕಡಿಮೆ ಕೂಲಿ ಮುಂತಾದ ಸಮಸ್ಯೆಗಳ ಜೊತೆಗೆ ನೈಸರ್ಗಿಕ ಬಲವಂತದ ಶಕ್ತಿಗಳು, ಹಾವಳಿಗಳು ವಿಜಾಪುರ ಜಿಲ್ಲೆಯ ಜನರ ಜೀವನದ ಜೊತೆಗೆ ಚಲ್ಲಾಟವಾಡಿವೆ. ಬರಗಾಲದ ಹಾವಳಿಗೆ ಈ ಜಿಲ್ಲೆ ಮೊದಲಿನಿಂದಲೂ ಒಳಗಾಗಿದೆ. ಜಿಲ್ಲೆಯ ಅನುಕ್ರಮವಾದ ನೋವಿನ ಋತುಮಾನಗಳನ್ನು ಈ ಮುಂದಿನಂತೆ ನೋಡಬಹುದು. ವಿಜಾಪುರ ಜಿಲ್ಲೆಯಲ್ಲಿ ಅತ್ಯಂತ ಮೊದಲು ದಾಖಲುಗೊಂಡ ಬರಪೀಡೆ ಎಂದರೆ 1396ರಲ್ಲಿ ಸಂಭವಿಸಿದ ಪ್ರಸಿದ್ಧ ದುರ್ಗಾದೇವಿ ಕ್ಷಾಮ. ಇದು ನಿರಂತರ 12ವರ್ಷಗಳವರೆಗೆ ಮುಂದುವರಿದಿತ್ತು. ನಂತರ 1422 ಹಾಗೂ 1423ರಲ್ಲಿ ಮಳೆಯಾಗದೆ ದಕ್ಷಿಣ ಭಾರತದ ತುಂಬ ಹಾಗೂ ಕರ್ನಾಟಕದಲ್ಲಿ ಘೋರ ಬರಗಾಲದ ಸಂಭವಿಸಿತ್ತು. 1442ರಲ್ಲಿ

13. B.N. Satyan (ed) (1966), Gazetteer of India, Pg. 163-164.

ಬರಗಾಲ ಸಂಭವಿಸಿ ಕುಡಿಯಲು ನೀರಿಲ್ಲದೆ ಸಾಮೂಹಿಕವಾಗಿ ದನ-ಕರುಗಳು ಮರಣ ಹೊಂದಿದವು. 1460ರಲ್ಲಿಯೂ, ಮಳೆಯ ವಿಫಲತೆಯಿಂದ ಬರಗಾಲ ಸಂಭವಿಸಿತ್ತು. 1472 ಹಾಗೂ 1473 ದುಃಖ ಮತ್ತು ವ್ಯಥೆಯ ವರ್ಷಗಳಾಗಿದ್ದವು. ಏಕೆಂದರೆ ಈ ಅವಧಿಯಲ್ಲಿ ಮಳೆಯಾಗದೇ ಎರಡು ವರ್ಷ ಬೆಳೆಗಳು ಬೆಳೆಯಲಿಲ್ಲ. ಅನೇಕ ಜನರು ಮರಣ ಹೊಂದಿದರು. ಮೂರನೆಯ ವರ್ಷದಲ್ಲಿ ಮಳೆಯಾಯಿತು ಆದರೆ ಈ ವೇಳೆಗೆ ಭೂಮಿಯ ಮೇಲೆ ಸಾಕಷ್ಟು ಜನರು ಇರಲಿಲ್ಲ. 1629-30ರಲ್ಲಿಯೂ, ಮತ್ತೆ ದಕ್ಷಿಣದಲ್ಲಿ ಮಳೆಬೀಳದೆ ಬರಗಾಲ ಹಾಗೂ ಪ್ಲೇಗು ಸಂಭವಿಸಿದವು. 1631ರಲ್ಲಿ ಮೊಗಲ ಸೈನಿಕರ ಅಧೀನದಲ್ಲಿ ಆಶಫ್‌ಖಾನ್ ವಿಜಾಪುರದ ಮೇಲೆ ದಾಳಿ ಮಾಡಿದ ಸಂದರ್ಭದಲ್ಲಿ ಬರಗಾಲವಿತ್ತು. ನಂತರ 1666ರಲ್ಲಿ ಮೊಗಲರು ಮತ್ತೊಮ್ಮೆ ವಿಜಾಪುರದ ಮೇಲೆ ದಾಳಿ ಮಾಡಿದ ಸಂದರ್ಭದಲ್ಲಿ ಬರಗಾಲ ಸಂಭವಿಸಿತ್ತು. ವಿಜಾಪುರದ ಸುತ್ತಲಿನ ನೂರು ಮೈಲು ಪ್ರದೇಶದಲ್ಲಿ ಹುಲ್ಲು ಹಾಗೂ ನೀರು ಸಿಗುವುದಿಲ್ಲ ಆದ್ದರಿಂದ ಸಂಕಷ್ಟದಿಂದ ಮೊಗಲರು ತಮ್ಮ ಸೈನ್ಯವನ್ನು ಕಡಿಮೆ ಮಾಡಿದರು. 1685ರಲ್ಲಿ ಸ್ವಲ್ಪ ಮಳೆಯಾಯಿತು. ಕಾಳು ಕಡಿಗಳು ಅಪರೂಪವಾಗಿ ದುಬಾರಿಯಾದವು ಇದರಿಂದ ಜನರಿಗೆ ರೊಟ್ಟಿಯ ತುಣುಕು ಸಿಗುವುದು ಕಷ್ಟದಾಯಕವಾಯಿತು. 1717ರಲ್ಲಿ ಮತ್ತೆ ಈ ಪ್ರದೇಶದಲ್ಲಿ ಘೋರ ಬರಗಾಲ ಸಂಭವಿಸಿತು. ಸಾವಿರಾರು ಜನರು ಅಳಿದು ಹೊದರು. ಈ ಸಂಕಷ್ಟ ಅನುಭವಿಸಿ ಕೆಲವು ವರ್ಷಗಳವರೆಗೆ ಜನರು ಅಲೆದಾಡಿದರು. 1784ರಲ್ಲಿ ಮತ್ತೆ ಸತತ ಮೂರು ವರ್ಷಗಳವರೆಗೆ ಘೋರ ಬರಗಾಲ ಸಂಭವಿಸಿತು. ಸಾವಿರಾರು ಜನರು ಮರಣ ಹೊಂದಿದರು, ಸತ್ತವರ ಮೂಳೆಗಳು ಭೂಭಾಗದ ಮೇಲೆ ಆವರಿಸಿ ಮೈಲುಗಳವರೆಗೆ ಬೆಳ್ಳಗಾಯಿತು.

1791ರಲ್ಲಿ ಮಳೆಬರದೆ ಮತ್ತೆ ಬರಗಾಲ ಸಂಭವಿಸಿತು. ಜನರ ನೋವಿನ ಯಾತನೆಗೆ ಯಾವುದೇ ಕ್ರಮ ಕೈಕೊಳ್ಳಲಿಲ್ಲವಾದ್ದರಿಂದ ಆಹಾರ ಸಿಗದೆ ಅನೇಕ ಜನರು ಸಾವನ್ನಪ್ಪಿದರು. ಇದನ್ನು ಡೋಗಿ ಬರ ಅಥವಾ ತಲೆಬುರುಡೆ ಬರ ಎಂದು ಈವರೆಗೆ ಜನರು ಜ್ಞಾಪಿಸಿಕೊಳ್ಳುತ್ತಾರೆ. ಏಕೆಂದರೆ ಸತ್ತ ಜನರ ಹೆಣಗಳನ್ನು ಮುಚ್ಚಲಿಕ್ಕಾಗದೆ ಭೂ ಪ್ರದೇಶವು ತಲೆಬುರುಡೆಗಳಿಂದ ಆವರಿಸಿತ್ತು. 1818 ಮತ್ತು 1820ರ ಅವಧಿಯಲ್ಲಿ ಮಳೆ ಆಗದೆ ಇರುವುದರಿಂದ ವಿಜಾಪುರ ಜಿಲ್ಲೆಯ ಮುದ್ದೇಬಿಹಾಳ, ಇಂಡಿ ಹಾಗೂ ವಿಜಾಪುರ ಪ್ರದೇಶದಲ್ಲಿ ಮತ್ತೆ ಬರಗಾಲ ಸಂಭವಿಸಿತು. ಆಹಾರದ ಕೊರತೆ ಅನುಭವಿಸಿ ಬಡವರು ಒಣಗಿದ ಹುಣಸೆಹಣ್ಣಿನ ಬೀಜಗಳನ್ನು ತಿಂದರು. ಹಾಗೂ ಸಾವಿರಾರು ಜನರು, ದನ-ಕರುಗಳು ಅಳಿದು ಹೋದರು. 1832-33ರಲ್ಲಿಯೂ, ಮಳೆ ಇಲ್ಲದೆ ಬರಗಾಲ ಸಂಭವಿಸಿ ಬೆಳೆಗಳು ನಾಶವಾದವು, ಜನರ ದುಃಖ ಶಮನಗೊಳಿಸಲು ಪರಿಹಾರ ಕಾರ್ಯಗಳನ್ನು ಪ್ರಾರಂಭಿಸಿದರೂ, ಅನೇಕರು ಹಸಿವೆಯಿಂದ ಪ್ರಾಣಬಿಟ್ಟರು. ಇದೇ ಪ್ರಕಾರವಾಗಿ ಜಿಲ್ಲೆಯಲ್ಲಿ ಕ್ರಮವಾಗಿ 1891-92, 1896 ರಿಂದ 97, 1905 ರಿಂದ 1906, 1911 ರಿಂದ 1912, 1918ರಲ್ಲಿ ಭಯಾನಕ ಬರಗಾಲಗಳು ಸಂಭವಿಸಿದ್ದವು. 1923-24 ಮತ್ತು 1926-27 ವರ್ಷಗಳು ಪ್ರಸಿದ್ಧ ದುಃಖದ ವರ್ಷಗಳಾಗಿವೆ. 1936ರಲ್ಲಿ ಬದಾಮಿ ಹಾಗೂ ಬಾಗಲಕೋಟೆ ತಾಲ್ಲೂಕುಗಳನ್ನು ಹೊರತುಪಡಿಸಿ ಇಡೀ ಜಿಲ್ಲೆಯಲ್ಲಿ ಬರಗಾಲ ಸಂಭವಿಸಿತ್ತು. ಜಿಲ್ಲಾ ಸ್ಥಳೀಯ ಮಂಡಳಿ ಹಾಗೂ ಸಾರ್ವಜನಿಕ ಕೆಲಸ ಕಾರ್ಯಗಳ ಇಲಾಖೆ, ಬರಗಾಲ ಪರಿಹಾರ ಸಮಿತಿಗಳು ಜನರಿಂದ ದೇಣಿಗೆ ಸಂಗ್ರಹಿಸಿ, ಪರಿಹಾರ ಕಾರ್ಯಕ್ರಮಗಳನ್ನು ಹಮ್ಮಿಕೊಂಡವು.

1942ರ ಸೆಪ್ಟಂಬರ್ ತಿಂಗಳಲ್ಲಿ ಮಳೆಯ ವಿಫಲತೆಯಿಂದ ಜಿಲ್ಲೆಯ ಒಟ್ಟು 1174 ಹಳ್ಳಿಗಳ ಪೈಕಿ 1090 ಹಳ್ಳಿಗಳಲ್ಲಿ ಬರಗಾಲ ಸಂಭವಿಸಿತ್ತು. ಈ ಸಂದರ್ಭದಲ್ಲಿಯೂ, ಪರಿಹಾರ ಕಾರ್ಯಕ್ರಮಗಳನ್ನು ಕೈಗೊಳ್ಳಲಾಗಿತ್ತು. 1947-48ರಲ್ಲಿಯೂ, ಮಳೆಯ ಅಭಾವದಿಂದ ವಿಜಾಪುರ ಹಾಗೂ ಬಾಗಲಕೋಟೆ ತಾಲ್ಲೂಕುಗಳಲ್ಲಿ ಕ್ಷಾಮ ತಲೆದೂರಿತ್ತು. ಇದಲ್ಲದೆ ವಿಜಾಪುರ ಜಿಲ್ಲೆಯು 1953-54, 1958-59, 1963 ಮತ್ತು 1965ರಲ್ಲಿ ಬರಗಾಲಕ್ಕೆ ತುತ್ತಾಗಿತ್ತು."[14] ಹೀಗೆ ವಿಜಾಪುರ ಜಿಲ್ಲೆ ಅನೇಕ ಶತಮಾನಗಳಿಂದ ಬರಗಾಲಕ್ಕೆ ತುತ್ತಾದ ಬಗೆಯನ್ನು ಮೇಲಿನ ಅಂಕಿ-ಅಂಶಗಳಿಂದ ನೋಡಬಹುದು. ಪ್ರಸ್ತುತ 2000ನೇ ಇಸ್ವಿಯಿಂದ ಈಚೆಗೆ ಜಿಲ್ಲೆಯು ಸತತ ಬರಗಾಲಕ್ಕೆ ತುತ್ತಾಗಿದೆ. ಮೇಲಿನ ದಾಖಲೆಗಳ ಪ್ರಕಾರ ವಿಜಾಪುರ ಜಿಲ್ಲೆಯ ಜನರು ಪ್ರಾಚೀನ ಕಾಲದಿಂದಲೂ ವಲಸೆಯಲ್ಲಿ ತೊಡಗಿದ್ದು ಕಂಡುಬರುತ್ತದೆ.

**ಪ್ರವಾಹಗಳು:**

ವಿಜಾಪುರ ಜಿಲ್ಲೆಯು ಸಾವಿರಾರು ವರ್ಷಗಳಿಂದ ಬರಪೀಡೆಗೆ ಒಳಗಾಗುತ್ತಾ ಬಂದಂತೆ, ಪ್ರವಾಹಗಳೂ ಮೇಲಿಂದ ಮೇಲೆ ಸಂಭವಿಸಿ ಜಿಲ್ಲೆಯ ಆರ್ಥಿಕ ಜೀವನವನ್ನು ಅಸ್ಥವ್ಯಸ್ಥಗೊಳಿಸಿವೆ. "ಜಿಲ್ಲೆಯಲ್ಲಿ ಅಕ್ಟೋಬರ್ 1993ರಲ್ಲಿ ಅನೀರೀಕ್ಷಿತವಾಗಿ ಭಾರಿ ಪ್ರಮಾಣದಲ್ಲಿ ಮಳೆಯಾಗಿ ನೆರೆಹಾವಳಿ ಬಂದು ಹೆಚ್ಚಿನ ಪ್ರಮಾಣದಲ್ಲಿ ಸಾರ್ವಜನಿಕ ಆಸ್ತಿ-ಪಾಸ್ತಿಗಳಿಗೆ ಧಕ್ಕೆಯಾಗಿದೆ. ಅಲ್ಲದೆ ಜನರು ಪ್ರಾಣ ಕಳೆದುಕೊಂಡಿದ್ದಾರೆ. ದನ-ಕರುಗಳು ಸತ್ತು ಹೋಗಿವೆ. ಇದರಿಂದ ಹುನಗುಂದ ತಾಲ್ಲೂಕು ಅತಿ ಹೆಚ್ಚು ಹಾನಿಗೊಳಗಾಗಿದ್ದು, ಅಂದಾಜು ಹಾನಿಯ ಮೊತ್ತ 1,142,26 ಲಕ್ಷ ರೂಪಾಯಿಗಳಾಗಿತ್ತು. ಮುದ್ದೇಬಿಹಾಳ ತಾಲ್ಲೂಕು ಅತೀ ಕಡಿಮೆ ಹಾನಿಗೊಳಗಾದ ಪ್ರದೇಶವಾಗಿದ್ದು ಇದರ ಅಂದಾಜು ಹಾನಿಯ ಮೊತ್ತ 32.32 ಲಕ್ಷ ರೂಪಾಯಿಗಳಾಗಿರುತ್ತದೆ. ಜಿಲ್ಲೆಯಲ್ಲಿ ಒಟ್ಟು ಹಾನಿಗೊಳಗಾದ ಗ್ರಾಮಗಳ ಸಂಖ್ಯೆ 1,234, ಮೃತರ ಸಂಖ್ಯೆ 21, ಗಾಯಗೊಂಡವರ ಸಂಖ್ಯೆ 30, ಮೃತಪಟ್ಟ ದನ-ಕರುಗಳ ಸಂಖ್ಯೆ 196, ಅಂದಾಜು ಹಾನಿ 2.99 ಲಕ್ಷ ರೂಪಾಯಿಗಳು, ಹಾನಿಗೊಂಡ ಕೃಷಿಕ್ಷೇತ್ರ 1,66,627 ಇದರ ಅಂದಾಜು ಹಾನಿ 4336.39 ಲಕ್ಷ ರೂಪಾಯಿ. ಭಾಗಶಃ ಬಿದ್ದಮನೆಗಳು 3664 ಇವುಗಳ ಅಂದಾಜು ಹಾನಿ 111.17 ಲಕ್ಷ ರೂಪಾಯಿ. ಸಂಪೂರ್ಣ ಬಿದ್ದಮನೆಗಳ ಸಂಖ್ಯೆ 73,097 ಇದರ ಅಂದಾಜು ಹಾನಿ 1430.59 ಲಕ್ಷ ರೂಪಾಯಿಗಳಾಗಿವೆ. ಒಟ್ಟು ಬಿದ್ದ ಮನೆಗಳ ಸಂಖ್ಯೆ 76.361 ಇವುಗಳ ಅಂದಾಜು ಹಾನಿ 1541.76 ಲಕ್ಷ ರೂಪಾಯಿಗಳು ಬಿಡುಗಡೆ ಮಾಡಿದ ಪರಿಹಾರ 361.00 ಲಕ್ಷ ರೂಪಾಯಿಗಳು. ಹಾನಿಗೊಂಡು ನೀರಾವರಿ ಪಂಪುಸೆಟ್ಟುಗಳ ಸಂಖ್ಯೆ 976 ಇದರ ಹಾನಿ 36.14 ಲಕ್ಷ ರೂಪಾಯಿಗಳು ಹಾನಿಗೊಂಡ ನೀರಾವರಿ ಭಾವಿಗಳು 282 ಇದರ ಹಾನಿ 36.14 ಲಕ್ಷ ರೂಪಾಯಿಗಳು. ಒಟ್ಟು ಹಾನಿಯಾದ ಖಾಸಗಿ ಆಸ್ತಿ 5953.42 ಲಕ್ಷ ರೂಪಾಯಿಗಳು. ಸಾರ್ವಜನಿಕ ಆಸ್ತಿ-ಪಾಸ್ತಿಗಳಿಗೆ ಆದ ಒಟ್ಟು ಹಾನಿ 442.71 ಲಕ್ಷ ರೂಪಾಯಿಗಳು. ಆದ ಒಟ್ಟು ಹಾನಿ 6396.13 ಲಕ್ಷ ರೂಪಾಯಿಗಳಾಗಿವೆ. ಇದರಿಂದ ಈ ಪ್ರದೇಶದ ಆರ್ಥಿಕ ಅಭಿವೃದ್ಧಿ ಕುಂಠಿತಗೊಂಡಿದೆ."[15] ಹೆಚ್ಚಿನ ವಿವರವನ್ನು ಈ ಮುಂದಿನ ಕೋಷ್ಟಕದ ಸಹಾಯದಿಂದ ತಿಳಿದುಕೊಳ್ಳಬಹುದು.

---

14. B.N. Sathyan (ed) (1966), Gazetteer of India, Pg. 164-166.

15. ಡಾ. ಮುನಿಸ್ವಾಮಿ (ಸಂ) ೧೯೯೯: ಭಾರತದ ಗೆಜೆಟೀಯರ್ ಪುಟ-೬೫೭

**ಕೋಷ್ಠಕ 23, ೧೯೯೩ನೇ ಅಕ್ಟೋಬರ್ ತಿಂಗಳಲ್ಲಿ ಆದ ಭಾರಿ ಮಳೆಯಿಂದ ಆದ ಹಾನಿ ತೋರಿಸುವ ತಃಖ್ತೆ (ರೂಪಾಯಿ. ಲಕ್ಷಗಳಲ್ಲಿ)**

| ತಾಲ್ಲೂಕಿನ ಹೆಸರು | ಹಾನಿಗೊಳಗಾದ ಗ್ರಾಮಗಳು ಸಂಖ್ಯೆ | ಮೃತರ ಬಗ್ಗೆ | | ಗಾಯಗೊಂಡವರ ಸಂಖ್ಯೆ | ಮೃತಪಟ್ಟ ದನ ಕರುಗಳು | | ಕೃಷಿ ಕ್ಷೇತ್ರ ಹಾನಿಯಾದ ಬಗ್ಗೆ | | ಮನೆಗಳು ಬಿದ್ದ ಬಗ್ಗೆ | | | |
|---|---|---|---|---|---|---|---|---|---|---|---|---|
| | | ಸಂಖ್ಯೆ | ಸಂದಾಯಿಸಿದ ಪರಿಹಾರ ಲಕ್ಷ ರೂ.ಗಳಲ್ಲಿ | | ಸಂಖ್ಯೆ | ಅಂದಾಜು ಹಾನಿ | ಕ್ಷೇತ್ರ ಹೆಕ್ಟೇರ್‌ಗಳಲ್ಲಿ | ಅಂದಾಜು ಹಾನಿ | ಭಾಗಶಃ | ಅಂದಾಜು ಹಾನಿ | ಪೂರ್ತಿ | ಅಂದಾಜು ಹಾನಿ |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
| ವಿಜಾಪುರ | 105 | 8 | 2.40 | — | 5 | 0.20 | 11,068 | 276.70 | 183 | 22.40 | 14,950 | 750.00 |
| ಬಸವನ ಬಾಗೇವಾಡಿ | 120 | - | - | 1 | 20 | 0.30 | 10,043 | 251.07 | 1,199 | 23.78 | 7,194 | 143.88 |
| ಮುದ್ದೇಬಿಹಾಳ | 15 | - | - | 3 | 2 | 0.04 | 19,517 | 487.92 | - | - | 3,203 | 31.46 |
| ಇಂಡಿ | 12 | - | - | 3 | 24 | 0.15 | 40,843 | 1,021.07 | 437 | 12.47 | 5,583 | 52.14 |
| ಸಿಂದಗಿ | 127 | - | - | 6 | 7 | 0.14 | 54,274 | 1,328.46 | 405 | 6.20 | 8,475 | 50.00 |
| ಜಮಖಂಡಿ | 71 | 1 | - | 1 | 13 | 0.17 | 3,302 | 75.14 | 192 | 1.88 | 5,194 | 73.00 |
| ಮುಧೋಳ | 78 | - | - | - | 2 | 0.05 | 3,199 | 54.05 | 178 | 4.30 | 3,930 | 31.26 |
| ಬೀಳಗಿ | 64 | 2 | 0.20 | 3 | 8 | 0.21 | 1,599 | 39.97 | 178 | 17.80 | 3,970 | 48.94 |
| ಬಾಗಲಕೋಟೆ | 90 | 6 | 6.00 | 5 | 60 | 0.56 | 2,472 | 48.02 | 35 | 7.80 | 4,728 | 104.25 |
| ಹುನಗುಂದ | 160 | 1 | 1.00 | 3 | 52 | 0.42 | 10,943 | 190.97 | 68 | 3.40 | 8,715 | 79.51 |
| ಬಾದಾಮಿ | 146 | 3 | 3.00 | 5 | 3 | 0.75 | 10,367 | 563.02 | 409 | 11.14 | 7,925 | 66.15 |
| ಒಟ್ಟು | 1,234 | 21 | 12.60 | 30 | 196 | 2.99 | 1,66,627 | 4,336.39 | 3264 | 111.17 | 73,097 | 1,430.59 |

## ಕೋಷ್ಟಕ ಮುಂದುವರೆದ ಭಾಗ

| ತಾಲ್ಲೂಕಿನ ಹೆಸರು | ಒಟ್ಟು ಬಿದ್ದ ಮನೆಗಳು | ಒಟ್ಟು ಅಂದಾಜು ಹಾನಿ | ಬಿಡುಗಡೆ ಮಾಡಿದ ಪರಿಹಾರ | ಹಾನಿಗೊಂಡ ನೀರಾವರಿ ಪಂಪ್‌ಸೆಟ್ಟು | | ಹಾನಿಗೊಂಡ ನೀರಾವರಿ ಬಾವಿಗಳು | | ಖಾಸಗಿ ಆಸ್ತಿಗಳಿಗೆ ಆದ ಒಟ್ಟು ಹಾನಿ (8.10.16.19.21) | ಖಾಸಗಿ ಆಸ್ತಿಗಳಿಗೆ ಆದ ಒಟ್ಟು ಹಾನಿ | ಸಾರ್ವಜನಿಕ ಆಸ್ತಿಗಳಿಗೆ ಆದ ಒಟ್ಟು ಹಾನಿ | ಮಳೆಯಿಂದಾಗಿ ಆದ ಒಟ್ಟು ಹಾನಿ |
|---|---|---|---|---|---|---|---|---|---|---|---|
| | | | | ಸಂಖ್ಯೆ | ಹಾನಿ | ಸಂಖ್ಯೆ | ಹಾನಿ | | | | |
| 1 | 14 | 15 | 16 | 17 | 18 | 19 | 20 | 21 | 22 | 23 | 24 |
| ವಿಜಾಪುರ | 15,133 | 772.4 | 38.00 | - | - | - | - | 1,049.30 | 1,049.30 | 146.35 | 1,195.65 |
| ಬಸವನ ಬಾಗೇವಾಡಿ | 8,383 | 167.66 | 35..00 | 158 | 11.06 | 158 | 31.60 | 461.69 | 461.69 | 39.95 | 501.64 |
| ಮುದ್ದೇಬಿಹಾಳ | 3,203 | 3.46 | 25.00 | - | - | - | - | 519.42 | 5,19.42 | 25.65 | 545.07 |
| ಇಂಡಿ | 6,020 | 64.61 | 28.00 | 15 | 1.50 | 43 | 0.93 | 1,088.26 | 1,088.26 | 22.76 | 1,111.02 |
| ಸಿಂದಗಿ | 8,880 | 56.20 | 34.00 | - | - | - | - | 1,384.80 | 1,384.80 | 17.05 | 1,401.85 |
| ಜಮಖಂಡಿ | 5,386 | 74.88 | 27.00 | - | - | 6 | 1.25 | 151.44 | 151.44 | 64.55 | 215.99 |
| ಮುಧೋಳ | 1,988 | 35.56 | 20.00 | - | - | - | - | 89.66 | 89.66 | 15.81 | 105.47 |
| ಬೀಳಗಿ | 4,148 | 66.74 | 30.00 | 3 | 0.20 | 3 | 0.15 | 107.27 | 107.43 | 8.15 | 115.42 |
| ಬಾಗಲಕೋಟೆ | 4,763 | 112.05 | 35.00 | - | - | 6 | 0.80 | 161.43 | 161.43 | 48.54 | 209.97 |
| ಹುನಗುಂದ | 8,783 | 82.91 | 44.00 | 752 | 22.56 | - | - | 296.86 | 296.86 | 35.45 | 332.31 |
| ಬಾದಾಮಿ | 8,334 | 77.29 | 45.00 | 48 | 0.82 | 66 | 1.41 | 643.29 | 643.29 | 18.45 | 661.74 |
| ಒಟ್ಟು | 76,361 | 1,541.76 | 361.00 | 976 | 36.14 | 282 | 36.14 | 5,953.42 | 5,953.42 | 442.71 | 6,396.13 |

ಆಧಾರ: ಭಾರತದ ಗೆಜೆಟೀಯರ್ ಕರ್ನಾಟಕ ರಾಜ್ಯ 'ವಿಜಾಪುರ ಜಿಲ್ಲೆ,' ೧೯೯೯

ಪ್ರವಾಹಗಳು ಮಾತ್ರವಲ್ಲದೆ, 1993ರಲ್ಲಿ ಸಂಭವಿಸಿದ ಭೂಕಂಪದಿಂದ ಜನರ ಆಸ್ತಿಪಾಸ್ತಿಗಳಿಗೆ ಹಾನಿ ಸಂಭವಿಸಿದೆ. ಒಟ್ಟು ಜಿಲ್ಲೆಯಲ್ಲಿ ಆದ ಅಂದಾಜು ಹಾನಿ ರೂಪಾಯಿ 428.84 ಲಕ್ಷ ಇದೇ ಪ್ರಕಾರವಾಗಿ 1994ರಲ್ಲಿ ನದಿಗಳ ಮಹಾಪುರಗಳಿಂದ ಅದ ಒಟ್ಟು ಹಾನಿಯ ಮೊತ್ತ ರೂಪಾಯಿ, 51,23,40 ಲಕ್ಷಗಳು 1998-99ರಲ್ಲಿ ಮಹಾಪುರ ಬಂದು ಭಾರಿ ಪ್ರಮಾಣದಲ್ಲಿ ಆರ್ಥಿಕ ಹಾನಿ ಸಂಭವಿಸಿದೆ. ಹೀಗೆ ನೈಸರ್ಗಿಕ ವಿಕೋಪಗಳ ದಾಳಿಗೆ ಮೇಲಿಂದ ಮೇಲೆ ತುತ್ತಾಗುತ್ತಿರುವ ವಿಜಾಪುರ ಜಿಲ್ಲೆಯ ಆರ್ಥಿಕ ಅಭಿವೃದ್ಧಿ ಕುಂಟಿತವಾಗಿದೆ. ಈ ಮೇಲಿನ ಎಲ್ಲಾ ಅಂಶಗಳು ಜನರನ್ನು ವಲಸೆ ಹೋಗುವಂತೆ ಮಾಡಿವೆ.

**ವಿಜಾಪುರ ಜಿಲ್ಲೆಯಲ್ಲಿ ವಲಸೆಯ ಚಲನ-ವಲನಗಳು:**

ಸಾವಿರಾರು ವರ್ಷಗಳಿಂದ ವಿಜಾಪುರ ಜಿಲ್ಲೆಯು, ಬರಗಾಲ, ಮಹಾಪೂರ, ಭೂಕಂಪ ಹಾಗೂ ನೀರಾವರಿ ಸೌಲಭ್ಯಗಳ ಕೊರತೆಯಿಂದ ಇಲ್ಲಿಯ ಜನರು ಆರ್ಥಿಕ ಸಮಸ್ಯೆ ಎದುರಿಸುತ್ತ ಬಂದಿದ್ದಾರೆ. ಬರಗಾಲ ಸಂಭವಿಸಿದ ಸಂದರ್ಭಗಳಲ್ಲಿ ಜನರಿಗೆ ಉದ್ಯೋಗ ಸಿಗದ ಕಾರಣ ಉದ್ಯೋಗ ಹುಡುಕಿಕೊಂಡು ಬೇರೆ ಪ್ರದೇಶಗಳಿಗೆ ವಲಸೆ ಹೋಗುತ್ತಾರೆ. "ಹಿಂದೆ ಔರಂಗಜೇಬನ ಕಾಲದಲ್ಲಿ ಪ್ಲೇಗ್ ರೋಗ ಬಂದು ಸುಮಾರು ಒಂದು ಲಕ್ಷ ಜನರು ಬಲಿಯಾದರು ಸಾವಿರಾರು ಜನರು ಗುಳೇ ಹೋದರು. 1710ರಲ್ಲಿ ಜಿಲ್ಲೆಗೆ ಬರಗಾಲ ಬಡಿಯಿತು. ನೂರಾರು ಜನರು ಸತ್ತರು 1717ರಲ್ಲಿ ಮತ್ತೆ ಭೀಕರ ಬರಗಾಲ ಬಂದಿತು. 1942ರಲ್ಲಿಯೂ ಭೀಕರ ಬರಗಾಲ ಬಡಿಯಿತು. ಆಗ ಲಕ್ಷಾಂತರ ಮಂದಿ ಸತ್ತರು. ಜಾನುವಾರು, ಕುರಿಗಳು ಪ್ರಾಣಬಿಟ್ಟವು. ಗುಳೇ ಹೋಗುವುದು ಬಿಜಾಪುರದ ಜನರಿಗೆ ಹೊಸತಲ್ಲ ಅಂದಿನಿಂದಲೂ ಗುಳೇ ಹೊರಡುವುದು ನಡೆದೇ ಇದೆ. ಈಗಲೂ ಬಿಜಾಪುರದಲ್ಲಿ ಉದ್ಯೋಗ ಅವಕಾಶ ಕಡಿಮೆ. ಮಜೂರಿಯೂ ಕಡಿಮೆ ಮಳೆ ಇಲ್ಲದಿದ್ದರೆ ಹಳ್ಳಿಗಳಲ್ಲಿ ಕೆಲಸವೇ ಇಲ್ಲ. ಸಾಮಾನ್ಯವಾಗಿ ಆಗ ಗುಳೇ ಹೋಗುವುದೊಂದೇ ದಾರಿ. ಒಂದು ಅಂದಾಜಿನ ಪ್ರಕಾರ ಪ್ರತಿವರ್ಷ ಜಿಲ್ಲೆಯಿಂದ ಸುಮಾರು 5 ಲಕ್ಷ ಜನರು ಗುಳೇ ಹೋಗುತ್ತಾರೆ. 1991ರ ಜನಗಣತಿಯ ಪ್ರಕಾರ ಜಿಲ್ಲೆಯ ಜನಸಂಖ್ಯೆ 29 ಲಕ್ಷದಾಟಿದೆ ಅಷ್ಟೂ ಜನರಿಗೆ ಕೆಲಸ ಸಿಗುತ್ತಿಲ್ಲ. ಹೀಗಾಗಿ ಜನರು ಮಹಾರಾಷ್ಟ್ರಕ್ಕೆ, ಪಣಜಿಗೆ (ಗೋವಾ) ಕರಾವಳಿಯ ಜಿಲ್ಲೆಗಳಿಗೆ ವಲಸೆ ಹೋಗುವುದು ನಡೆದಿದೆ."[16] ವಿಜಾಪುರ ಜಿಲ್ಲಾ ಗೆಜೆಟೀಯರ್‌ನಲ್ಲಿ ನಮೂದಿಸಿದಂತೆ "ಈ ಜಿಲ್ಲೆಯ ಮಟ್ಟಿಗೆ ಹೇಳುವುದಾದರೆ ಒಂದಿಲ್ಲಾ ಒಂದು ಕಾರಣದಿಂದ ಬರಗಾಲಕ್ಕೆ ಮೊದಲಿನಿಂದಲೂ ತುತ್ತಾಗುತ್ತಿರುವುದರಿಂದ ಈ ಜಿಲ್ಲೆಯಿಂದ ವಲಸಿಗರ ಪ್ರಮಾಣ ಅದರಲ್ಲಿಯೂ, ವಿಶೇಷವಾಗಿ ಗ್ರಾಮೀಣ ಪ್ರದೇಶಗಳ ಬಡರೈತರು ಹಾಗೂ ಕೃಷಿ ಕಾರ್ಮಿಕರು ರಾಜ್ಯದ ಇತರೇ ಜಿಲ್ಲೆಗಳಿಗೆ ಗುಳೇ ಹೋಗುವುದು ಸಾಮಾನ್ಯವಾಗಿದೆ. ಸಾಮಾನ್ಯವಾಗಿ ಬಯಲುಪ್ರದೇಶದಿಂದ ಮಲೆನಾಡು ಪ್ರದೇಶಗಳಿಗೆ ಬಿತ್ತನೆ ಹಾಗೂ ಸುಗ್ಗಿಯ ಕಾಲದಲ್ಲಿ ಜನರು ವಲಸೆ ಹೋಗಿ ನಂತರ ಹಿಂತಿರುಗುತ್ತಾರೆ. ಕೆಲವು ಸಂದರ್ಭಗಳಲ್ಲಿ ನೈಸರ್ಗಿಕ ವಿಕೋಪಗಳೂ ತಾತ್ಕಾಲಿಕ ವಲಸೆಗೆ ಕಾರಣವಾಗಿರಬಹುದು. ಶಿಕ್ಷಣ, ಉದ್ಯೋಗ, ವಿವಾಹ ಇವೇ

16. ಬಿ.ಎಂ.ಹನೀಫ್: ೧೯೯೩ 'ಬಿಜಾಪುರ' ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ ಪುಟ ೨೨

ಮುಂತಾದವು ಸಹ ವಲಸೆಗೆ ಕಾರಣವಾಗಿರುತ್ತದೆ."[17] ಈ ಮೇಲಿನ ಮಾಹಿತಿಗಳ ಪ್ರಕಾರ ಬಿಜಾಪುರ ಜಿಲ್ಲೆಯ ಜನರು ಮೊದಲಿನಿಂದಲೂ ವಲಸೆಯ ಚಲನ-ವಲನಗಳಲ್ಲಿ ನಿರತರಾಗಿದ್ದು ಸ್ಪಷ್ಟವಾಗುತ್ತದೆ. ಕೃಷಿ ಕಾರ್ಮಿಕರು ಬಡರೈತರು, ಬಿತ್ತನೆ ಹಾಗೂ ಸುಗ್ಗಿಯ (ಬೆಳೆಕಟಾವು ಮಾಡುವ ಸಂದರ್ಭಗಳಲ್ಲಿ) ಸಮೀಪದ ಹಳ್ಳಿಗಳಿಗೆ ಪಟ್ಟಣಗಳಿಗೆ ವಲಸೆ ಹೋಗಿ ಸುಗ್ಗಿಯ ಕಾಲ ಮುಗಿದನಂತರ ಮರಳಿ ಬರುತ್ತಾರೆ. ಕೆಲವರು ನೆರೆಯ ರಾಜ್ಯಗಳಾದ ಗೋವಾ ಹಾಗೂ ಮಹಾರಾಷ್ಟ್ರಗಳಿಗೆ ವಲಸೆ ಹೋಗುತ್ತಾರೆ. ಈ ಪ್ರಕಾರದ ಋತುಮಾನದ ವಲಸೆಗೆ ನೀರಾವರಿಯ ಸೌಲಭ್ಯದ ಕೊರತೆ, ಒಣಬೇಸಾಯ ಹಾಗೂ ಭೌಗೋಳಿಕ ಅಂಶಗಳು ಕಾರಣವಾಗಿವೆ. ವಿಜಾಪುರ ಜಿಲ್ಲೆಯಲ್ಲಿ ಮೊದಲಿನಿಂದಲೂ ವಲಸೆಯ ಚಲನ-ವಲನಗಳು ನಡೆಯುತ್ತಿದ್ದರೂ, ಇದರ ಬಗ್ಗೆ ಈವರೆಗೆ ಸಂಶೋಧನಗಳು ನಡೆದಿಲ್ಲ, ಹಾಗೂ ಸ್ಪಷ್ಟವಾದ ಮಾಹಿತಿಗಳು ಲಭ್ಯವಿರುವುದಿಲ್ಲ. ಕರ್ನಾಟಕ ರಾಜ್ಯ ವಿಜಾಪುರ ಜಿಲ್ಲೆಯ ಗೆಜೆಟೀಯರ್‌ನಲ್ಲಿ ವಲಸೆಯ ಬಗ್ಗೆ ಕೆಲವು ಮಾಹಿತಿಗಳನ್ನು ನೀಡಲಾಗಿದೆ. ಜನಗಣತಿಯ ವರದಿಗಳಲ್ಲಿಯೂ, ಜಿಲ್ಲೆಯಿಂದ ಹೊರಗಡೆ ವಲಸೆ ಹೋಗಿ ನೆಲೆಸಿದವರ ಬಗ್ಗೆ ಮಾಹಿತಿ ನೀಡಿಲ್ಲ. ಹೊರಗಡೆ ಹುಟ್ಟಿ ವಿಜಾಪುರ ಜಿಲ್ಲೆಯಲ್ಲಿ ಗಣತಿ ಆದವರ ಬಗ್ಗೆ ಮಾತ್ರ ಮಾಹಿತಿ ಸಿಗುತ್ತದೆ. ವ್ಯಕ್ತಿ ಹೊರಗಡೆ ಪ್ರದೇಶದಲ್ಲಿ ಹುಟ್ಟಿ ಜನಗಣತಿ ಮಾಡುವ ಸ್ಥಳದಲ್ಲಿ ಗಣತಿಯಾದವರನ್ನು ಜನಗಣತಿಗಳು ವಲಸೆ ಎಂದು ಪರಿಗಣಿಸಿವೆ. ಈ ಪ್ರಕಾರದ ಅಂಕಿ ಅಂಶಗಳಿಂದ ವಲಸಿಗರ ಬಗ್ಗೆ ನಿಖರವಾದ ಮಾಹಿತಿ ಪಡೆಯಲು ಸಾಧ್ಯವಾಗುವುದಿಲ್ಲ. ಭಾರತದ ಜನಗಣತಿ ವರದಿಯ ಪ್ರಕಾರ,

Till 1961, migration data were collcted and presented with reference to the place of birth if a person was born at a place other than place of enumeration, he was treated as a migrant in census returns. In censuses upto 1951, a question on birth place was asked. The data presented related to the number of migrants by sex. in 1961 census, an effort was made to widen the scope of enquiry and collected information on: (i) Birth-place statistics, (ii) Birth-place (Rural and Urban), (iii) Duration of residence, if born elsewhere But these statistics did not account for the more recent movement of a person thus a person who had migrated elsewhere for all practical purposes and happened to be at the place of birth during the period of enumeration, was treated as a non-migrant at the census.[18]

1991ರ ಜನಗಣತಿಯ ಪ್ರಕಾರ ವಿಜಾಪುರ ಜಿಲ್ಲೆಯ ಹೊರಗಿನ ಪ್ರದೇಶಗಳಲ್ಲಿ ಹುಟ್ಟಿ ಜಿಲ್ಲೆಯಲ್ಲಿ ಗಣತಿಯಾದ ಜನಸಂಖ್ಯೆಯನ್ನು ಗ್ರಾಮೀಣ ಹಾಗೂ ನಗರ ಪ್ರದೇಶಗಳಿಗೆ ಅನುಸಾರವಾಗಿ ಈ ಮುಂದಿನ ಕೋಷ್ಟಕದ ಸಹಾಯದಿಂದ ನೋಡಬಹುದು.

---

17. ಡಾ. ಮುನಿಸ್ವಾಮಿ (ಸಂ) ೧೯೯೯: ಭಾರತದ ಗೆಜೆಟೀಯರ್ ಕರ್ನಾಟಕ ರಾಜ್ಯ, 'ವಿಜಾಪುರ ಜಿಲ್ಲೆ' ಪುಟ.೨೩೭

18. Census of India: 1997: Migration Tables, Volume I, Series II Karnataka.

ಕೋಷ್ಟಕ 24, 1991ನೇ ಜನಗಣತಿಯಂ ಪ್ರಕಾರ ಹೊರಗಡೆ ಹುಟ್ಟಿ ಜಿಲ್ಲೆಯಲ್ಲಿ ಗಣತಿಯಾದ ಜನರು.

| ಹುಟ್ಟಿದ ಸ್ಥಳ | ಗ್ರಾಮಾಂತರ | | ನಗರ | | ಒಟ್ಟು | | |
|---|---|---|---|---|---|---|---|
| | ಗಂಡಸರು | ಹೆಂಗಸರು | ಗಂಡಸರು | ಹೆಂಗಸರು | ಗಂಡಸರು | ಹೆಂಗಸರು | ಒಟ್ಟು |
| 1 | 2 | 3 | 4 | 5 | 6 | 7 | 8 |
| ಭಾರತದಲ್ಲಿ | 11,36,970 | 11,00,984 | 3,53,209 | 3,35,057 | 14,90,179 | 14,36,041 | 29,26,720 |
| ಕರ್ನಾಟಕದಲ್ಲಿ | 11,26,260 | 10,74,234 | 3,43,695 | 3,21,099 | 14,70,055 | 13,95,333 | 28,65,388 |
| ಗಣತಿಯಾದ ಸ್ಥಳದಲ್ಲಿ | 9,25,263 | 6,08,580 | 2,50,086 | 1,95,836 | 11,75,349 | 8,04,416 | 19,79,765 |
| ಜಿಲ್ಲೆಯಲ್ಲಿ | 1,65,220 | 3,84,424 | 68,356 | 87,431 | 2,33,876 | 4,71,855 | 7,05,731 |
| ರಾಜ್ಯದ ಇತರ ಜಿಲ್ಲೆಗಳಲ್ಲಿ | 35,577 | 81,230 | 25,253 | 37,832 | 60,830 | 1,19,062 | 1,79,892 |
| ಇತರ ರಾಜ್ಯ ಹಾಗೂ ಕೇಂದ್ರ ಆಡಳಿತ ಪ್ರದೇಶದಲ್ಲಿ | 10,610 | 26,750 | 9,514 | 13,958 | 20,124 | 40,708 | 60,832 |
| ಆಂಧ್ರ ಪ್ರದೇಶ | 350 | 380 | 1,010 | 830 | 1360 | 1,210 | 2570 |
| ಕೇರಳ | 230 | 420 | 221 | 210 | 451 | 630 | 1081 |
| ಗೋವಾ | 160 | 110 | 70 | 90 | 230 | 200 | 430 |
| ಮಹಾರಾಷ್ಟ್ರ | 9,260 | 25,440 | 5,573 | 11,338 | 14,833 | 36,778 | 51,611 |
| ರಾಜಸ್ಥಾನ | 120 | 60 | 730 | 460 | 850 | 520 | 1,370 |
| ತಮಿಳುನಾಡು | 200 | 80 | 720 | 340 | 920 | 420 | 1,340 |
| ಏಷ್ಯಾ ರಾಷ್ಟ್ರಗಳಲ್ಲಿ | 150 | 190 | 160 | 110 | 310 | 300 | 610 |

ಮೇಲಿನ ಕೋಷ್ಟಕದ ಪ್ರಕಾರ 300 ಸ್ತ್ರೀಯರು ಹಾಗೂ 310 ಪುರುಷರು ಹೊರದೇಶಗಳಲ್ಲಿ, 40,708 ಸ್ತ್ರೀಯರು, 20124 ಪುರುಷರು ಇತರ ರಾಜ್ಯ ಹಾಗೂ ಕೇಂದ್ರಾಡಳಿತ ವ್ಯಾಪ್ತಿಯ ಪ್ರದೇಶಗಳಲ್ಲಿ, 1,19062 ಸ್ತ್ರೀಯರು ಹಾಗೂ 60,830 ಪುರುಷರು ರಾಜ್ಯದ ಬೇರೆ ಬೇರೆ ಜಿಲ್ಲೆಗಳಲ್ಲಿ ಜನಿಸಿ ವಿಜಾಪುರ ಜಿಲ್ಲೆಯಲ್ಲಿ ಗಣತಿಯಾಗಿದ್ದಾರೆ. 200 ಸ್ತ್ರೀಯರು ಹಾಗೂ 230 ಪುರುಷರು ಗೋವಾ ರಾಜ್ಯದಲ್ಲಿ ಜನಿಸಿ ವಿಜಾಪುರ ಜಿಲ್ಲೆಯಲ್ಲಿ ದಾಖಲಾಗಿದ್ದಾರೆ. ಅದೇ ಪ್ರಕಾರವಾಗಿ 36,778 ಸ್ತ್ರೀಯರು ಹಾಗೂ 14,833 ಪುರುಷರು ಮಹಾರಾಷ್ಟ್ರ ರಾಜ್ಯದಲ್ಲಿ ಜನಿಸಿ, ಜಿಲ್ಲೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ದಾಖಲಾಗಿದ್ದಾರೆ. ಇದರಿಂದ ವಿಜಾಪುರ ಜಿಲ್ಲೆಯಿಂದ ಮಹಾರಾಷ್ಟ್ರ ರಾಜ್ಯಕ್ಕೆ ವಲಸೆ ಹೋಗಿರುವುದನ್ನು

ಸೂಚಿಸುತ್ತದೆ. ಈ ಅಂಕಿ-ಅಂಶಗಳಿಂದ ವ್ಯಕ್ತವಾಗುವುದೇನೆಂದರೆ ವಿಜಾಪುರ ಜಿಲ್ಲೆಯ ಜನರು ಸಮೀಪದ ಸ್ಥಳವಾದ ನೆರೆಯ ಜಿಲ್ಲೆಗಳಿಗೆ ಹೆಚ್ಚಿನ ಸಂಖ್ಯೆಯಲ್ಲಿ ವಲಸೆ ಹೋಗುತ್ತಾರೆ. ಇತರ ರಾಜ್ಯಗಳಗೆ ವಲಸೆ ಹೋಗುವುದು ಎರಡನೆಯ ಸ್ಥಾನ ಪಡೆದರೆ, ಬಹಳ ಕಡಿಮೆ ಪ್ರಮಾಣದಲ್ಲಿ ವಿದೇಶಗಳಿಗೆ ವಲಸೆ ಹೋಗುತ್ತಾರೆ.

**ಲಂಬಾಣಿಗರ ವಲಸೆ :**

ಲಂಬಾಣಿಗರು ಪ್ರಾಚೀನ ಕಾಲದಿಂದಲೂ ದೇಶ-ವಿದೇಶಗಳಲ್ಲಿ ಸಂಚರಿಸಿ ವ್ಯಾಪಾರದಲ್ಲಿ ತೊಡಗಿದ್ದರು. ವಲಸೆ ಹೋಗುವುದು ಇವರ ಜೀವನಕ್ರಮವಾಗಿತ್ತು. ಲಂಬಾಣಿಗರು ವ್ಯಾಪಾರಕ್ಕಾಗಿ ಸಂಚರಿಸಿದ ಪ್ರದೇಶಗಳ ಮಾರ್ಗಗಳನ್ನು ಇತಿಹಾಸಕಾರರಾದ S.R. Kanitkarರವರು ತಮ್ಮ 'History of India' -1934 ಎಂಬ ಪುಸ್ತಕದಲ್ಲಿ ಈ ಮುಂದಿನಂತೆ ವಿವರಿಸಿದ್ದಾರೆ. "ಲಂಬಾಣಿಗರು (ಬಂಜಾರರು) ಕ್ರಿ.ಪೂ. 600ರಲ್ಲಿ ಸುಮಾರು 2,600 ರಿಂದ 3000 ವರ್ಷಗಳ ಹಿಂದೆ ದನಕರುಗಳ ಮೇಲೆ ಎಲ್ಲಾ ವಿಧದ ವಸ್ತುಗಳ ಸರಕು ಸಾಗಣಿಕೆಯ ವ್ಯಾಪಾರದಲ್ಲಿ ತೊಡಗಿದ್ದರು."[19] ಕಾನಿಟ್ಕರ್‌ರವರು ನೀಡಿದ ಭಾರತದಲ್ಲಿ ಲಂಬಾಣಿಗರ ವಲಸೆಯ ಮಾರ್ಗಗಳು ಎಂಬ ನಕ್ಷೆಯು ಲಂಬಾಣಿಗರು ವ್ಯಾಪಾರಕ್ಕಾಗಿ ಸಂಚರಿಸಿದ ಮಾರ್ಗಗಳನ್ನು ಸೂಚಿಸುತ್ತದೆ. ಲಂಬಾಣಿಗರು ಕೇವಲ ಭಾರತದಲ್ಲಿ ಸರಕು ಸಾಗಾಣಿಕೆಯ ವ್ಯಾಪಾರದಲ್ಲಿ ತೊಡಿಗಿದ್ದರಲ್ಲದೆ ಇತರ ದೇಶಗಳಾದ ಬರ್ಮಾ, ಮಾಳವಾ, ಈಜಿಪ್ಟ್, ಗ್ರೀಸ್, ರೋಮ್ ಹಾಗೂ ಚೈನಾಗಳವರೆಗೆ ಸಂಚರಿಸಿ ವ್ಯಾಪಾರ ವಹಿವಾಟುಗಳಲ್ಲಿ ತೊಡಗಿದ್ದ ಬಗ್ಗೆ ಮಾಹಿತಿಯನ್ನು ಈ ನಕ್ಷೆಯು ವಿವರಿಸುತ್ತದೆ. ವಿದೇಶಗಳಿಗೆ ಹೋಗಿ ದವಸ ಧಾನ್ಯಗಳು ಹಾಗೂ ಇತರ ವಸ್ತುಗಳನ್ನು ಖರೀದಿಸಿಕೊಂಡು ಬಂದು ವ್ಯಾಪಾರ ಮಾಡುತ್ತಿದ್ದ ಬಗ್ಗೆ ಮಾಹಿತಿಯು ನಕ್ಷೆಯಲ್ಲಿ ತೋರಿಸಿದ ಸಮುದ್ರ ಮಾರ್ಗಗಳಿಂದ ಸ್ಪಷ್ಟವಾಗುತ್ತದೆ. ಈ ನಕ್ಷೆಯ ಪ್ರಕಾರ ಲಂಬಾಣಿಗರು ಉತ್ತರ ಭಾರತದ ಉಜ್ಜಯಿನಿ, ದ್ವಾರಕಾ, ಮಥುರಾ, ಹಸ್ತಿನಾಪುರ, ಜಮ್ಮು, ಕಂಪ್ಲಿಯಾ, ಆಗ್ರಾ, ಕೌಶಾಂಬಿ, ಅಯೋಧ್ಯಾ, ಪಾಟಲಿಪುತ್ರ, ನಳಂದಾ, ದಂತಪುರ ಹಾಗೂ ಪುರಿಗಳ ಮುಖಾಂತರ ವ್ಯಾಪಾರ ಮಾಡುತ್ತ ಬಂದು ಮಧ್ಯಭಾರತದ ನಾಸಿಕ್, ಬಹಾಲ್, ಪಿಟಲಖೋರಾ ಮುಂತಾದ ಪ್ರದೇಶಗಳ ಮೂಲಕ ಹಾಯ್ದುಹೋಗಿ ದಕ್ಷಿಣ ಭಾರತದ ಕೋಲ್ಹಾಪುರ, ಗೋವಾ, ವೈಜಯಂತಿ, ನಾಗಾರ್ಜುನಕೊಂಡಾ, ಅಮರಾವತಿ, ಮದ್ರಾಸ್, ಮಚಿಲಿಪಟ್ಟಣ ಮುಂತಾದ ಪ್ರದೇಶಗಳಲ್ಲಿ ವ್ಯಾಪಾರಕ್ಕಾಗಿ ಸಂಚರಿಸಿದ್ದಾರೆ. ಪ್ರಾಚೀನ ಕಾಲದಲ್ಲಿ ಲಂಬಾಣಿಗರ ವ್ಯಾಪಾರ ವಿಸ್ತಾರವಾಗಿತ್ತು. ಇವರು ದಿನನಿತ್ಯದ ಆಹಾರ ಪದಾರ್ಥಗಳನ್ನು ಮಾರಾಟ ಮಾಡುತ್ತಿದ್ದರು. ಸರಕು ಸಾಗಾಣಿಕೆಯ ಸೌಕರ್ಯಗಳು ಇಲ್ಲದ್ದರಿಂದ ಇವರ ವ್ಯಾಪಾರ ಸುಗಮವಾಗಿ ಸಾಗಿತ್ತು. (ಪುಟ ಸಂಖ್ಯೆ ೧೩೦)

ಲಂಬಾಣಿಗರು ಪ್ರಾಚೀನ ಕಾಲದಲ್ಲಿ ವ್ಯಾಪಾರ ಮಾಡುವಾಗ ಗೋವೆಯ ಹಾಗೂ ವಿಜಾಪುರ ಮಾರ್ಗವಾಗಿ ಸಂಚರಿಸಿದ್ದು ಕಂಡುಬರುತ್ತದೆ. 1396ರಲ್ಲಿ ವಿಜಾಪುರ ಜಿಲ್ಲೆಯಲ್ಲಿ ಪ್ರಸಿದ್ಧ ದುರ್ಗಾದೇವಿ

19. Kanitkar: 1934, 'History of India' quoted in Rupla Naik, 1988, Colourful Banjara (Lambani) Tribe through the Ages, Pg-105.


ಕ್ರಿ.ಪೂ. ೬೦೦ ರಿಂದ ೩೬೦ರ ವರೆಗೆ ಲಂಬಾಣಿಗರು ವ್ಯಾಪಾರಕ್ಕಾಗಿ ಸಂಚರಿಸಿದ ಮಾರ್ಗಗಳನ್ನು ಸೂಚಿಸುವ ನಕಾಶೆ
LAMANA MARGAS IN INDIA
In 600 BC to 360 BC
To China
Kabul
Khyber pass
Srinagar
R. Jelam
R. Chinab
Jammu
R. Ravi
R. Sutlej
R. Bias
Bolan pass
Simla
Ambala
Kurukshetra
R. INDUS
Mulla pass
Hasthinapura
Kampilya
Mathura
Kausambi
Ayodhya
Agra
R. Yamuna
R. Ganga
Patliputra
Nalanda
Pattla
Karachi
Minnagara
Ujjain
Vidisha
Sanchi
Gaya
Bagh
Dwarka
R. Narmada
Dantapura
R. TAPTI
R. Mahanadi
Cuttak
totkacha
Nasika
Prathisthana
Bhuvaneswar
Puri
Surpanaka
Mandagora
R. Godavari
Tagara
R. Krishna
Kolanapur
R. Tungabhadra
Suvarna Bhumi (Rangoon)
Amravati
Masulipatam
Goa
Vaijayanthi
R. Cauvery
Poduce
To Malva Dweepa
Bakare
Camara
Madura
Lanka

ಬರಗಾಲ ಸಂಭವಿಸಿದಾಗ, ಇಂತಹ ಸಂಕಷ್ಟದ ಸ್ಥಿತಿಯಲ್ಲಿ ಲಂಬಾಣಿಗರು ಸಾಮಾನ್ಯ ಜನರಿಗೆ ಸಹಾಯ ಮಾಡಿದ ಬಗೆಯನ್ನು ಮುಂಬಯಿ ಗೆಜೆಟೀಯರ್‌ನಲ್ಲಿ ನಮೂದಿಸಲಾಗಿದೆ. ಅದರ ಪ್ರಕಾರ "ಪ್ರಸಿದ್ಧ ದುರ್ಗಾದೇವಿ ಬರಗಾಲವು 1396ರಿಂದ 1407ರವರೆಗೆ ಸಂಭವಿಸಿತ್ತು. ಈ ಬರಗಾಲಕ್ಕೆ ದುರ್ಗಾದೇವಿ ಎಂದು ಹೆಸರಿಡಲು ಕಾರಣವೇನೆಂದರೆ ಶ್ರೀಮಂತ ಬಂಜಾರರ ಹೆಣ್ಣುಮಗಳು ದುರ್ಗಾಬಾಯಿ ಹೆಚ್ಚು ಸಂಪತ್ತು ಹಾಗೂ ಹತ್ತು ಲಕ್ಷ ದನ-ಕರುಗಳನ್ನು ಹೊಂದಿದ್ದಳು ಭೀಕರ ಬರಗಾಲ ಸಂಭವಿಸಿದ ಸಂದರ್ಭದಲ್ಲಿ ನೇಪಾಳ, ಬರ್ಮಾ ಹಾಗೂ ಚೈನಾ ದೇಶಗಳಿಂದ ದವಸ ಧಾನ್ಯಗಳನ್ನು ಖರೀದಿಸಿಕೊಂಡು ಬಂದು ಸಂಕಷ್ಟದಲ್ಲಿದ್ದ ಜನರಿಗೆ ಆಹಾರ ಧಾನ್ಯಗಳನ್ನು ಪೂರೈಸಿ ಸಾವಿರಗಟ್ಟಲೆ ಜನರ ಪ್ರಾಣ ರಕ್ಷಿಸಿದ್ದಾಳೆ."[20] ಇದರಿಂದ ತಿಳಿದುಬರುವುದೇನೆಂದರೆ, ಲಂಬಾಣಿಗರು ಬರಗಾಲದ ಸಂದರ್ಭಗಳಲ್ಲಿ ಅತೀರೇಕವಾದ ಮೌಲ್ಯಾಧಾರಿತ ಸೇವೆಯನ್ನು ಆಧುನಿಕ ಸರಕು ಸಾಗಾಣಿಕೆ ಸಾಧನಗಳಿಲ್ಲದ ಸಂದರ್ಭಗಳಲ್ಲಿ ನೀಡಿದ್ದಾರೆ. ಲಂಬಾಣಿಗರು ಮೊಗಲ ಸೈನಿಕರ ಜೊತೆಸೇರಿ ವಿಜಾಪುರಕ್ಕೆ ಬರುವುದಕ್ಕಿಂತ ಮೊದಲು ಈ ಪ್ರದೇಶದಲ್ಲಿ ಸಂಚರಿಸಿದ್ದು ಕಂಡುಬರುತ್ತದೆ. ಅನೇಕ ಶತಮಾನಗಳಿಂದ ದೇಶ-ವಿದೇಶಗಳಲ್ಲಿ ಸಂಚರಿಸಿದ ಲಂಬಾಣಿಗರು ಬರಗಾಲದಂತಹ ಸಮಸ್ಯೆಗಳಿಗೆ ಒಳಗಾದ ವಿಜಾಪುರಕ್ಕೆ ತಮ್ಮ ಸ್ವ-ಇಚ್ಛೆಯಿಂದ ಬಂದಿಲ್ಲ. ಮೊಗಲ ಸೈನಿಕರು ಅಶಫ್‌ಖಾನನ ನೇತೃತ್ವದಲ್ಲಿ ವಿಜಾಪುರದ ಮೇಲೆ ದಾಳಿ ಮಾಡುವ ಸಂದರ್ಭದಲ್ಲಿ (1631) ಜಿಲ್ಲೆಯು ಭಯಂಕರ ಬರಗಾಲಕ್ಕೆ ತುತ್ತಾಗಿತ್ತು. ಮೊಗಲ ಸೈನಿಕರಿಗೆ ಆಹಾರಧಾನ್ಯ ಹಾಗೂ ಯುದ್ಧದ ಸಾಮಾಗ್ರಿಗಳನ್ನು ಒದಗಿಸಲು ಸಾರಿಗೆ ಸಾಗಾಣಿಕೆಯ ಕೊರತೆ ಉಂಟಾಗಿತ್ತು. ಅಂತಹ ಸಂಕಷ್ಟದ ಸಂದರ್ಭದಲ್ಲಿ ದನ-ಕರುಗಳ ಸಹಾಯದಿಂದ ವ್ಯಾಪಾರ ಮಾಡುತ್ತಿದ್ದ ಲಂಬಾಣಿಗರಿಗೆ ಒತ್ತಾಯಪೂರ್ವಕವಾಗಿ ಮೊಗಲರು ತಮ್ಮ ಸೈನಿಕರಿಗೆ ಆಹಾರಧಾನ್ಯ ಹಾಗೂ ಯುದ್ಧದ ಸಾಮಾಗ್ರಿಗಳನ್ನು ಪೂರೈಸುವ ಕೆಲಸ-ಕಾರ್ಯಗಳಲ್ಲಿ ತೊಡಗಿಸಿ ಬರಗಾಲ ಜಿಲ್ಲೆಯಾದ ವಿಜಾಪುರಕ್ಕೆ ಕರೆದುಕೊಂಡು ಬಂದಿರುವುದು ತಿಳಿದುಬರುತ್ತದೆ.

ಬರಗಾಲ ಜಿಲ್ಲೆಗೆ ಮನಸ್ಸಿಲ್ಲದೆ ಬಂದ ಲಂಬಾಣಿಗರು 20ನೇ ಶತಮಾನದಲ್ಲಿ ತಾಂತ್ರಿಕ ಸರಕು ಸಾಗಾಣಿಕೆಗಳ ಸಾಧನಗಳ ಆಗಮನದಿಂದ ಸಾಂಪ್ರದಾಯಿಕ ಉದ್ಯೋಗ ನಿಂತು ಹೋಯಿತು. ಇದರಿಂದ ಲಂಬಾಣಿಗರು ಒಂದು ಪ್ರದೇಶದಲ್ಲಿ ತಮ್ಮ ಕುಟುಂಬ ಪರಿವಾರ ಸಮೇತ ನೆಲೆಗೊಳ್ಳಬೇಕಾಯಿತು. ಕ್ರಿ.ಶ. 1700ರವರೆಗೆ ಭಾರತದ ಯಾವ ಭಾಗದಲ್ಲಿಯೂ, ಲಂಬಾಣಿಗರು ಶಾಶ್ವತವಾಗಿ ನೆಲೆಸಿರುವುದು ಕಂಡುಬರುವುದಿಲ್ಲ. ಬ್ರಿಟಿಷರ ಆಡಳಿತದ ಅವಧಿಯಲ್ಲಿ ಲಂಬಾಣಿಗರು ಸ್ಥಳೀಯ ರಾಜರಿಗೆ ಸಹಾಯ ಮಾಡುತ್ತಿದ್ದರು ಇದನ್ನು ಸಹಿಸದ ಬ್ರಿಟಿಷರು ಇವರನ್ನು 1897ರ ಅಪರಾಧಿ ಬುಡಕಟ್ಟುಗಳ ಕಾಯ್ದೆಯ ಪ್ರಕಾರ ಇವರ ಚಲನ-ವಲನಗಳನ್ನು ಪ್ರತಿಬಂಧಿಸಿದರು. ನಂತರ 1924ರಲ್ಲಿ ಅಪರಾಧಿ ಬುಡಕಟ್ಟುಗಳ ಪಟ್ಟಿಗೆ ಇವರನ್ನು ಸೇರಿಸಲಾಯಿತು. ಇದರಿಂದ ಇವರ ಚಲನ-ವಲನಗಳು ಸ್ಥಗಿತವಾದವು. ಉದ್ಯೋಗ ಕಳೆದುಕೊಂಡು ಬರಗಾಲ ಜಿಲ್ಲೆಯಲ್ಲಿ ಶಾಶ್ವತ ನೆಲೆಸಿದ ಲಂಬಾಣಿಗರು ಅನಿವಾರ್ಯವಾಗಿ ಕೂಲಿಕಾರರಾಗಿ

---

20. The Bombay Gazetteer, Vol-1, XVI. P -62

ಜೀತದಾಳುಗಳಾಗಿ ಉದ್ಯೋಗ ಮಾಡಲು ಪ್ರಾರಂಬಸಿದರು. ಹಾಗೂ ಸ್ಥಳೀಯ ಉನ್ನತ ಜಾತಿಯ ಜನರಿಂದ ಶೋಷಣೆಗೆ ಒಳಗಾದರು. ಆರ್ಥಿಕವಾಗಿ ಹಿನ್ನಡೆ ಸಾಧಿಸಿದ ವಿಜಾಪುರ ಜಿಲ್ಲೆಯು ಭೂರಹಿತ ಕೂಲಿಕಾರ ಲಂಬಾಣಿಗರಿಗೆ ವರ್ಷದ ಎಲ್ಲಾ ಋತುಗಳಲ್ಲಿ ಉದ್ಯೋಗ ಒದಗಿಸಲು ಸಮರ್ಥವಿಲ್ಲದಿರುವುದರಿಂದ ಅನಿವಾರ್ಯವಾಗಿ ಕೆಲವರು ಉದ್ಯೋಗಕ್ಕಾಗಿ ನೀರಾವರಿ ಸೌಕರ್ಯಗಳಿರುವ ಪ್ರದೇಶಗಳಿಗೆ ವಲಸೆ ಹೋಗುತ್ತಾರೆ. ಮತ್ತೆ ಕೆಲವರು ಸಮುದ್ರ ತೀರ ಪ್ರದೇಶದ ನಗರಗಳಾದ ಮುಂಬೈ ಮತ್ತು ಗೋವೆಗೆ ವಲಸೆ ಹೋಗಿ ಕೊಳಚೆ ಪ್ರದೇಶಗಳಲ್ಲಿ ವಾಸವಾಗುತ್ತಿದ್ದಾರೆ. ಒಂದು ಕಾಲದಲ್ಲಿ ವ್ಯಾಪಾರಕ್ಕಾಗಿ ಅಲೆದಾಡಿದ ಗೋವಾ ಹಾಗೂ ಮುಂಬೈ ನಗರಗಳಿಗೆ ಇಂದು ಕೂಲಿ ಕೆಲಸಕ್ಕಾಗಿ ವಲಸೆ ಹೋಗುತ್ತಿದ್ದಾರೆ.

**ಲಂಬಾಣಿಗರ ಗೋವಾ ವಲಸೆಗೆ ಕಾರಣಗಳು:**

ಯಾವುದೇ ವಲಸೆಯ ಚಲನ-ವಲನಗಳು ನಡೆಯಬೇಕಾದರೆ ತಳ್ಳುವ ಹಾಗೂ ಸೆಳೆಯುವ ಎರಡು ಅಂಶಗಳು ಬಹಳ ಪ್ರಮುಖವಾದ ಪಾತ್ರವಹಿಸುತ್ತವೆ. ವಲಸೆ ಹೋಗುವ ಪ್ರದೇಶದಲ್ಲಿಯ ಹೆಚ್ಚು ಕೂಲಿದರ, ಉದ್ಯೋಗಾವಕಾಶಗಳು, ಶ್ರಮಕ್ಕೆ ತಕ್ಕ ಕೂಲಿ ಮುಂತಾದ ಅನುಕೂಲಕರ ಅಂಶಗಳು ಹಾಗೂ ಸ್ವ ಸ್ಥಳದಲ್ಲಿಯ ಬಡತನ, ಕಡಿಮೆಕೂಲಿ, ನಿರುದ್ಯೋಗ, ಬರಗಾಲದಂತಹ ಅನಾನುಕೂಲಕರ ಅಂಶಗಳಿಂದ ಪ್ರಭಾವಿತರಾಗಿ ಜನರು ವಲಸೆಹೋಗುತ್ತಾರೆ. ವಿಜಾಪುರ ಜಿಲ್ಲೆಯಲ್ಲಿಯ ಬರಗಾಲ, ಬಡತನ, ನಿರುದ್ಯೋಗ, ಕಡಿಮೆಕೂಲಿ, ಅರೇ ಉದ್ಯೋಗ, ತುಂಡುಭೂಮಿ ಮುಂತಾದ ನಕಾರಾತ್ಮಕ ಅಂಶಗಳು ಲಂಬಾಣಿಗರನ್ನು ವಲಸೆ ಹೋಗಲು ತಳ್ಳುತ್ತವೆ. ಯಾವುದೇ ವಲಸೆಯ ಚಲನ-ವಲನಗಳು ಸ್ವಇಚ್ಛೆಯಿಂದ ನಡೆಯುವುದಿಲ್ಲ ಗ್ರಾಮೀಣ ಪ್ರದೇಶದದಿಂದ ಜನರು ತಳ್ಳಲ್ಪಡುತ್ತಾರೆ.[21]

ನನ್ನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ನರಸಲಗಿ ತಾಂಡಾದ ಲಂಬಾಣಿಗರಿಗೆ ನೀವು ವರ್ಷದ ಎಲ್ಲಾ ದಿನಗಳಲ್ಲಿಯೂ, ಕೆಲಸ-ಕಾರ್ಯಗಳಲ್ಲಿ ನಿರತರಾಗಿರುತ್ತಿರಾ? ಎಂದು ಕೇಳಲಾಗಿದ್ದ ಪ್ರಶ್ನೆಗೆ ಕೇವಲ ಪ್ರತಿಶತ 3.33ರಷ್ಟು ಮಾಹಿತಿದಾರರು ಹೌದು ಎಂದು ಪ್ರತಿಕ್ರಿಯೆ ನೀಡಿದರೆ ಪ್ರತಿಶತ 96.67ರಷ್ಟು ಮಾಹಿತಿದಾರರು ಇಲ್ಲ ಎಂದು ಪ್ರತಿಕ್ರಿಯೆ ನೀಡಿದ್ದು ಇದರಿಂದ ಲಂಬಾಣಿಗರಿಗೆ ವರ್ಷದ ಎಲ್ಲಾ ದಿನಗಳಲ್ಲಿ ಉದ್ಯೋಗ ಸಿಗುವುದಿಲ್ಲವಾದ್ದರಿಂದ ಉದ್ಯೋಗಕ್ಕಾಗಿ ನಗರ ಪ್ರದೇಶಗಳಿಗೆ ವಲಸೆ ಹೋಗುತ್ತಾರೆ. ಭೂಮಿ ಹೊಂದಿದವರು ಕೆಲವು ತಿಂಗಳುಗಳವರೆಗೆ ಮಾತ್ರ ವಲಸೆ ಹೋಗಿ ಭೂಮಿ ನಾಟಿಮಾಡುವ ವೇಳೆಯಲ್ಲಿ ಮರಳಿ ಬರುತ್ತಾರೆ. ಭೂಮಿ ಇಲ್ಲದವರು ವಲಸೆ ಹೋದ ಪ್ರದೇಶದಲ್ಲಿಯೇ ನೆಲೆಸಿದ್ದು ವರ್ಷಕ್ಕೊಮ್ಮೆ ಹಬ್ಬ-ಹರಿದಿನಗಳ ಸಂದರ್ಭದಲ್ಲಿ ಯಾರಾದರೂ ಮರಣ ಹೊಂದಿದ ಸಂದರ್ಭದಲ್ಲಿ ಮೂಲ ಸ್ಥಳಕ್ಕೆ ಬಂದು ಮತ್ತೆ ಹಿಂತಿರುಗುತ್ತಾರೆ. ನರಸಲಗಿ ತಾಂಡಾದ ವಲಸೆ ಹೋಗುವ ಒಟ್ಟು ಕುಟುಂಬಗಳಲ್ಲಿ ಪ್ರತಿಶತ 91.67ರಷ್ಟು ಕುಟುಂಬಗಳ ಸದಸ್ಯರು ಗೋವೆಗೆ ವಲಸೆ ಹೋಗಿರುತ್ತಾರೆ. ಹಾಗೂ ಪ್ರತಿಶತ 8.33ರಷ್ಟು ಕುಟುಂಬಗಳ ಸದಸ್ಯರು ಗೋವೆ ಹಾಗೂ ಮಹಾರಾಷ್ಟ್ರಕ್ಕೆ ವಲಸೆ

21. Ashish Bose: 1973: 'Studies in Indias Urbanisation,' (1901-1971) Tata- Mcgraw, Publishing Ltd. Bombay Pg -147.

ಹೋಗಿರುತ್ತಾರೆ. ಕುಟುಂಬದಲ್ಲಿ ವಲಸೆ ಹೋದವರ ಸಂಖ್ಯೆಯನ್ನು ಈ ಮುಂದಿನ ಕೋಷ್ಟಕದಿಂದ ತಿಳಿಯಬಹುದು.

**ಕೋಷ್ಟಕ 25, ಕುಟುಂಬದಲ್ಲಿ ವಲಸೆ ಹೋದವರ ಸಂಖ್ಯೆ ಹಾಗೂ ಶೇಖಡವಾರು ಹಂಚಿಕೆ.**

**(Number & percentage distribution of migrants)**

| ವಲಸೆ ಹೋದವರ ಸಂಖ್ಯೆ | ಗಂಡು | | ಹೆಣ್ಣು | | ಒಟ್ಟು | |
|---|---|---|---|---|---|---|
| | ಸಂಖ್ಯೆ | ಪ್ರತಿಶತ | ಸಂಖ್ಯೆ | ಪ್ರತಿಶತ | ಸಂಖ್ಯೆ | ಪ್ರತಿಶತ |
| ಒಬ್ಬ ವ್ಯಕ್ತಿ | 26 | 43.33 | 16 | 26.67 | 20 | 33.33 |
| ಇಬ್ಬರು ವ್ಯಕ್ತಿಗಳು | 16 | 26.67 | 8 | 13.33 | 15 | 25.00 |
| 3 ರಿಂದ 4 ವ್ಯಕ್ತಿಗಳು | 10 | 16.67 | 9 | 15 | 9 | 15.00 |
| 5 ರಿಂದ 6 ವ್ಯಕ್ತಿಗಳು | 4 | 6.67 | 1 | 1.67 | 12 | 20.00 |
| 7 ರಿಂದ 8 ವ್ಯಕ್ತಿಗಳು | 0 | 0.00 | 0 | 0.00 | 4 | 6.67 |
| ಯಾರೂ ಇಲ್ಲ | 4 | 6.67 | 26 | 43.33 | 0 | 0.00 |
| **ಒಟ್ಟು** | **60** | **100.00** | **60** | **100.00** | **60** | **100.00** |

ಮೇಲಿನ ಕೋಷ್ಟಕದ ಪ್ರಕಾರ ಪ್ರತಿಶತ 43.33ರಷ್ಟು ಕುಟುಂಬಗಳಲ್ಲಿ ಒಬ್ಬ ಪುರುಷ ಹಾಗೂ ಪ್ರತಿಶತ 26.67ರಷ್ಟು ಕುಟುಂಬಗಳಲ್ಲಿ ಒಬ್ಬ ಸ್ತ್ರೀಯರು ವಲಸೆ ಹೋಗಿದ್ದಾರೆ. ಹಾಗೂ ಪ್ರತಿಶತ 50.10ರಷ್ಟು ಕುಟುಂಬಗಳಲ್ಲಿ 2 ರಿಂದ 6 ಜನರು ಪುರುಷರು ಹಾಗೂ ಪ್ರತಿಶತ 30ರಷ್ಟು ಕುಟುಂಬಗಳಲ್ಲಿ 2 ರಿಂದ 6 ಜನರು ಸ್ತ್ರೀಯರು ವಲಸೆ ಹೋಗಿದ್ದಾರೆ. ಪ್ರತಿಶತ 6.67ರಷ್ಟು ಕುಟುಂಬಗಳಲ್ಲಿ ಸ್ತ್ರೀಯರು ಮಾತ್ರ ವಲಸೆ ಹೋದರೆ ಪ್ರತಿಶತ 43.33ರಷ್ಟು ಕುಟುಂಬಗಳಲ್ಲಿ ಪುರುಷರು ಮಾತ್ರ ವಲಸೆ ಹೋಗಿದ್ದಾರೆ. ಈ ಅಂಕಿಅಂಶಗಳ ಪ್ರಕಾರ ಹೆಚ್ಚಿನ ಸಂಖ್ಯೆಯಲ್ಲಿ ಪುರುಷರು ಗೋವೆಗೆ ವಲಸೆ ಹೋಗಿದ್ದಾರೆ. ಲಂಬಾಣಿಗರು ಗೋವಾ ವಲಸೆ ಹೋಗಲು ಕಾರಣವಾದ ಅಂಶಗಳನ್ನು ಈ ಮುಂದಿನ ಕೋಷ್ಟಕದ ಸಹಾಯದಿಂದ ತಿಳಿಯಬಹುದು.

**ಕೋಷ್ಟಕ 26, ಮಾಹಿತಿದಾರರ ವಲಸೆಗೆ ಕಾರಣವಾದ ಅಂಶಗಳ ಆಧಾರಿತ ಸಂಖ್ಯೆ ಹಾಗೂ ಶೇಕಡವಾರು ಹಂಚಿಕೆ. (Number & percentage distribution of respondents by reason for migration)**

| ಕಾರಣಗಳು | ಸಂಖ್ಯೆ | ಪ್ರತಿಶತ |
|---|---|---|
| ಬಡತನ | 36 | 60.00 |
| ನಿರುದ್ಯೋಗ | 14 | 23.33 |
| ಬರಗಾಲ | 9 | 15.00 |
| ಕಡಿಮೆ ಕೂಲಿ | 1 | 1.67 |
| ಒಟ್ಟು | **60** | **100.00** |

## 1. ಬಡತನ (Poverty)

ಭಾರತದಲ್ಲಿ ಬಡತನವು ಹಳ್ಳಿಗಳಲ್ಲಿ ಮತ್ತು ನಗರಗಳಲ್ಲಿ ಕಂಡುಬರುವ ಒಂದು ಘೋರ ಜ್ವಲಂತ, ಸಂಕೀರ್ಣ ಸಮಸ್ಯೆಯಾಗಿದೆ. ಬಡತನದ ಸ್ಥಿತಿಯಲ್ಲಿ ವ್ಯಕ್ತಿಗೆ ಮೂಲಭೂತ ಬೇಡಿಕೆಗಳಾದ ಆಹಾರ, ಬಟ್ಟೆ, ವಸತಿ, ಔಷಧೋಪಚಾರ ಮುಂತಾದವುಗಳನ್ನು ಪಡೆದುಕೊಳ್ಳಲಿಕ್ಕೆ ಸಾಧ್ಯವಾಗಲಾರದು. ಹೀಗೆ ಮೂಲಭೂತ ಅವಶ್ಯಕತೆಗಳಿಂದ ವಂಚಿತವಾಗಿರುವ ಸ್ಥಿತಿಯೇ ಬಡತನ. ಬಡತನದ ಸ್ಥಿತಿಯು ಜನರನ್ನು ವಲಸೆ ಹೋಗಲು ತಳ್ಳುತ್ತದೆ. ಪ್ರಸಿದ್ಧ ಅರ್ಥಶಾಸ್ತ್ರಜ್ಞರಾದ ದಾಂಡೇಕರ ಮತ್ತು ರಥ್‌ರವರು (1971) ಗ್ರಾಮೀಣ ಬಡತನವನ್ನು ಜನರನ್ನು ವಲಸೆಗೆ ತಳ್ಳುವ ಅಂಶವೆಂದು ಪರಿಗಣಿಸಿದ್ದಾರೆ.[22] ಲಂಬಾಣಿಗರ ಗೋವಾ ವಲಸೆಗೆ ಬಡತನವು ಪ್ರಮುಖವಾದ ಕಾರಣವಾಗಿದೆ. ವಿಜಾಪುರ ಜಿಲ್ಲೆಯಲ್ಲಿ ಆದಾಯದ ಮೂಲಗಳು ಕಡಿಮೆ ಇರುವುದರಿಂದ, ಹಾಗೂ ಅಲೆಮಾರಿಗಳಾಗಿದ್ದ ಲಂಬಾಣಿಗರು ಸಾಂಪ್ರದಾಯಿಕ ಉದ್ಯೋಗ ಕಳೆದುಕೊಂಡು ಆರ್ಥಿಕವಾಗಿ ದುರ್ಬಲರಾಗಿರುವುದರಿಂದ ಹೆಚ್ಚಿನ ಸಂಖ್ಯೆಯ ಲಂಬಾಣಿಗರು ಬಡತನದಲ್ಲಿ ಜೀವನ ಸಾಗಿಸುತ್ತಿದ್ದಾರೆ. ಇವರಿಗೆ ವಲಸೆ ಹೋಗಲು ಮನಸ್ಸು ಇಲ್ಲದಿದ್ದರೂ ಆರ್ಥಿಕ ಬಿಕ್ಕಟ್ಟುಗಳು ಅವರನ್ನು ವಲಸೆ ಹೋಗುವಂತೆ ಮಾಡಿವೆ. ನಮ್ಮ ಅಧ್ಯಯನದ ಪ್ರಕಾರ ಪ್ರತಿಶತ 60.00ರಷ್ಟು ನರಸಲಗಿ ತಾಂಡಾದ ಲಂಬಾಣಿ ಕುಟುಂಬದ ಸದಸ್ಯರು ಬಡತನದಿಂದ ಗೋವೆಗೆ ವಲಸೆ ಹೋಗುತ್ತಾರೆ. ನಜ್ಮಾ ಖಾನ್‌ರವರ[23] ಉತ್ತರ ಪ್ರದೇಶದ ಪೂರ್ವಭಾಗದ ಜನರ ಅಧ್ಯಯನದಲ್ಲಿಯೂ, ಹೆಚ್ಚಿನ ಸಂಖ್ಯೆಯ ಜನರ ವಲಸೆಗೆ ವಿಪರೀತವಾದ ಬಡತನ ಹಾಗೂ ಹಿಂದುಳಿಯುವಿಕೆ ಮುಖ್ಯ ಕಾರಣವಾಗಿರುವಂತೆ ಲಂಬಾಣಿಗರ ವಲಸೆಗೂ ಬಡತನವು ಮುಖ್ಯ ಕಾರಣವಾಗಿದೆ. ಉದಾಹರಣೆಗಾಗಿ ಸಂಗತಿ ಸಂಖ್ಯೆ 22ರ ಕುಟುಂಬದ ಮುಖ್ಯಸ್ಥ, ಕೂಲಿಕೆಲಸ ಮಾಡುತ್ತಿದ್ದಾರೆ. ಇವನ ವಯಸ್ಸು 65, ಇವನ ಕುಟುಂಬದಲ್ಲಿ ಒಟ್ಟು 8 ಜನ ಸದಸ್ಯರು ವಾಸವಾಗಿದ್ದಾರೆ. ಇವನಿಗೆ ಇಬ್ಬರು ಮಕ್ಕಳಿದ್ದು ಬಡತನದಿಂದ ಶಿಕ್ಷಣ ಪಡೆದಿಲ್ಲ. ಈ ಕುಟುಂಬ ಸಂಪೂರ್ಣ ಕೂಲಿಕೆಲಸವನ್ನು ಅವಲಂಬಿಸಿ ಜೀವನ ಸಾಗಿಸುತ್ತಿದ್ದೂ, ಇವರಿಗೆ ಆರ್ಥಿಕ ಸಾಧನಗಳಾದ ಭೂಮಿ, ವ್ಯಾಪಾರಗಳಿಲ್ಲ. ಆದ್ದರಿಂದ ಬಡತನದ ಸಮಸ್ಯೆಯನ್ನು ಎದುರಿಸಿ ಕುಟುಂಬದ 4 ಜನ ಸದಸ್ಯರು ಕೂಲಿಕೆಲಸಕ್ಕಾಗಿ ಗೋವೆಗೆ ವಲಸೆ ಹೋಗಿದ್ದಾರೆ. ಈ ಕುಟುಂಬದ ಸದಸ್ಯರ ವಲಸೆಗೆ ಮುಖ್ಯವಾಗಿ ಬಡತನದ ಸ್ಥಿತಿ-ಗತಿ ಕಾರಣವಾಗಿದೆ.

## 2. ನಿರುದ್ಯೋಗ (Unemployment):

ಎರಡನೆಯದಾಗಿ ಲಂಬಾಣಿಗರ ವಲಸೆಗೆ ಸ್ವಸ್ಥಳದಲ್ಲಿರುವ ಉದ್ಯೋಗ ಸಿಗದಿರುವ ಸ್ಥಿತಿ-ಗತಿಗಳು ಕಾರಣವಾಗಿದೆ. ವಿಜಾಪುರ ಜಿಲ್ಲೆಯಲ್ಲಿ ಒಣಬೇಸಾಯ ಹೆಚ್ಚಾಗಿ ಇರುವುದರಿಂದ ವರ್ಷದ ಎಲ್ಲಾ ದಿನಗಳಲ್ಲಿ ಜನರಿಗೆ ಉದ್ಯೋಗ ಸಿಗುವುದಿಲ್ಲ. ಇದರ ಪರಿಣಾಮ ನೇರವಾಗಿ ದುಡಿಯುವ ವಯಸ್ಸಿನ ಯುವಕರ ಮೇಲಾಗುತ್ತದೆ. ನಿರುದ್ಯೋಗಿಗಳಾದ ಯುವಕರು ಉದ್ಯೋಗ ಪಡೆಯುವುದಕ್ಕಾಗಿ ವಲಸೆ ಹೋಗಲು ಮುಂದಾಗುತ್ತಾರೆ. ನಮ್ಮ ಅಧ್ಯಯನದ ಪ್ರಕಾರ ನರಸಲಗಿ ತಾಂಡಾದ ಪ್ರತಿಶತ 23.00ರಷ್ಟು

---

22. Dandekar and Rath: 1971: 'Poverty in India' Indian School of Political Economy Poona.

ಕುಟುಂಬಗಳ ಸದಸ್ಯರು ನಿರುದ್ಯೋಗದಿಂದಾಗಿ ಗೋವೆಗೆ ವಲಸೆ ಹೋಗಿದ್ದಾರೆ. ಉದಾಹರಣಗೆ ಸಂಗತಿ ಸಂಖ್ಯೆ 47ರ ಕುಟುಂಬದಲ್ಲಿ ವಾಸವಾಗಿರುವ ಕುಟುಂಬದ ಮುಖ್ಯಸ್ಥನ ವಯಸ್ಸು 70, ಉದ್ಯೋಗ ಕೂಲಿ, ಅನಕ್ಷರಸ್ಥ, ಇವನ ಕುಟುಂಬದಲ್ಲಿ ಒಟ್ಟು 9 ಜನಸದಸ್ಯರು ವಾಸವಾಗಿದ್ದಾರೆ. ಆರ್ಥಿಕ ಸಮಸ್ಯೆಯಿಂದ ಈ ಕುಟುಂಬದ ಸದಸ್ಯರು. ಶಿಕ್ಷಣ ಪಡೆದಿಲ್ಲ. ಒಬ್ಬ ಸದಸ್ಯ ಮಾತ್ರ 4ನೇ ತರಗತಿವರೆಗೆ ಶಿಕ್ಷಣ ಪಡೆದು ಅರ್ಧಕ್ಕೆ ನಿಲ್ಲಿಸಿದ್ದಾನೆ. ಇವರಿಗೆ ಭೂಮಿ, ಇಲ್ಲಾ ಸರ್ಕಾರ ಒದಗಿಸಿದ ಮನೆ ಇದೆ. ನರಸಲಗಿ ತಾಂಡಾದಲ್ಲಿ ನಿರಂತರ ಕೂಲಿಕೆಲಸ ಸಿಗದೇ ಇರುವುದರಿಂದ ಈ ಕುಟುಂಬದ 7 ಜನಸದಸ್ಯರು ಗೋವೆಗೆ ವಲಸೆ ಹೋಗಿದ್ದಾರೆ. ಸ್ವಸ್ಥಳದಲ್ಲಿರುವ ಇವರ ವೃದ್ಧ ತಂದೆತಾಯಿಗಳು ಅನಾರೋಗ್ಯದಿಂದ ಬಳಲುತ್ತಿದ್ದಾರೆ. ಈ ಕುಟುಂಬದಲ್ಲಿ ಹೆಚ್ಚು ಜನರು ವಲಸೆ ಹೋಗಲು ನಿರುದ್ಯೋಗ ಸಮಸ್ಯೆಯೇ ಮೂಲ ಕಾರಣವಾಗಿದೆ.

### 3. ಬರಗಾಲ (Drought)

ವಿಜಾಪುರ ಜಿಲ್ಲೆಯು ಮೊದಲಿನಿಂದಲೂ ಬರಗಾಲಕ್ಕೆ ತುತ್ತಾಗುತ್ತಾ ಬಂದಿದೆ. ಇದರಿಂದ ಕೃಷಿಕಾರ್ಯಗಳು ನಿಂತು ಹೋಗಿ ಜನರ ಆರ್ಥಿಕ ಜೀವನದ ಮೇಲೆ ಪರಿಣಾಮಬೀರಿ ಜೀವನ ಸಾಗಿಸುವುದು ಕಷ್ಮದಾಯಕವಾಗುವುದರಿಂದ ನಗರ ಪ್ರದೇಶಗಳಿಗೆ ಗುಳೇ ಹೋಗುತ್ತಾರೆ. ನಮ್ಮ ಅಧ್ಯಯನದ ನಮೂನೆಗಳಲ್ಲಿ ಪ್ರತಿಶತ 15.00ರಷ್ಟು ಕುಟುಂಬಗಳು ಬರಗಾಲದಿಂದ ಆರ್ಥಿಕ ಸಮಸ್ಯೆಗಳನ್ನು ಎದುರಿಸಿ ವಲಸೆ ಹೋಗಿದ್ದಾರೆ. ಉದಾಹರಣೆಗಾಗಿ ಸಂಗತಿ ಸಂಖ್ಯೆ 53ರ ಕುಟುಂಬದ ಮುಖ್ಯಸ್ಥನ ವಯಸ್ಸು 55, ಉದ್ಯೋಗ ಒಕ್ಕಲುತನ, ಇವನ ಕುಟುಂಬದಲ್ಲಿ ಒಟ್ಟು 8 ಜನಸದಸ್ಯರು ವಾಸವಾಗಿದ್ದಾರೆ. ಈ ಕುಟುಂಬದ ಆರ್ಥಿಕ ಮೂಲ ಕೃಷಿಯಾಗಿದ್ದೂ 10 ಎಕರೆ ಭೂಮಿ ಹೊಂದಿದ್ದಾರೆ. ಆದರೆ ಬರಗಾಲದಿಂದ ಕೊಳವೆ ಭಾವಿ ಬತ್ತಿ ಹೋಗಿದ್ದರಿಂದ ಕೃಷಿಕಾರ್ಯಗಳು ನಿಂತು ಹೋಗಿ ಆರ್ಥಿಕ ಸಮಸ್ಯೆ ಎದುರಿಸಿ ಸಾಲ ಮಾಡಿಕೊಂಡು ಕುಟುಂಬದ ಇಬ್ಬರು ಸದಸ್ಯರು ವಲಸೆ ಹೋಗಿದ್ದಾರೆ. ಈ ಮೊದಲು ಈ ಕುಟುಂಬದ ಸದಸ್ಯರು ಎಂದೂ ವಲಸೆ ಹೋಗಿರಲಿಲ್ಲ. ಬರಗಾಲವಿರುವುದರಿಂದ ಅನಿವಾರ್ಯವಾಗಿ ಪ್ರಪ್ರಥಮ ಬಾರಿಗೆ ಗೋವೆಗೆ ಕೂಲಿ ಕೆಲಸ ಮಾಡಲು ವಲಸೆ ಹೋಗಿದ್ದಾರೆ.

### 4. ಕಡಿಮೆ ಕೂಲಿ (Low Wages)

ವಿಜಾಪುರ ಜಿಲ್ಲೆಯಲ್ಲಿ 1991ರ ಜನಗಣತಿಯ ಪ್ರಕಾರ ಒಟ್ಟು ಜನಸಂಖ್ಯೆಯಲ್ಲಿ ಪ್ರತಿಶತ 37.92ರಷ್ಟು ಜನರು ಮುಖ್ಯ ಕೆಲಸಗಾರರಿದ್ದಾರೆ. ಒಟ್ಟು ಮುಖ್ಯ ಕೆಲಸಗಾರರಲ್ಲಿ ಪ್ರತಿಶತ 31.52ರಷ್ಟು ಜನರು ಸಾಗುವಳಿದಾರರು, ಹಾಗೂ ಪ್ರತಿಶತ 43.15ರಷ್ಟು ಜನರು ಕೃಷಿಕಾರ್ಮಿಕರಾಗಿದ್ದಾರೆ. ಸಾಗುವಳಿದಾರರು ವಿಜಾಪುರ, ಜಮಖಂಡಿ, ಸಿಂದಗಿ, ಮುಧೋಳ, ಬಸವನ ಬಾಗೇವಾಡಿ ಮತ್ತು ಬದಾಮಿ ತಾಲ್ಲೂಕುಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಕೃಷಿಕಾರ್ಮಿಕರು ವಿಜಾಪುರ, ಇಂಡಿ, ಸಿಂದಗಿ, ಬಸವನ ಬಾಗೇವಾಡಿ, ಬದಾಮಿ, ಜಮಖಂಡಿ ಹಾಗೂ ಮುಧೋಳ ತಾಲ್ಲೂಕುಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ.[24]

---

23. Najmam Khan: 1986: 'Pattern of rural out migration' B.R. Publishing co p-82.

24. ಡಾ.ಮುನಿಸ್ವಾಮಿ: ೧೯೯೯ (ಸಂ) ಭಾರತದ ಗ್ಯಾಸೆಟಿಯರ್, ಬಿಜಾಪುರ ಜಿಲ್ಲೆ, ಪುಟ -೩೦೩

ವಿಜಾಪುರದ ಹೊಸ ಜಿಲ್ಲೆಯ ತಾಲ್ಲೂಕುಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕೃಷಿಕಾರ್ಮಿಕರಾಗಿದ್ದಾರೆ. ಕೂಲಿಕಾರರಿಗೆ ಜಿಲ್ಲೆಯಲ್ಲಿ ಹಣದ ಬದಲಾಗಿ ಕೂಲಿ ಕಾಳುಕಡಿಗಳನ್ನು ಕೊಡುವ ಪದ್ಧತಿ ರೂಢಿಯಲ್ಲಿದೆ 1966ರಲ್ಲಿ ಪ್ರಕಟವಾದ ವಿಜಾಪುರ ಜಿಲ್ಲೆಯ ಗ್ಯಾಜೆಟಿಯರ್‌ನಲ್ಲಿ ನಮೂದಿಸಿದಂತೆ "ಬಾಗಲಕೋಟೆ, ಜಮಖಂಡಿ ಹಾಗೂ ವಿಜಾಪುರ ತಾಲ್ಲೂಕುಗಳನ್ನು ಹೊರತುಪಡಿಸಿ ಉಳಿದ ತಾಲ್ಲೂಕುಗಳಲ್ಲಿ ಕೂಲಿಕಾರರು ಕಡಿಮೆಕೂಲಿ ಪಡೆಯುತ್ತಾರೆ.[25] ನಮ್ಮ ಅಧ್ಯಯನದ ನಮೂನೆಯ ಪ್ರತಿಶತ 1.67ರಷ್ಟು ಕುಟುಂಬಗಳ ಸದಸ್ಯರು ಕಡಿಮೆಕೂಲಿಯಿಂದ ಜೀವನ ಸಾಗಿಸಲಿಕ್ಕಾಗದೇ ಹೆಚ್ಚು ಕೂಲಿದರವಿರುವ ಗೋವಾ ಪ್ರದೇಶಕ್ಕೆ ವಲಸೆ ಹೋಗಿದ್ದಾರೆ.

ಮೇಲಿನ ಕಾರಣಗಳಲ್ಲದೆ ಇನ್ನೂ ಕೆಲವು ಅಂಶಗಳು ಜನರ ಚಲನ-ವಲನಗಳಿಗೆ ಕಾರಣವಾಗಿವೆ. ವಿಜಾಪುರ ಜಿಲ್ಲೆಯಲ್ಲಿ ನೀರಾವರಿ ಸೌಲಭ್ಯಗಳು ಕಡಿಮೆ ಇದ್ದು, 1996-97ನೇ ಸಾಲಿನಲ್ಲಿ 13,731,36 ಹೆಕ್ಟೇರ್ ಪ್ರದೇಶ ಸಾಗುವಳಿಗೆ ಒಳಪಟ್ಟಿದ್ದು, ಅದರಲ್ಲಿ ಕೇವಲ 1,03828 ಹೆಕ್ಟೇರ್ ಭೂಮಿ ಮಾತ್ರ ನೀರಾವರಿ ಸೌಲಭ್ಯಗಳಿಗೆ ಒಳಪಟ್ಟಿದ್ದೆ. ನೀರಾವರಿ ಸೌಲಭ್ಯಗಳು ಹೆಚ್ಚಾಗಿ ಇಲ್ಲದಿರುವುದರಿಂದ ಜಿಲ್ಲೆಯ ಜನರು ವಲಸೆ ಹೋಗುತ್ತಾರೆ. ನಮ್ಮ ಅಧ್ಯಯನದ ಪ್ರಕಾರ ನೀರಾವರಿ ಸೌಲಭ್ಯಗಳು ಸರಿಯಾಗಿ ದೊರೆಯದೆ ಇರುವುದರಿಂದ ನರಸಲಗಿ ತಾಂಡಾದ ಲಂಬಾಣಿಗರು ಗೋವೆಗೆ ವಲಸೆ ಹೋಗಿರುವುದನ್ನು ಮುಂದಿನ ಕೋಷ್ಟಕದಿಂದ ಕಂಡುಕೊಳ್ಳಬಹುದು.

**ಕೋಷ್ಟಕ ೨೭, ಮಾಹಿತಿದಾರರ ಭೂಮಿಗೆ ನೀರಾವರಿ ಸೌಲಭ್ಯಗಳು ದೊರೆಯುವಿಕೆ ಹಾಗೂ ಕುಟುಂಬದ ಸದಸ್ಯರ ವಲಸೆ ಆಧಾರಿತ ಸಂಖ್ಯೆ ಮತ್ತು ಶೇಕಡವಾರು ಹಂಚಿಕೆ. (Number & percent of respondents by availability of irrigation facility to land & number of persons migrated)**

| | ವಲಸೆ ಹೋದವರ ಸಂಖ್ಯೆ | | | | | |
|---|---|---|---|---|---|---|
| ನೀರಾವರಿ ಸೌಲಭ್ಯಗಳ ಪ್ರಕಾರಗಳು | 1 | 2 | 3 ರಿಂದ 4 | 5 ರಿಂದ 6 | 7 ರಿಂದ 8 | ಒಟ್ಟು |
| ಭೂಮಿ ಇಲ್ಲದವರು | 5 | 3 | 4 | 6 | 3 | 21 |
| ಪ್ರತಿಶತ | 25.00 | 20.00 | 44.44 | 50.00 | 75.00 | 35.00 |
| ಭಾವಿ | 2 | 2 | 1 | 1 | 0 | 6 |
| ಪ್ರತಿಶತ | 10.00 | 13.33 | 11.11 | 8.33 | 0.00 | 10.00 |
| ಕೊಳವೆಭಾವಿ | 10 | 4 | 1 | 4 | 0 | 19 |
| ಪ್ರತಿಶತ | 50.00 | 26.67 | 11.11 | 33.33 | 0.00 | 31.67 |
| ನೀರಾವರಿ ಸೌಲಭ್ಯಗಳಿಲ್ಲದವರು | 3 | 6 | 3 | 1 | 1 | 14 |
| ಪ್ರತಿಶತ | 15.00 | 40.00 | 33.33 | 8.33 | 25.00 | 23.33 |
| ಒಟ್ಟು | **20** | **15** | **9** | **12** | **4** | **60** |
| ಪ್ರತಿಶತ | **100.00** | **100.00** | **100.00** | **100.00** | **100.00** | **100.00** |

25. B.N. Sathyan, 1966 (Ed) Gazatteer of India Mysore State, Bijapur District, P-163

ಮೇಲಿನ ಕೋಷ್ಟಕದ ಪ್ರಕಾರ ಪ್ರತಿಶತ 35.00ರಷ್ಟು ಭೂಹೀನರು, ನೀರಾವರಿ ಸೌಲಭ್ಯವಿದ್ದು ಬರಗಾಲದಿಂದ ನೀರಾವರಿ ಸೌಲಭ್ಯ ದೊರೆಯದೆ ಪ್ರತಿಶತ 41.67ರಷ್ಟು ಕುಟುಂಬದ ಸದಸ್ಯರು ಹಾಗೂ ಪ್ರತಿಶತ 23.33ರಷ್ಟು ಕುಟುಂಬಗಳ ಭೂಮಿಗೆ ನೀರಾವರಿ ಸೌಲಭ್ಯಗಳಿಲ್ಲದಿರುವುದರಿಂದ ವಲಸೆ ಹೋಗಿದ್ದಾರೆ. ಮೇಲಿನ ಅಂಕಿ-ಅಂಶಗಳ ಪ್ರಕಾರ ಲಂಬಾಣಿಗರ ವಲಸೆಗೆ ನೀರಾವರಿ ಸೌಲಭ್ಯಗಳ ಕೊರತೆ ಹಾಗೂ ಒಣಬೇಸಾಯ ಕಾರಣವಾಗಿರುವುದು ಸ್ಪಷ್ಟವಾಗುತ್ತದೆ.

**ತುಂಡುಭೂಮಿ (Fragmentation of Holdings)**

ಕಡಿಮೆ ಇರುವ ಉಳುವಭೂಮಿ, ಉಳಲುಭೂಮಿ ಇಲ್ಲದಿರುವ ಸ್ಥಿತಿ-ಗತಿಗಳಿಂದ ಜನರು ಕುಟುಂಬ ನಿರ್ವಹಿಸಲು ಅಗತ್ಯವಾದ ಆರ್ಥಿಕತೆಯನ್ನು ಪಡೆಯುವಲ್ಲಿ ವಿಫಲರಾಗುತ್ತಾರೆ. ಹಾಗೂ ತುಂಡುಭೂಮಿಯಲ್ಲಿ ಕುಟುಂಬದ ಎಲ್ಲಾ ಸದಸ್ಯರಿಗೆ ಉದ್ಯೋಗವಿರುವುದಿಲ್ಲ. ಆದ್ದರಿಂದ ನಿರುದ್ಯೋಗಿ ಸದಸ್ಯರು ವಲಸೆ ಹೋಗಲು ಮುಂದಾಗುತ್ತಾರೆ. ಸಾಂಪ್ರದಾಯಿಕ ಉದ್ಯೋಗ ಕಳೆದುಕೊಂಡು ಇತ್ತೀಚೆಗೆ ಶಾಶ್ವತ ನೆಲೆಗೊಂಡ ಲಂಬಾಣಿಗರಿಗೆ ಹೆಚ್ಚು ಭೂಮಿ ಸೀಮೆಗಳಿಲ್ಲ. ಬೇರೆಯವರ ಜಮೀನುಗಳಲ್ಲಿ ಕೂಲಿಕಾರರಾಗಿ, ಜೀತದಾಳುಗಳಾಗಿ ದುಡಿದು ಅಲ್ಪ-ಸ್ವಲ್ಪ ಭೂಮಿ ಖರೀದಿಸಿದ್ದು ಅದೂ ಕಡಿಮೆ ಗುಣಮಟ್ಟದ ಮರಡಿಭೂಮಿ ಹೊಂದಿದ್ದಾರೆ. ಇಂತಹ ಭೂಮಿಗಳು ನೀರಾವರಿ ಸೌಲಭ್ಯಗಳಿಂದ ವಂಚಿತವಾಗಿವೆ. ನಮ್ಮ ಅಧ್ಯಯನದ ಪ್ರಕಾರ ನರಸಲಗಿ ತಾಂಡಾದ ಜನರ ವಲಸೆಗೆ ತುಂಡುಭೂಮಿ ಕಾರಣವಾಗಿದ್ದು, ವಿವರವನ್ನು ಮುಂದಿನ ಕೋಷ್ಟಕದ ಸಹಾಯದಿಂದ ತಿಳಿಯಬಹುದು.

**ಕೋಷ್ಟಕ 28, ಮಾಹಿತಿದಾರರು ಹೊಂದಿರುವ ಭೂಮಿಯ ಗಾತ್ರ ಹಾಗೂ ವಲಸೆ ಹೋದವರ ಸಂಖ್ಯೆ ಆಧಾರಿತ ಸಂಖ್ಯೆ ಮತ್ತು ಶೇಕಡವಾರು ಹಂಚಿಕೆ. (Number & percent of respondents by size of land & number of persons migrated)**

| | ವಲಸೆ ಹೋದವರ ಸಂಖ್ಯೆ | | | | | |
|---|---|---|---|---|---|---|
| ಭೂಮಿಯ ಗಾತ್ರ | 1 | 2 | 3 ರಿಂದ 4 | 5 ರಿಂದ 6 | 7 ರಿಂದ 8 | ಒಟ್ಟು |
| ಭೂಮಿ ಇಲ್ಲದವರು | 5 | 3 | 4 | 6 | 3 | 21 |
| ಪ್ರತಿಶತ | 25.00 | 20 | 44.44 | 50.00 | 75.00 | 35.00 |
| 1 ರಿಂದ 2 ಎಕರೆ | 0 | 2 | 0 | 0 | 0 | 2 |
| ಪ್ರತಿಶತ | 0.00 | 13.33 | 0.00 | 0.00 | 0.00 | 3.33 |
| 2.1 ರಿಂದ 4 ಎಕರೆ | 6 | 3 | 1 | 2 | 1 | 13 |
| ಪ್ರತಿಶತ | 30.00 | 20 | 11.11 | 16.67 | 25.00 | 21.67 |
| 4.1 ರಿಂದ 6 ಎಕರೆ | 5 | 1 | 3 | 2 | 0 | 11 |
| ಪ್ರತಿಶತ | 25.00 | 6.67 | 33.33 | 16.67 | 0.00 | 18.33 |
| 6.1 ರಿಂದ 8 ಎಕರೆ | 1 | 2 | 0 | 0 | 0 | 3 |
| ಪ್ರತಿಶತ | 5.00 | 13.33 | 0.00 | 0.00 | 0.00 | 5.00 |

| | | | | | | |
|---|---|---|---|---|---|---|
| 8.1 + ಎಕರೆಗಳು | 3 | 4 | 1 | 2 | 0 | 10 |
| ಪ್ರತಿಶತ | 15.00 | 26.67 | 11.11 | 16.67 | 0.00 | 16.67 |
| **ಒಟ್ಟು** | **20** | **15** | **9** | **12** | **4** | **60** |
| ಪ್ರತಿಶತ | **100.00** | **100.00** | **100.00** | **100.00** | **100.00** | **100.00** |

ಮೇಲಿನ ಕೋಷ್ಟಕದ ಪ್ರಕಾರ ಪ್ರತಿಶತ 35.00ರಷ್ಟು ಭೂಮಿ ಇಲ್ಲದವರು, ಪ್ರತಿಶತ 43.33ರಷ್ಟು 1 ರಿಂದ 6 ಎಕರೆ ಭೂಮಿ ಹೊಂದಿದ ಸಣ್ಣ ರೈತರು, ಹಾಗೂ ಪ್ರತಿಶತ 21.67ರಷ್ಟು 6 ರಿಂದ 8 ಎಕರೆಗಿಂತ ಮೇಲ್ಪಟ್ಟು ಜಮೀನು ಹೊಂದಿರುವ ಲಂಬಾಣಿಗರು ವಲಸೆ ಹೋಗಿದ್ದಾರೆ. ಮೇಲಿನ ಅಂಕಿ-ಅಂಶಗಳ ಪ್ರಕಾರ ತುಂಡುಭೂಮಿಯು ಲಂಬಾಣಿಗರ ವಲಸೆಗೆ ಕಾರಣವಾಗಿದೆ. ಉದಾಹರಣೆಗಾಗಿ ಸಂಗತಿ ಸಂಖ್ಯೆ: 60ರ ಕುಟುಂಬದ ಮುಖ್ಯಸ್ಥನ ವಯಸ್ಸು 50, ಉದ್ಯೋಗ ಕೃಷಿ, ಅನಕ್ಷರಸ್ಥ, ಇವನ ಕುಟುಂಬದಲ್ಲಿ ಒಟ್ಟು 8 ಜನರು ವಾಸವಾಗಿದ್ದಾರೆ. ಈ ಕುಟುಂಬದ ಆರ್ಥಿಕ ಮೂಲ ಕೃಷಿಯಾಗಿದ್ದು, 6 ಎಕರೆ ಭೂಮಿ ಹೊಂದಿದ್ದಾರೆ. ಇವರು ಮೊದಲು ಅವಿಭಕ್ತ ಕುಟುಂಬಕ್ಕೆ ಸೇರಿದವರಾಗಿದ್ದರು, ಒಟ್ಟು 40 ಎಕರೆ ಭೂಮಿ ಹೊಂದಿದ್ದರು. ಎಲ್ಲಾ ಸದಸ್ಯರಿಗೆ ಉದ್ಯೋಗವಿತ್ತು. ಆದರೆ ಕುಟುಂಬ ಒಡೆದು ಸಹೋದರರು ಬೇರೆ-ಬೇರೆ ವಾಸವಾಗಿದ್ದರಿಂದ ಕುಟುಂಬದ ಭೂಮಿ ಭಾಗವಾಗಿ ಕೇವಲ ತಲಾ 6 ಎಕರೆ ಭೂಮಿ ಮಾತ್ರ ಹೊಂದಿದ್ದಾರೆ. ಈ ತುಂಡುಭೂಮಿಯಲ್ಲಿ ಕುಟುಂಬದ ಎಲ್ಲಾ ಸದಸ್ಯರಿಗೆ, ವರ್ಷದ ಎಲ್ಲಾ ದಿನಗಳಲ್ಲಿಯೂ, ಉದ್ಯೋಗ ದೊರೆಯುವುದಿಲ್ಲವಾದ್ದರಿಂದ ಕುಟುಂಬದ ಇಬ್ಬರು ಸದಸ್ಯರು ಕೂಲಿಕೆಲಸ ಮಾಡಲು ಗೋವೆಗೆ ವಲಸೆ ಹೋಗಿದ್ದಾರೆ.

**ಋಣಬಾಧೆ (Indebtedness):**

ಗ್ರಾಮೀಣ ಪ್ರದೇಶವನ್ನು ಬಹು ದೀರ್ಘಕಾಲದಿಂದ ಬಾಧಿಸುತ್ತಿರುವ ದೊಡ್ಡ ಸಮಸ್ಯೆ ಎಂದರೆ ಸಾಲ, ಗ್ರಾಮೀಣ ಜನರ ಆದಾಯದ ಮೂಲ ಕೃಷಿಯಾಗಿದೆ. ನೈಸರ್ಗಿಕ ಹಾವಳಿಗಳಿಂದ ಬೆಳೆ ಹಾನಿಯಾದರೆ ರೈತರು ಅನಿವಾರ್ಯವಾಗಿ ಸಾಲ ಮಾಡುತ್ತಾರೆ. ಅದನ್ನು ತೀರಿಸಲಿಕ್ಕಾಗದೇ ಆರ್ಥಿಕ ಸಮಸ್ಯೆಗಳನ್ನು ಎದುರಿಸುತ್ತಾರೆ. ವಿಜಾಪುರ ಜಿಲ್ಲೆಯ ಜನರು ಸಾಮಾನ್ಯವಾಗಿ ಕಡಿಮೆ ಆದಾಯ ಹೊಂದಿದ್ದು ತುರ್ತುವೆಚ್ಚ ಬಂದಾಗ ಸಾಲ ಮಾಡುತ್ತಾರೆ. ಆದರಲ್ಲಿಯೂ ಅಲೆಮಾರಿ ಜೀವನದಿಂದ ಮುಕ್ತಿಹೊಂದಿ ಮುಖ್ಯ ಸಮಾಜದಿಂದ ದೂರ ನೆಲೆಸಿರುವ ಲಂಬಾಣಿಗರು ಹೆಚ್ಚಿನ ಸಂಖ್ಯೆಯಲ್ಲಿ ಅನಕ್ಷರಸ್ಥರಾಗಿದ್ದು, ಸರ್ಕಾರಿ ಬ್ಯಾಂಕುಗಳಲ್ಲಿ ಸಹಕಾರ ಸಂಸ್ಥೆಗಳಲ್ಲಿ ಸಾಲ-ಸೌಲಭ್ಯ ಪಡೆಯುವ ಬಗ್ಗೆ ಮಾಹಿತಿ ಇಲ್ಲದ್ದರಿಂದ ಗ್ರಾಮೀಣ ಲೇವಾದೇವಿಗಾರರ ಹತ್ತಿರ ಸಾಲ ಪಡೆಯುತ್ತಾರೆ. ಈ ಪ್ರಕಾರದ ಸಾಲಕ್ಕೆ ಹೆಚ್ಚಿನ ಬಡ್ಡಿದರವಿರುವುದರಿಂದ ಸಾಲ ತೀರಿಸಲಿಕ್ಕಾಗದೆ ಸಾಹುಕಾರರ ಮನೆಯಲ್ಲಿ ಜೀತದಾಳುಗಳಾಗಿ ದುಡಿಯುತ್ತಾರೆ. ಕೆಲವರು ಅನಿವಾರ್ಯವಾಗಿ ವಲಸೆ ಹೋಗುತ್ತರೆ. ನಮ್ಮ ಅಧ್ಯಯನದ ಪ್ರಕಾರ ಪ್ರತಿಶತ 46.67ರಷ್ಟು ಮಾಹಿತಿದಾರರು ಕಷ್ಟಕಾರ್ಪಣ್ಯಗಳು ಬಂದಾಗ ಲಂಬಾಣೇತರ ಶ್ರೀಮಂತರ ಹತ್ತಿರ ಸಾಲಮಾಡುವವರಾಗಿದ್ದಾರೆ. ಹಾಗೂ ಪ್ರತಿಶತ 53.33ರಷ್ಟು ಕುಟುಂಬಗಳು ನಿರಾಧಾರ ಕುಟುಂಬಗಳಾಗಿದ್ದು,

ಇವರಿಗೆ ಸಾಹುಕಾರರು ಸಾಲ ನೀಡುವುದಿಲ್ಲವಾದ್ದರಿಂದ ಸಾಲ ಪಡೆಯುತ್ತಿಲ್ಲ. ತಮ್ಮ ಸಾಲದ ಹಣವನ್ನು ಹಿಂತಿರುಗಿಸಲು ಸಾಧ್ಯವಾಗದೆ ಹಣ ಸಂಪಾದಿಸಿ ಸಾಲ ತೀರಿಸುವ ಆಸೆ-ಆಕಾಂಕ್ಷೆಗಳನ್ನು ಹೊಂದಿ ಗೋವೆಗೆ ವಲಸೆ ಹೋಗಿದ್ದಾರೆ. ಉದಾಹರಣೆಗೆ ಸಂಗತಿ ಸಂಖ್ಯೆ: 57ರ ಕುಟುಂಬದ ಮುಖ್ಯಸ್ಥನ ವಯಸ್ಸು 50 ವರ್ಷ. ಉದ್ಯೋಗ ಜೀತದಾಳು, ಅನಕ್ಷರಸ್ಥ ಇವನ ಕುಟುಂಬದಲ್ಲಿ ಒಟ್ಟು 3 ಜನಸದಸ್ಯರು ವಾಸವಾಗಿದ್ದಾರೆ. ಕುಟುಂಬದ ಆರ್ಥಿಕ ಮೂಲ ಕೂಲಿ, ಇವರಿಗೆ ಭೂಮಿ, ಮನೆಇಲ್ಲ. ಗುಡಿಸಲಿನಲ್ಲಿ ವಾಸವಾಗಿದ್ದಾರೆ. ಇವನ ಪತ್ನಿ ಕ್ಯಾನ್ಸರ್ ಕಾಯಿಲೆಗೆ ತುತ್ತಾಗಿ ಸಾವನ್ನಪ್ಪಿದ್ದಾಳೆ. ಪತ್ನಿಯ ವೈದ್ಯಕೀಯ ಖರ್ಚು-ವೆಚ್ಚ ಭರಿಸಲು ಅನಿವಾರ್ಯವಾಗಿ ಸಾಲಮಾಡಿ, ಅದನ್ನು ತೀರಿಸಲಿಕ್ಕಾಗದೇ ಸಾಲ ನೀಡಿದ ಶ್ರೀಮಂತರ ಮನೆಯಲ್ಲಿ ಜೀತದಾಳಾಗಿ ಕೆಲಸ ಮಾಡುತ್ತಿದ್ದಾನೆ. ಬಡತನದಿಂದ ಇವನ ಮಗನಿಗೆ ಶಿಕ್ಷಣ ಕೊಡಿಸಲು ಸಾಧ್ಯವಾಗಿಲ್ಲ. ಇವನ ಮಗ ಕುಟಂಬದ ಸಾಲತೀರಿಸಲು ತನ್ನ ಪತ್ನಿಯೊಂದಿಗೆ ಕೂಲಿ ಕೆಲಸಕ್ಕಾಗಿ ಗೋವೆಗೆ ವಲಸೆ ಹೋಗಿದ್ದಾರೆ. ಈ ಕುಟುಂಬದ ಸದಸ್ಯರ ವಲಸೆಗೆ ಋಣಭಾಧೆ ಮೂಲ ಕಾರಣವಾಗಿದೆ

**ನಗರ ಪ್ರದೇಶಗಳಲ್ಲಿ ವಾಸವಾಗುವ ಬಯಕೆ:**

ಔದ್ಯೋಗಿಕ ಕ್ರಾಂತಿಯ ನಂತರದ ಅವಧಿಯಲ್ಲಿ ಜಗತ್ತಿನಾದ್ಯಂತ ನಗರಗಳು ರಭಸದಿಂದ ಬೆಳೆದವು. ಬೃಹತ್ ಕೈಗಾರಿಕೆಗಳು ಸ್ಥಾಪನೆಯಾಗಿದ್ದರಿಂದ ಗೃಹಕೈಗಾರಿಕೆಗಳು ನಶಿಸಿಹೋಗಿ, ನಗರಗಳಲ್ಲಿ ಸೃಷ್ಠಿಯಾದ ಹೊಸ-ಹೊಸ ಉದ್ಯೋಗಗಳಿಗೆ ಆಕರ್ಷಿತರಾಗಿ ಗ್ರಾಮೀಣ ಪ್ರದೇಶದ ಜನರು ವಲಸೆ ಬಂದು ನಗರಗಳಲ್ಲಿ ನೆಲೆಸುತ್ತಿರುವುದರಿಂದ ನಗರಗಳು ತೀವ್ರವಾಗಿ ಬೆಳವಣಿಗೆಯಾಗಿವೆ. ನಗರ ಪ್ರದೇಶದಲ್ಲಿರುವ ಶೈಕ್ಷಣಿಕ ಅವಕಾಶಗಳು, ಮನೋರಂಜನಾ ಸೌಲಭ್ಯಗಳು, ಉದ್ಯೋಗಳು, ಆಹಾರ ಅಭ್ಯಾಸಗಳು ಮುಂತಾದವು ಗ್ರಾಮೀಣ ಪ್ರದೇಶದ ಜನರನ್ನು ಆಕರ್ಷಿಸುತ್ತಿವೆ. ಗ್ರಾಮೀಣ ಪ್ರದೇಶದ ಭೂಒಡೆಯರು ಹಾಗೂ ಕೃಷಿಕಾರ್ಮಿಕರು ಹೆಚ್ಚಾಗಿ ನಗರ ಪ್ರದೇಶಗಳಿಗೆ ವಲಸೆ ಹೋಗುತ್ತಾರೆ. ಭೂಒಡೆಯರು ಐಷಾರಾಮದ ಜೀವನ ಕಳೆಯಲು ವಲಸೆ ಹೋಗುತ್ತಾರೆ. ಹಾಗೂ ಕೂಲಿಕಾರರು ಉದ್ಯೋಗ ಪಡೆಯಲು ವಲಸೆ ಹೋಗುತ್ತಾರೆ.

ಭಾರತದಲ್ಲಿ ಬ್ರಿಟಿಷರ ಆಡಳಿತ ಅವಧಿಗಿಂತ ಮೊದಲು ಲಂಬಾಣಿಗರು, ವ್ಯಾಪಾರ ಮಾಡುತ್ತಾ ನಗರ ಪ್ರದೇಶಗಳ ಮುಖಾಂತರ ಸಂಚರಿಸಿದ್ದಾರೆ. ನಗರಜೀವನ ಇವರಿಗೆ ಹೊಸದಲ್ಲ ಇಂದು ಅನಿವಾರ್ಯ ಕಾರಣಗಳಿಂದ ತಾಂಡಾಗಳಲ್ಲಿ ನೆಲೆಸಿದ್ದರೂ ನಗರ ಪ್ರದೇಶಗಳಲ್ಲಿ ವಾಸಿಸುವ ಬಯಕೆ ಹೊಂದಿದ್ದಾರೆ. ಶಿಕ್ಷಣ ಪಡೆದ ವಿದ್ಯಾವಂತ ಲಂಬಾಣಿ ಸ್ತ್ರೀ-ಪುರುಷರು ತಾಂಡಾಗಳಲ್ಲಿ ವಾಸವಾಗಲು ಬಯಸುವುದಿಲ್ಲ. ಅಶಿಕ್ಷಿತರಲ್ಲಿಯೂ ನಗರ ಪ್ರದೇಶಗಳಲ್ಲಿ ವಾಸವಾಗುವ ಬಯಕೆಗಳಿವೆ. ಲಂಬಾಣೇತರ ಜನರು ವಲಸೆ ಹೋಗುತ್ತಿದ್ದು ಹತ್ತಿರದ ಪ್ರದೇಶಗಳಿಗೆ ಹೆಚ್ಚಾಗಿ ವಲಸೆ ಹೋಗುತ್ತಾರೆ. ಆದರೆ ಲಂಬಾಣಿಗರು ಮುಂಬೈ, ಸೋಲ್ಲಾಪುರ, ಗೋವಾಗಳಂತಹ ನಗರ ಪ್ರದೇಶಗಳಿಗೆ ಹೆಚ್ಚಾಗಿ ವಲಸೆ ಹೋಗುವುದು, ಅವರು ನಗರ ಪ್ರದೇಶಗಳಲ್ಲಿ ವಾಸವಾಗುವ ಬಯಕೆಗಳಿರುವುದರಿಂದ ಬೃಹತ್ ನಗರ ಪ್ರದೇಶಗಳಿಗೆ ವಲಸೆ ಹೋಗುತ್ತಾರೆ.

ನಮ್ಮ ಅಧ್ಯಯನದ ಪ್ರಕಾರ ನರಸಲಗಿ ತಾಂಡಾದ ಹೆಚ್ಚಿನ ಸಂಖ್ಯೆಯ ಲಂಬಾಣಿಗರು ಮುಂಬೈ ಹಾಗೂ ಗೋವಾ ನಗರ ಪ್ರದೇಶಗಳಿಗೆ ವಲಸೆ ಹೋಗಿದ್ದಾರೆ.

**ಜಾತಿಯ ದಬ್ಬಾಳಿಕೆ:**

ಜಾತಿ ಪದ್ಧತಿಯು ಭಾರತದಲ್ಲಿ ಮಾತ್ರ ಕಂಡುಬರುವ ಏಕಮೇವ ಸಂಸ್ಥೆಯಾಗಿದೆ. ಇದು ಬದಲಾವಣೆ ಆಗದ ಅತ್ಯಂತ ಬಲಿಷ್ಠವಾದ ಸಂಸ್ಥೆಯಾಗಿದ್ದು ಜನರ ಎಲ್ಲಾ ಸಾಮಾಜಿಕ ಜೀವನದ ಮೇಲೆ ತೊಟ್ಟಿಲಿನಿಂದ ಹಿಡಿದು ಗೋರಿಯವರೆಗೆ ಪ್ರಭಾವ ಬೀರಿದೆ. ವ್ಯಕ್ತಿ ಏನನ್ನು ತಿನ್ನಬೇಕು ಎಲ್ಲಿ ಊಟಮಾಡಬೇಕು, ಎಲ್ಲಿ ವಿವಾಹ ಮಾಡಿಕೊಳ್ಳಬೇಕು, ಎಲ್ಲಿ ವಾಸವಾಗಬೇಕು, ಯಾವ ದೇವರುಗಳನ್ನು ಆರಾಧಿಸಬೇಕು, ಸತ್ತನಂತರ ಎಲ್ಲಿ ಅಂತ್ಯಕ್ರಿಯೆ ನೆರವೇರಿಸಬೇಕು, ಹೀಗೆ ಮುಂತಾದ ಕ್ಷುಲ್ಲಕ ಅಂಶಗಳು ಸಹ ಜಾತಿಯ ನಿಯಮದ ಪ್ರಕಾರ ನಿರ್ಧರಿಸಲ್ಪಡುತ್ತವೆ. ಜಾತಿಪದ್ಧತಿಯ ಕಾರಣದಿಂದಲೇ ಭಾರತವು ಅಶಕ್ತವಾಗಿ ಬ್ರಿಟಿಷರ ಕೈವಶವಾಯಿತು. ಲಂಬಾಣಿಗರು ಬುಡಕಟ್ಟು ಸಮುದಾಯಕ್ಕೆ ಸೇರಿದ ಹಿಂದುಗಳಾಗಿದ್ದು, ಅನೇಕ ಶತಮಾನಗಳವರೆಗೆ ಇವರು ವ್ಯಾಪಾರದಲ್ಲಿ ತೊಡಗಿ ಅಲೆದಾಡುತ್ತಿದ್ದರಿಂದ ಮುಖ್ಯ ಸಮಾಜದಿಂದ ದೂರವಿದದ್ದರಿಂದ ಜಾತಿಯ ಪ್ರಭಾವ ಇವರ ಮೇಲೆ ಅಷ್ಟೊಂದು ಪ್ರಭಾವ ಬೀರಿಲ್ಲ. ಶಾಸ್ವತ ನೆಲೆಗೊಂಡ ನಂತರ ಜಾತಿಯ ಪ್ರಭಾವ ಇವರ ಮೇಲೆ ಬೀರಿದೆ. ಆದ್ದರಿಂದ ಇವರು ಮುಖ್ಯ ಸಮಾಜದಿಂದ ದೂರದ ಪ್ರದೇಶಗಳಲ್ಲಿ ನೆಲೆಸಿದ್ದಾರೆ. ಲಂಬಾಣೇತರರು, ಲಂಬಾಣಿಗರನ್ನು ಗ್ರಾಮಗಳಲ್ಲಿ ನೆಲೆಗೊಳ್ಳಲು ಅವಕಾಶ ಮಾಡಿಕೊಟ್ಟಿಲ್ಲವಾದ್ದರಿಂದ ಇವರು ಪ್ರತ್ಯೇಕವಾದ ಪ್ರದೇಶಗಳಲ್ಲಿ ವಾಸವಾಗಿದ್ದಾರೆ. ಈಗಲೂ ಲಂಬಾಣಿಗರನ್ನು ಲಂಬಾಣೇತರರು ಹೊಂದಾಣಿಕೆಯಾಗುವುದಿಲ್ಲ. ಹಾಗೂ ಇವರು ಆರ್ಥಿಕವಾಗಿ ಸ್ವಲ್ಪ ಚೇತರಿಸಿಕೊಳ್ಳುತ್ತಿರುವುದು ಅವರಿಗೆ ಸಹಿಸಲು ಆಗುತ್ತಿಲ್ಲ. ಗ್ರಾಮಗಳಲ್ಲಿ ಯಾವುದೇ ಅಪರಾಧ ಕೃತ್ಯ ಸಂಭವಿಸಿದರೂ, ಲಂಬಾಣಿಗರ ಮೇಲೆ ಆಪಾದನೆ ಮಾಡುವ ಪರಿಪಾಠ ಈಗಲೂ ಮುಂದುವರಿದಿದೆ. ಈ ಸ್ಥಿತಿ-ಗತಿಗಳಿಂದ ಮೇಲ್ಜಾತಿಯ ಜನರ ದಬ್ಬಾಳಿಕೆ, ದೌರ್ಜನ್ಯಗಳಿಂದ ತಪ್ಪಿಸಿಕೊಳ್ಳಲು ಜಾತಿಯ ದೌರ್ಜನ್ಯ ಕಡಿಮೆ ಇರುವ ನಗರ ಪ್ರದೇಶಗಳಲ್ಲಿ ನೆಮ್ಮದಿಯ ಜೀವನ ಸಾಗಿಸಲು ಗೋವೆಗೆ ವಲಸೆ ಹೋಗುತ್ತಾರೆ.

## ಅಧ್ಯಾಯ ೫

---

# ಗೋವಾ ವಲಸೆ ಕಾರಣಗಳು, ಕಳಹುವ ಹಾಗೂ ಬರಮಾಡಿಕೊಳ್ಳುವ ಕ್ರಿಯೆಗಳಿಂದ ಸಮುದಾಯಗಳ ಮೇಲೆ ಆಗುತ್ತಿರುವ ಪರಿಣಾಮಗಳು

**(Migration To Goa Reasons and Impact on Sending and receiving Communities)**

## ಅಧ್ಯಾಯ ೫

## ಗೋವಾ ವಲಸೆ ಕಾರಣಗಳು, ಕಳಹುವ ಹಾಗೂ ಬರಮಾಡಿಕೊಳ್ಳುವ ಕ್ರಿಯೆಗಳಿಂದ ಸಮುದಾಯಗಳ ಮೇಲೆ ಆಗುತ್ತಿರುವ ಪರಿಣಾಮಗಳು

**(Migration To Goa Reasons and Impact on Sending and receiving Communities)**

ಗೋವಾ ಅತಿ ಚಿಕ್ಕ ಪ್ರಾಚೀನ ಸಮೃದ್ಧ ಪ್ರಾಂತ್ಯ. ರಾಮಾಯಣ ಮಹಾಭಾರತಗಳಂತಹ ಭಾರತೀಯ ಮಹಾಗ್ರಂಥಗಳಲ್ಲಿ ಗೋವೆಯ ಬಗ್ಗೆ ಉಲ್ಲೇಖಗಳಿವೆ. "ಶಾಸನಗಳಲ್ಲಿ ಪುರಾಣಗಳಲ್ಲಿ ಗೋವೆಯನ್ನು ಗೋವ, ಗೋವಪುರಿ, ಗೋಮಾಂತಕ" ಎಂದು ಕರೆಯಲ್ಪಟ್ಟಿದೆ. ಆಗಿನ ಕಾಲದಲ್ಲಿ ಗೋವ ಪುರಿಯು ವೇದಗಳಲ್ಲಿ ಪ್ರಾವಿಣ್ಯತೆ ಹೊಂದಿದ ಪಂಡಿತ ಬ್ರಾಹ್ಮಣರಿಂದ ಕೂಡಿದ ಧಾರ್ಮಿಕ ಸ್ಥಳವಾಗಿತ್ತು. ಈಗಲೂ ಗೋವೆ ಸಂಪ್ರದಾಯಬದ್ಧ ಹಿಂದುಗಳ ಕೇಂದ್ರವಾಗಿದೆ.[1] ಕೊಂಕಣ ಪ್ರದೇಶವನ್ನು 10ನೇ ಶತಮಾನದಿಂದ 1312ರವರೆಗೆ ಕದಂಬರ ಪ್ರಸಿದ್ಧ ಅರಸ ಜಯಕೇಶಿಯು ರಾಜ್ಯವಾಳುತ್ತಿದ್ದನು ಚಾಂದೋರ್ ಅಥವಾ ಈಗಿನ ಚಂದ್ರಪುರದಿಂದ ತನ್ನ ರಾಜಧಾನಿಯನ್ನು ಮಾಂಡವೀನದಿಯ ದಂಡೆಯ ಮೇಲೆ ಸ್ಥಳಾಂತರಿಸಿದ ನಂತರ ಗೋಪಕ ಪಟ್ಟಣವೆಂದು ನಾಮಕರಣ ಮಾಡಿದನು.[2] ಬರಬರುತ್ತ ಗೋಪಕಾಪುರ, ಗೋಮಾಂಚಲ, ಗೋಪ ಎಂದು ರೂಪಾಂತರಗೊಂಡು ಪೋರ್ಚುಗೀಸರ ಕಾಲದಲ್ಲಿ 'ಗೋವೆ' ಎಂದು ಪ್ರಸಿದ್ಧಿ ಪಡೆಯಿತು ಗೋವೆ ಕೊಂಕಣ ತೀರದ ಫಲವತ್ತಾದ ಪ್ರದೇಶದಲ್ಲಿ ನೆಲೆಸಿದೆ. ಇಲ್ಲಿಯ ನೈಸರ್ಗಿಕ ಸಂಪತ್ತು ಹಾಗೂ ನೈಸರ್ಗಿಕ ಸೌಂದರ್ಯಕ್ಕೆ ಆಕರ್ಶಿತರಾಗಿ ಪ್ರಾಚೀನ ವ್ಯಾಪಾರಿಗಳು, ದಂಡೆತ್ತಿ ಬರುವವರು ಈ ಪ್ರದೇಶಕ್ಕೆ ಬರುತ್ತಿದ್ದರು. ಆದ್ದರಿಂದ ಬರಹಗಾರರು ಗೋವೆ ಯನ್ನು 'ಬಂಗಾರದ ಗೋವೆ' ಭಾರತದ ರೋಮ, ನಂದನವನ ಎಂದು ವರ್ಣಿಸಿದ್ದಾರೆ. ಸಮೃದ್ಧವಾದ ಗೋವೆಯ ಮೇಲೆ ಅನೇಕ ರಾಜಮನೆತನಗಳು, ಪಾಳೆಯಗಾರರು, ಶಿಲಾಹಾರರು, ಮಹಮದೀಯರು, ವಿಜಯನಗರ ಸಾಮ್ರಾಜ್ಯದ ಅರಸರು ಸತತವಾಗಿ ದಾಳಿ ಮಾಡುತ್ತಲೇ ಬಂದಿದ್ದರಿಂದ ಗೋವೆ ಒಂದೇ ರಾಜ್ಯದ ಆಡಳಿತಕ್ಕೆ ಒಳಪಟ್ಟಿರಲಿಲ್ಲ. ಈ ಆಡಳಿತಗಾರರು ಗೋವೆಯಲ್ಲಿ ಸ್ಥಳಿಯರ ಆಸೆ-ಆಕಾಂಕ್ಷೆಗಳಿಗೆ ವಿರುದ್ಧವಾದ ಪದ್ಧತಿ-ಸಂಪ್ರದಾಯಗಳನ್ನು ಬೆಳಿಸಿದರು. ಪೋರ್ಚುಗೀಸರ ಆಡಳಿತದ ಅವಧಿಯಿಂದ ಈಚೆಗೆ ಗೋವೆಯಲ್ಲಿ ಒಂದೇ ಬಗೆಯ ಸಂಪ್ರದಾಯಗಳು ಕಂಡುಬರುತ್ತವೆ. ಪ್ರಾಚೀನ ಕಾಲದಿಂದಲೂ ಗೋವೆ ವಿವಿಧ ರಾಜಮನೆತನಗಳ ಆಡಳಿತಕ್ಕೆ ಒಳಪಟ್ಟಿದ್ದರೂ ಲಿಖಿತ

1. R.N.Saksena: (1974) 'Goa' In to the Mainstream: Abhinara Publications New Delhi, Pg.20.
2. ಆರ್.ಎಸ್.ಪಂಚಮುಖಿ: 1967: 'ಕರ್ನಾಟಕ ಇತಿಹಾಸ' ಪುಟ -೨೫

ದಾಖಲೆಗಳು ಲಭ್ಯವಿಲ್ಲ ಕ್ರಿ.ಶ.ಪೂರ್ವ 3ನೆಯ ಶತಮಾನದದೀಂದ ಈಚೆಗೆ ಖಚಿತ ದಾಖಲೆಗಳು ದೊರೆಯುತ್ತವೆ. ಕ್ರಿ.ಶ.ಪೂರ್ವ 3ನೆಯ ಶತಮಾನದಲ್ಲಿ ಗೋವೆಯು ಮೌರ್ಯರ ಶ್ರೇಷ್ಠ ದೊರೆ ಅಶೋಕನ ಸಾಮ್ರಾಜ್ಯದ ಒಂದು ಭಾಗವಾಗಿತ್ತು ಅವನ ಮರಣದ ನಂತರವೂ ಕ್ರಿ.ಪೂ. 232ರವರೆಗೆ ಮೌರ್ಯರ ಆಡಳಿತಕ್ಕೆ ಒಳಪಟ್ಟಿತ್ತು. ನಂತರ ಗೋವೆಯನ್ನು ದಖನ್ನಿನಲ್ಲಿ ಸಾಮ್ರಾಜ್ಯ ಸ್ಥಾಪಿಸಿ ರಾಜ್ಯವಾಳುತ್ತಿದ್ದ ಶಾತವಾಹನರು ವಶಪಡಿಸಿಕೊಂಡರು, ಇವರ ನಂತರ ಬನವಾಸಿಯ ಕದಂಬರು, ವಶಪಡಿಸಿಕೊಂಡು ತ್ರಿಲೋಚನಾ ಕದಂಬ ಕ್ರಿ.ಶ. 120ರವರೆಗೆ ಅಧಿಕಾರದಲ್ಲಿದ್ದನು. ನಂತರ ಮತ್ತೊಬ್ಬ ಪ್ರಸಿದ್ಧ ದೊರೆ ದೇವರಾಜ 4ನೇ ಶತಮಾನದವರೆಗೆ ಅಧಿಕಾರದಲ್ಲಿದ್ದನು. ನಂತರ 4ನೇ ಶತಮಾನದದಿಂದ 7ನೇ ಶತಮಾನದವರೆಗೆ ಭೋಜ ಮನೆತನದವರು ರಾಜ್ಯವಾಳಿದರು. ಇವರು ಎಲ್ಲಾ ಧರ್ಮದ ಜನರನ್ನು ಸಮಾನವಾಗಿ ಕಂಡಿದ್ದರು. ನಂತರ 8ನೇ ಶತಮಾನದಿಂದ 11ನೇಯ ಶತಮಾನದವರೆಗೆ ಗೋವೆಯನ್ನು ರಾಷ್ಟ್ರಕೂಟರ ಸಾಮಂತರಾಗಿದ್ದ ಶಿಲಾಹಾರರು ಆಳಿದ್ದಾರೆ. ಕ್ರಿ.ಶ. 1126ರಲ್ಲಿ ಕದಂಬರು ಶಿಲಾಹಾರರನ್ನು ಸೋಲಿಸಿ 350 ವರ್ಷ ಗೋವೆಯಲ್ಲಿ ರಾಜ್ಯಭಾರ ಮಾಡಿದರು. ಇವರು ಆಫ್ರಿಕಾ, ಸಿಲೋನ ಮುಂತಾದ ರಾಷ್ಟ್ರಗಳೊಡನೆ ವ್ಯಾಪಾರ ಸಂಬಂಧಗಳನ್ನು ಬೆಳೆಸಿ ಗೋವೆಯನ್ನು ಆರ್ಥಿಕವಾಗಿ ಅಭಿವೃದ್ಧಿಗೊಳಿಸಿದರು.

1312ರಲ್ಲಿ ಗೋವೆ ಮಹಮದೀಯರ ಕೈವಶವಾಯಿತು. 350 ವರ್ಷಗಳ ಸುಧೀರ್ಘ ಕದಂಬರ ಆಡಳಿತ ಪತನಗೊಂಡು ಗೋವೆಯಲ್ಲಿ ಮುಸ್ಲಿಂ ಅರಸರು ಅಧಿಕಾರ ಸ್ಥಾಪಿಸಿದರು. ನಂತರ 1367ರಲ್ಲಿ ಬಲಿಷ್ಠ ವಿಜಯನಗರ ಸಾಮ್ರಾಜ್ಯದ ಮಂತ್ರಿ ಮಾಧವ ಮಹಮದೀಯರನ್ನು ತಳ್ಳಿ ಗೋವೆಯಲ್ಲಿ ಅಧಿಕಾರ ಸ್ಥಾಪಿಸಿದನು. 1472ರಲ್ಲಿ ಬಹಮನಿ ಸಾಮ್ರಾಜ್ಯದ ಮುಖ್ಯಸ್ಥ ಮಹಮದ್ ಖ್ವಾಜಾ ಗೋವೆಯನ್ನು ವಶಪಡಿಸಿಕೊಂಡನು. ಬಹುಮನಿ ಸಾಮ್ರಾಜ್ಯದ ಅವನತಿಯ ನಂತರ ಗೋವೆಯು ಬಿಜಾಪೂರದ ಯುಸೂಫ್ ಆದಿಲ್‌ಶಾಹನ ಪ್ರಾಂತ್ಯಕ್ಕೆ ಸೇರಿತು. ಇವರ ಆಡಳಿತ ಅವಧಿಯಲ್ಲಿ ಗೋವೆ ಅಂತರ್‌ರಾಷ್ಟ್ರೀಯ ವ್ಯಾಪಾರ ಕೇಂದ್ರವಾಯಿತು. ವ್ಯಾಪಾರಕ್ಕಾಗಿ ಗೋವೆ ಪ್ರವೇಶಿಸಿದ ಪೋರ್ಚುಗೀಸರು 17ನೇ ಫೆಬ್ರವರಿ 1510ರಲ್ಲಿ ಪೋರ್ಚುಗೀಸರ ಅಲ್ಬುಕರ್ಕ ಎಂಬುವವನು ಗೋವೆಯನ್ನು ವಶಪಡಿಸಿಕೊಂಡು ಪೋರ್ಚುಗೀಸರ ವಸಾಹತಾಗಿ ಮಾರ್ಪಡಿಸಿದನು. ಆದರೆ ದುರ್ದೈವಶಾತ ಅದೇ ವರ್ಷ ಆಗಸ್ಟ್ 15ರಂದು ವಿಜಾಪುರದ ಯೂಸುಫ್ ಆದಿಲ್‌ಶಾಹ ಅಲ್ಬುಕರ್ಕನನ್ನು ಸೋಲಿಸಿ ಗೋವೆಯನ್ನು ಪುನಃ ವಶಪಡಿಸಿಕೊಂಡನು. ನಂತರ ಅಲ್ಪಾವಧಿಯಲ್ಲಿಯೇ ಪುನಃ ಅಲ್ಬುಕರ್ಕ ನವೆಂಬರ್ 25, 1510ರಲ್ಲಿ ಗೋವೆಯನ್ನು ಯೂಸೂಫ್ ಆದಿಲ್‌ಶಾಹನಿಂದ ವಶಪಡಿಸಿಕೊಂಡನು. ಪೂರ್ಚುಗೀಸರ ಆಡಳಿತ ಸ್ಥಾಪಿಸಿದನು. ಗೋವೆಯಲ್ಲಿ ಪೋರ್ಚುಗೀಸರ ಅಧಿಕಾರ ಸ್ಥಾಪಿಸಲು ಕಾರಣೀಭೂತನಾದ ಅಲ್ಬುಕರ್ಕನಿಗೆ ಗೋವೆಯ ಸಂಸ್ಥಾಪಕ ಎಂದು ಕರೆಯುತ್ತಾರೆ.

"ತನ್ನ ಅಧಿಕಾರದ ಅವಧಿಯಲ್ಲಿ ಅಲ್ಬುಕರ್ಕನು ಗೋವೆಯ ಪ್ರಮುಖ ಕೋಟೆಗಳನ್ನು ವಶಪಡಿಸಿಕೊಂಡದ್ದರಿಂದ ನೆರೆಯ ರಾಜ್ಯ ಹಾಗೂ ಸಮುದ್ರ ಮಾರ್ಗಗಳ ಮೇಲೆ ಪ್ರಭುತ್ವ ಸಾಧಿಸಿ ಸಮುದ್ರ ತೀರದಲ್ಲಿಯ ರಾಜ್ಯಗಳನ್ನು ವಶಪಡಿಸಿಕೊಂಡನು ಹಾಗೂ ಸಾಮಾನ್ಯ ಜನರ ಮೇಲೆ ಕೆಲವು ಅಪರಾಧ ಹಾಗೂ ದೌರ್ಜನ್ಯಗಳನ್ನು ಎಸಗಿದನು. ಅವುಗಳೆಂದರೆ ನಗರಗಳಿಗೆ ಬೆಂಕಿ ಹಚ್ಚುವುದು, ಮನೆಗಳನ್ನು

ನಾಶಪಡಿಸುವುದು, ಕೊಲೆ ಮಾಡುವುದು ಮುಂತಾದವು ಹಾಗೂ ಸ್ಥಳೀಯ ಕೊಂಕಣಿ ಹಿಂದೂಗಳನ್ನು ಬಲವಂತವಾಗಿ ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರಗೊಳಿಸಿದನು. ಆಸ್ತಿ ಇರುವವರು ಮತಾಂತರಗೊಂಡರು, ಕೆಲವರು ಮೈಸೂರು, ತಮಿಳುನಾಡು, ಕೇರಳಗಳಿಗೆ ವಲಸೆ ಹೋದರು. ಕ್ರೈಸ್ತ ಧರ್ಮಕ್ಕೆ ಮತಾಂತರ ಹೊಂದಿದವರಿಗೆ ಸೌಲಭ್ಯ ನೀಡಿ ಸೌಲಭ್ಯ ಪಡೆದ ಹಾಗೂ ಪಡೆಯದ ಜನರ ಮಧ್ಯೆ ವೈಶಮ್ಯ ಬೆಳೆಸಿದನು ಹಾಗೂ ಪೂರ್ಚುಗೀಸರಿಗೆ ಹಿಂದೂ ಮತ್ತು ಮುಸ್ಲಿಂ ಸ್ತ್ರೀಯರನ್ನು ವಿವಾಹವಾಗಲು ಅನುಮತಿ ನೀಡಿದನು. ಹೀಗೆ ಅಲ್ಬುಕರ್ಕ ಪೋರ್ಚುಗೀಸರ ಸಾಮ್ರಾಜ್ಯವನ್ನು ಗೋವೆಯಲ್ಲಿ ಆಳವಾಗಿ ಬೇರೂರಲು ಕಾರಣನಾದನು. 16ನೇ ಡಿಸೆಂಬರ್ 1515ರಲ್ಲಿ ಅಲ್ಬುಕರ್ಕ ಮರಣಹೊಂದಿದನು"[3] ಗೋವೆಯಲ್ಲಿ 450 ವರ್ಷಗಳವರೆಗೆ ಪೋರ್ಚುಗೀಸರ ಆಡಳಿತ ಮುಂದುವರಿಯಿತು. ಭಾರತಕ್ಕೆ ಸ್ವಾತಂತ್ರ್ಯ ದೊರೆತ ನಂತರ ಗೋವೆಯಲ್ಲಿ ಪೋರ್ಚುಗೀಸರ ವಿರುದ್ಧ ಚಳವಳಿಗಳು ಪ್ರಾರಂಭವಾದವು. ನಂತರ ಭಾರತ ಸರ್ಕಾರ ಗೋವೆಯಿಂದ ಪೋರ್ಚುಗಲ್ ಆಡಳಿತ ತೆರವುಗೊಳಿಸಲು ಸೂಚಿಸಿತು. ಆದರೆ ಪೋರ್ಚುಗೀಸರು ಭಾರತದ ಮನವಿಯನ್ನು ತಳ್ಳಿಹಾಕಿದರು. 1955ರಲ್ಲಿ ಭಾರತ ಮತ್ತು ಪೋರ್ಚುಗಲ್ ಸರ್ಕಾರಗಳ ಮಧ್ಯದ ರಾಜತಾಂತ್ರಿಕ ಸಂಬಂಧಗಳು ಕಡಿದುಬಿದ್ದವು. ಗೋವಾ ವಿಮೋಚನೆಗಾಗಿ ಶಾಂತಿಯುತ ಚಳುವಳಿಗಳು ಪ್ರಾರಂಭವಾದವು. ಅನೇಕರು ಪ್ರಾಣ ಕಳೆದುಕೊಂಡರು. ಈ ಚಳುವಳಿ 1961ರವರೆಗೆ ಮುಂದುವರಿಯಿತು. ಆಗಿನ ಪ್ರಧಾನಮಂತ್ರಿ ಪಂಡಿತ ಜವಾಹರಲಾಲ್ ನೆಹರುರವರು ಗೋವೆ ವಶಪಡಿಸಿಕೊಳ್ಳಲು ಯುದ್ಧಸಾರಿ 1961 ಡಿಸೆಂಬರ್ 18ರ ಮಧ್ಯರಾತ್ರಿ ಭಾರತೀಯ ಸೈನ್ಯ ಪೋರ್ಚುಗೀಸರ ಆಡಳಿತ ಕೇಂದ್ರ ಪಣಜಿಯನ್ನು ಸುತ್ತುವರಿದರು. ಬೇರೆ ಮಾರ್ಗವಿಲ್ಲದೆ ಪೋರ್ಚುಗೀಸರು ಭಾರತೀಯ ಸೈನ್ಯಕ್ಕೆ ಶರಣಾದರು.

ಗೋವೆಯು 19ನೇಯ ಡಿಸೆಂಬರ್ 1961ರಂದು 451 ವರ್ಷಗಳ ಪೋರ್ಚುಗೀಸರ ಆಡಳಿತದಿಂದ ಸ್ವತಂತ್ರಗೊಂಡಿತು. "Goa which was liberated on 19th December, 1961 along with Daman and Diu from 451 years of Portuguese colonial Rule, became the 25th state of the Indian union when it was conferred State hood on 30th may 1987"[4] 1961ನೆಯ ಡಿಸೆಂಬರ್ 19ರಂದು 451 ವರ್ಷಗಳ ಪೋರ್ಚುಗೀಸರ ಆಳ್ವಿಕೆಯಿಂದ ವಿಮೋಚಿಸಲ್ಪಟ್ಟ ಗೋವೆಯು ಸ್ವತಂತ್ರ ಭಾರತದ 25ನೆಯ ರಾಜ್ಯವೆಂದು 30 ಮೇ, 1987ರಂದು ಪರಿಗಣಿಸಲ್ಪಟ್ಟಿತು. ಗೋವೆಯನ್ನು ಪೋರ್ಚುಗೀಸರು ಒತ್ತಾಯಪೂರ್ವಕವಾಗಿ 451 ವರ್ಷಗಳ ಕಾಲ ರಾಜ್ಯಭಾರ ಮಾಡಿ ಇಲ್ಲಿಯ ಖನಿಜ ಸಂಪನ್ಮೂಲಗಳನ್ನು ವಿದೇಶಗಳಿಗೆ ರಫ್ತು ಮಾಡಿ ಲಾಭ ಮಾಡಿಕೊಂಡರು. ಇವರು ಗೋವೆಯ ಜನರ ಆರ್ಥಿಕ ಪ್ರಗತಿಯ ಕಡೆ ಗಮನಕೊಡದೇ ವಿಲಾಸಿ ಜೀವನದ ಸಂಸ್ಕೃತಿ ಬೆಳೆಸಿದರು. ಜನರಿಗೆ ಧಾರ್ಮಿಕ ಸ್ವಾತಂತ್ರ್ಯವಿರಲಿಲ್ಲ. ಭಾರತೀಯ ಸಂಸ್ಕೃತಿಯಲ್ಲಿ ವಿದೇಶಿ ಸಂಸ್ಕೃತಿ ಬೆರೆತು ಹೋಗಿದೆ. ಪೋರ್ಚುಗೀಸರ ಸುಧೀರ್ಘವಾದ ಆಡಳಿತದಿಂದ ಗೋವೆ ಅಂತರಾಷ್ಟ್ರೀಯ ಪ್ರಸಿದ್ಧಿ ಪಡೆದಿದೆ. ಹೀಗೆ 1987 ರಿಂದ ಭಾರತದ 25ನೆಯ ರಾಜ್ಯವಾಗಿ ಪರಿಣಮಿಸಿದ ಗೋವೆಯನ್ನು ಆಡಳಿತದ ಅನುಕೂಲಕ್ಕಾಗಿ ಉತ್ತರ ಗೋವೆ ಹಾಗೂ ದಕ್ಷಿಣ

3. Cambridge: History of India, Vol-V, Pg. 12.
4. Goa Tourist Directory: (2004) Govt Press, Panji Goa.

ಗೋವೆ ಎಂದು ಗುರುತಿಸಲಾಗಿದೆ. ಗೋವೆ ಎರಡು ಜಿಲ್ಲೆಗಳನ್ನಾಗಿ ಹನ್ನೊಂದು ತಾಲ್ಲೂಕು ಕೇಂದ್ರಗಳನ್ನಾಗಿ ಹೊಂದಿದೆ. ಪಣಜಿ ಹಾಗೂ ಮಾರ್ಗೋವ ನಗರಗಳು ಕ್ರಮವಾಗಿ ಉತ್ತರ ಹಾಗೂ ದಕ್ಷಿಣ ಗೋವೆಗಳ ಕೇದ್ರಸ್ಥಾನಗಳಾಗಿವೆ. ಗೋವೆಯ ರಾಜಧಾನಿ ಪಣಜಿ. ಇಲ್ಲಿಯ ಜನರು ಕೊಂಕಣಿ, ಮರಾಠಿ, ಪೋರ್ಚುಗೀಸ್, ಹಿಂದಿ, ಇಂಗ್ಲಿಷ್ ಮಾತನಾಡುತ್ತಾರೆ. ಇತರ ರಾಜ್ಯಗಳಿಂದ ವಲಸೆ ಹೋದ ಜನರು ಕನ್ನಡ, ತಮಿಳು, ಮಲಿಯಾಳಿ ಭಾಷೆಗಳನ್ನು ಮಾತನಾಡುತ್ತಾರೆ. ಲಂಬಾಣಿಗರು ಬಂಜಾರಾ ಭಾಷೆ ಮಾತನಾಡುವುದರ ಜೊತೆಗೆ ಮರಾಠಿ ಹಾಗೂ ಕೊಂಕಣಿ ಭಾಷೆಗಳನ್ನು ವ್ಯಾವಹಾರಿಕ ಭಾಷೆಗಳನ್ನಾಗಿ ಬಳಸುತ್ತಾರೆ.

**ಭೌಗೋಳಿಕ ವಿಸ್ತೀರ್ಣ:**

ಗೋವೆಯು ಅತೀ ಚಿಕ್ಕ ರಾಜ್ಯವಾಗಿದೆ. ಗೋವೆಯಿಂದ ಮುಂಬಯಿ 200 ಮೈಲು ದೂರದಲ್ಲಿದೆ. ಉತ್ತರ ಭಾಗದಲ್ಲಿ ಮಹಾರಾಷ್ಟ್ರದ ಸಿಂಧದುರ್ಗ ಹಾಗೂ ಕೋಲ್ಹಾಪುರ ಜಿಲ್ಲೆಗಳಿವೆ. ಪಶ್ಚಿಮದಲ್ಲಿ 100 ಕಿ.ಮೀ. ಅರಬ್ಬಿ ಸಮುದ್ರದಿಂದ ಸುತ್ತುವರಿಯಲ್ಪಟ್ಟಿದೆ. ದಕ್ಷಿಣ ಭಾಗದಲ್ಲಿ ಕರ್ನಾಟಕದ ಕಾರವಾರ, ಧಾರವಾಡ ಹಾಗೂ ಬೆಳಗಾವಿ ಜಿಲ್ಲೆಗಳಿವೆ. ಗೋವೆಯ ಭೌಗೋಳಿಕ ವಿಸ್ತೀರ್ಣ 3,702 ಚ.ಕಿ.ಮೀ. ಇದೆ. ಸಹ್ಯಾದ್ರಿಯ ಮಡಿಲಿನಲ್ಲಿರುವ ಗೋವೆಯ ಪೂರ್ವ ಭಾಗವು ಮಲೆನಾಡು ಪ್ರದೇಶವಾಗಿದೆ. ಪೂರ್ವ ಭಾಗದಲ್ಲಿರುವ ಸಹ್ಯಾದ್ರಿಯ ವ್ಯಾಪ್ತಿಯಲ್ಲಿ ಅನೇಕ ನದಿಗಳು ಹುಟ್ಟಿ ಪಶ್ಚಿಮ ಭಾಗಕ್ಕೆ ಹರಿದು ಅರಬ್ಬಿ ಸಮುದ್ರ ಸೇರುತ್ತವೆ. ಅವುಗಳಲ್ಲಿ ಮಾಂಡವಿ, ಜುವಾರ್ರಿ, ತೆರೆಬೊಲ, ತಲ್‌ಪೊನಾ, ಚಪೋರ ಮತ್ತು ಬಾತುಲ್ ನದಿಗಳು ಪ್ರಮುಖವಾಗಿವೆ. ಮಾಯಿಮ್ ಮತ್ತು ಕಾರಮ್‌ಬೋಲಿಯಂ, ಸರೋವರಗಳು ಪೂರ್ವ ಭಾಗದಲ್ಲಿ ಹರಡಿರುವ ಸೋಸೋಂಗಡ, ಉತ್ತರದಲ್ಲಿರುವ ವಾಘೇರಿ ಹಾಗೂ ಚಂದ್ರನಾಥ ಬೆಟ್ಟಗಳು ಪ್ರಕೃತಿ ಸೌಂದರ್ಯಗಳಲ್ಲಿ ಪ್ರಮುಖವಾದವುಗಳು. ಗೋವೆ ಸಮುದ್ರಮಟ್ಟಕ್ಕಿಂತ 1,022 ಮೀಟರ್ ಎತ್ತರದಲ್ಲಿದೆ. ಮರ್ಮಗೋವ ಬಂದರು ಭಾರತದ ಶ್ರೇಷ್ಠ ವಿಶಾಲವಾದ ನೈಸರ್ಗಿಕ ಬಂದರಾಗಿದೆ. ಮ್ಯಾಂಗನೀಸ್ ಹಾಗೂ ಕಬ್ಬಿಣದ ಅದುರನ್ನು ಈ ಬಂದರಿನ ಮೂಲಕ ವಿದೇಶಗಳಿಗೆ ರಫ್ತು ಮಾಡಲಾಗುತ್ತದೆ.

**ಬೆಳೆಗಳು:**

ಗೋವೆಯಲ್ಲಿ ಒಕ್ಕಲುತನವು ಪ್ರಾಚೀನ ಹಾಗೂ ಋತುಮಾನಾಧರಿತ ಉದ್ಯೋಗವಾಗಿದೆ. ಇಲ್ಲಿ ಭತ್ತವನ್ನು 51,567.8 ಹೆಕ್ಟೇರು ಪ್ರದೇಶದಲ್ಲಿ ಬೆಳೆಯುತ್ತಿದ್ದು, ಪ್ರಮುಖವಾದ ಬೆಳೆಯಾಗಿದೆ. ಇದರ ಜೊತೆಗೆ ಸಜ್ಜೆ, ಅಡಿಕೆ, ತೆಂಗು, ಗೋಡಂಬಿ, ಕಬ್ಬು, ತಾಳೆ, ತರಕಾರಿ ಹಾಗೂ ವಿವಿಧ ಬಗೆಯ ಹಣ್ಣುಗಳನ್ನು ಬೆಳೆಯುತ್ತಾರೆ. ಆದರೆ ಗೋಧಿಯನ್ನು ಹೆಚ್ಚಾಗಿ ಬಳಸುವ ಗೋವೆಯ ಜನರು ಬೇರೆ ಬೇರೆ ಪ್ರದೇಶಗಳಿಂದ ಗೋಧಿಯನ್ನು ಆಮದು ಮಾಡಿಕೊಳ್ಳುತ್ತಾರೆ.

**ಮಳೆ ಮತ್ತು ಹವಾಮಾನ:**

ಗೋವೆಯ ಹವಾಮಾನ ತೇವೋಷ್ಣದಿಂದ ಕೂಡಿದ್ದು ಪ್ರತಿಶತ 30.ರಷ್ಟು ಪ್ರದೇಶ ಅರಣ್ಯಗಳಿಂದ ಹಾಗೂ ಪ್ರತಿಶತ 10ರಷ್ಟು ಪ್ರದೇಶ ನೀರಿನಿಂದ ಆವರಿಸಿದೆ. ಗೋವೆಯ ಪಶ್ಚಿಮದ ದಂಡೆಯನ್ನು ಸಮುದ್ರ

ಆವರಿಸಿರುವುದರಿಂದ ಅತಿಯಾದ ಉಷ್ಣತೆ ಇದೆ. ಬೇಸಿಗೆಯಲ್ಲಿ ಗರಿಷ್ಟ $33.5^0$ ಸೆಂ. ರಿಂದ ಕನಿಷ್ಟ $26^0$ ಸೆಂ.ವರೆಗೆ ಉಷ್ಣತೆ ಇರುತ್ತದೆ. ಚಳಿಗಾಲದಲ್ಲಿ ಗರಿಷ್ಟ $29^0$ ಸೆಂ.ದಿಂದ ಕನಿಷ್ಟ $19^0$ ಸೆಂ. ಉಷ್ಣತೆ ಇರುತ್ತದೆ. ನವೆಂಬರ ತಿಂಗಳಿಂದ ಫೆಬ್ರವರಿವರೆಗೆ ಆಹ್ಲಾದಕರವಾದ ವಾತಾವರಣವಿದ್ದು, ಈ ಅವಧಿಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ದೇಶ ವಿದೇಶಗಳಿಂದ ಪ್ರವಾಸಿಗರನ್ನು ಆಕರ್ಷಿಸುತ್ತದೆ. ಬೇಸಿಗೆ ಕಾಲದಲ್ಲಿ ಗೋವೆಯಲ್ಲಿ ತುಂಬಾ ಉಷ್ಣಾಂಶ ಇರುತ್ತದೆ. ಜೂನ್ ತಿಂಗಳಿನಿಂದ ಸೆಪ್ಟಂಬರ್ ತಿಂಗಳವರೆಗೆ ಮಳೆಯಾಗುತ್ತದೆ. "ವಾರ್ಷಿಕ ಕನಿಷ್ಟ 130" ರಿಂದ ಗರಿಷ್ಟ 140" ಇಂಚು ಮಳೆಯಾಗುತ್ತಿದ್ದು, ಪೂರ್ವ ಭಾಗದ ವಿಸ್ತಾರ ಪ್ರದೇಶದಲ್ಲಿ ಅತಿಹೆಚ್ಚು ಮಳೆಯಾಗುತ್ತದೆ."[5]

**ಗೋವೆಯ ಆರ್ಥಿಕ ಮೂಲಗಳು:**

**ಅರಣ್ಯ ಸಂಪತ್ತು (Forest Wealth):**

ಗೋವೆಯ ಜನರ ಮುಖ್ಯ ಆರ್ಥಿಕ ಮೂಲ ಅರಣ್ಯ ಹಾಗೂ ಜಲಸಂಪತ್ತಾಗಿದೆ. ಪ್ರತಿಶತ 30ರಷ್ಟು ಪ್ರದೇಶ ಅರಣ್ಯಗಳಿಂದ ಆವೃತ್ತವಾಗಿದೆ. ಅರಣ್ಯಗಳಲ್ಲಿ ಬೆಲೆಬಾಳುವ ತೇಗ, ನೀಲಗಿರಿ, ಬಿದಿರು, ಗೋಡಂಬಿ, ತೆಂಗು, ತಾಳೆ, ಶ್ರೀಗಂಧ, ಸಾಗವಾನಿ, ಮಾವು ಮುಂತಾದ ಮರಗಳು ಕಂಡುಬರುತ್ತವೆ. "ಕಬ್ಬಿಣದ ಅದುರು, ಮ್ಯಾಂಗನೀಸ್ ಅದುರು, ಬಾಕ್ಸೈಟ್ ಹೆಚ್ಚಾಗಿ ದೊರೆಯುತ್ತದೆ. ಭಾರತದಿಂದ ರಫ್ತಾಗುವ ಒಟ್ಟು ಕಬ್ಬಿಣದ ಅದುರಿನಲ್ಲಿ ಸುಮಾರು ಅರ್ಧದಷ್ಟು ಗೋವೆಯಿಂದ ರಫ್ತಾಗುತ್ತದೆ. ಬಿಚೋಲಿ, ಕುದ್ನೆಮ್‌ಪಾಲಿ, ಪೈಲ್‌ಗಾವ್ ಹಾಗೂ ಸಿರಿಗಾವ್‌ಗಳಲ್ಲಿ ಕಬ್ಬಿಣದ ಅದಿರನ್ನು, ಸಾಂಗೆ, ತಾಲೂಕಿನಲ್ಲಿ ಮ್ಯಾಂಗನೀಸನ್ನು ಕೆಫೆ ತಾಲೂಕಿನಲ್ಲಿ ಬಾಕ್ಸೈಟನ್ನು ತೆಗೆಯಲಾಗುತ್ತದೆ.[6] ಪೈರೊಲುಸೈಟ್ ಹಾಗೂ ಪ್ಸಿಲೊಮೀಲೇನ್ ಮ್ಯಾಂಗನೀಜ ಅದುರು ಕೂಡಾ ಹೆಚ್ಚಾಗಿ ದೊರೆಯುತ್ತದೆ. ಇವುಗಳಲ್ಲಿ ಕ್ರಮವಾಗಿ ಪ್ರತಿಶತ 57 ಹಾಗೂ ಪ್ರತಿಶತ 62ರಷ್ಟು ಕಬ್ಬಿಣದ ಅಂಶವಿರುವುದರಿಂದ ವಿದೇಶಗಳಲ್ಲಿ ಇದಕ್ಕೆ ಹೆಚ್ಚಿನ ಬೇಡಿಕೆ ಇದೆ. ಆದ್ದರಿಂದ ಈ ಅದುರು ಗೋವೆಯಿಂದ ಹೆಚ್ಚಿನ ಪ್ರಮಾಣದಲ್ಲಿ ರಫ್ತಾಗುತ್ತದೆ. ಕಬ್ಬಿಣದ ಅದುರು ಗೋವೆಯ ಸಂಪತ್ತಿನ ಪ್ರಮುಖ ಮೂಲವಾಗಿದೆ. ಇದರ ಜೊತೆಗೆ ಸಮುದ್ರದಲ್ಲಿ ಸಿಗುವ ವಿವಿಧ ಬಗೆಯ ಮೀನುಗಳಿಗೆ ದೇಶ ವಿದೇಶಗಳಲ್ಲಿ ಹೆಚ್ಚಿನ ಬೇಡಿಕೆ ಇದೆ. ಇದರಿಂದ ಗೋವೆಗೆ ಆರ್ಥಿಕ ಲಾಭ ಬರುವುದರ ಜೊತೆಗೆ ಲಕ್ಷಾಂತರ ಜನರಿಗೆ ಉದ್ಯೋಗಾವಕಾಶಗಳು ದೊರೆಯುತ್ತಿದೆ.

**ಪ್ರವಾಸೋದ್ಯಮ (Tourism)**

ಗೋವೆಯು ನಿಸರ್ಗದ ಮಡಿಲಲ್ಲಿದೆ. ಎಲ್ಲಿ ನೋಡಿದರೂ ಸುಂದರ ಬೀಚುಗಳು, ಚರ್ಚುಗಳು ದೇವಾಲಯಗಳು, ಕೋಟೆ ಮುಂತಾದವು ಪ್ರವಾಸಿಗರನ್ನು ಆಕರ್ಶಿಸುತ್ತವೆ. ನೈಸರ್ಗಿಕ ಸಂಪನ್ಮೂಲಗಳಾದ ಬೀಚುಗಳು, ಸರೋವರಗಳು, ಅರಣ್ಯ ಪ್ರದೇಶಗಳನ್ನು ಸಮರ್ಥವಾಗಿ ಬಳಸಿಕೊಂಡು ಗೋವಾ ಸರ್ಕಾರ ಪ್ರವಾಸೋದ್ಯಮವನ್ನು ಅಭಿವೃದ್ಧಿಪಡಿಸಿ ದೇಶ ವಿದೇಶಗಳಿಂದ ಸಾವಿರಾರೂ ಸಂಖ್ಯೆಯಲ್ಲಿ ಪ್ರವಾಸಿಗರು

5. Tourist Statistics: 2004: Govt of Goa P -1.

6. ಡಾ.ಹಾ.ಮಾ.ನಾಯಕ: (1973) 'ಕನ್ನಡ ವಿಶ್ವಕೋಶ' ಸಂಪುಟ-೬ ಪುಟ -೫೭೭

ಬರುವಂತೆ ಅಭಿವೃದ್ಧಿಪಡಿಸಿದೆ. ಗೋವೆ ಭಾರತದಲ್ಲಿ ಮಾತ್ರವಲ್ಲ ಏಷ್ಯಾ ಉಪಖಂಡದಲ್ಲಿಯೇ ಅತ್ಯಂತ ಆಕರ್ಷಣೀಯ ಹಾಗೂ ಪ್ರಮುಖ ಪ್ರವಾಸಿ ಕೇಂದ್ರವಾಗಿ ರೂಪಗೊಂಡಿದೆ. ಜನಗತ್ತಿನ ವಿವಿಧ ರಾಷ್ಟ್ರಗಳಿಂದ ಪ್ರವಾಸಿಗರು ಪ್ರವಾಹೋಪಾದಿಯಲ್ಲಿ ಹರಿದುಬರುತ್ತಾರೆ. ಇದರಿಂದ ವಿದೇಶಿ ವಿನಿಮಯ ಗಳಿಕೆ ಹೆಚ್ಚಾಗುತ್ತಿದೆ. ಆದ್ದರಿಂದ 1.4.2000ನೇ ಸಾಲಿನಿಂದ ಅನ್ವಯವಾಗುವಂತೆ ಗೋವಾ ಸರ್ಕಾರ ಪ್ರವಾಸೋದ್ಯಮವನ್ನು ಒಂದು ಉದ್ದಿಮೆಯನ್ನಾಗಿ ಸಾರಿದೆ. ಗೋವೆಯ ಆರ್ಥಿಕ ಅಭಿವೃದ್ಧಿಗೆ ಪ್ರವಾಸೋದ್ಯಮದಿಂದ ಹೆಚ್ಚು ಆದಾಯ ಬರುತ್ತಿದೆ. "Goa's income from Tourism in terms of foreign exchange earned has gone up from Rs 532.64 crores in 1986-87, to approx. Rs.600 crores in 2001, which represents a steady rise of about 25% every year. In the state 20% of its population earn their livelihood, directly and indirectly from tourism activities"[7] ಪ್ರಾವಾಸೋದ್ಯಮದಿಂದ ಗೋವೆಯು 1986-87ರಲ್ಲಿ 532.64 ಕೋಟಿ ರೂಪಾಯಿಗಳ ಆದಾಯ ಹೊಂದಿತ್ತು. ಆದರೆ 2001ರಲ್ಲಿ ಆ ಆದಾಯ 600 ಕೋಟಿ ರೂಪಾಯಿಗೆ ತಲುಪಿತು. ಅಂದರೆ ಪ್ರತಿವರ್ಷ ಈ ಮೂಲದ ಆದಾಯ ಪ್ರತಿಶತ 25 ರಂತೆ ಹೆಚ್ಚಾಯಿತು. ಗೋವೆಯ ಪ್ರತಿಶತ 20ರಷ್ಟು ಜನರ ಜೀವನಾಧಾರ ಪ್ರವಾಸೋದ್ಯಮ. ಹೀಗಾಗಿ ಪ್ರವಾಸೋದ್ಯಮ ಹಾಗೂ ಇದಕ್ಕೆ ಸಂಬಂಧಿಸಿದ ಚಟುವಟಿಕೆಗಳು ನಿರುದ್ಯೋಗ ಸಮಸ್ಯೆಯ ನಿವಾರಣೆಗೆ ಸಹಾಯವಾಗಿದೆ. ಪ್ರವಾಸೋದ್ಯಮದ ಅಡಿಯಲ್ಲಿ ಸಾವಿರಾರು ಹೋಟೇಲುಗಳು, ಮನೋರಂಜನಾ ಕೇಂದ್ರಗಳು ನಡೆಯುತ್ತಿದ್ದು ಇದು ಗೋವೆಯ ಆರ್ಥಿಕತೆಯ ಒಂದು ಸಂಪನ್ಮೂಲವಾಗಿದೆ ಎನ್ನಬಹುದಷ್ಟೇ ಅಲ್ಲ ಅದು ಸ್ಥಳಿಯರ ಜೀವನಮಟ್ಟವನ್ನು ಸುಧಾರಿಸಲು ಸಹಾಯಕವಾಗಿದೆ ಎನ್ನಬಹುದು.

**ಜನಸಂಖ್ಯೆ:**

2001ರ ಜನಗಣತಿಯ ವರದಿಯ ಪ್ರಕಾರ ಗೋವೆಯಲ್ಲಿ 13,47,668ರಷ್ಟು ಜನಸಂಖ್ಯೆ ಇದೆ. ಇವರಲ್ಲಿ 9,85,562ರಷ್ಟು ಅಕ್ಷರಸ್ಥರು ಹಾಗೂ 3,62,106ರಷ್ಟು ಅನಕ್ಷರಸ್ಥರಿದ್ದಾರೆ.[8] ವಲಸೆ ಬಂದವರಲ್ಲಿ ಕನ್ನಡಿಗರ ಸಂಖ್ಯೆ ಹೆಚ್ಚಿದೆ. "ಗೋವೆ ಸ್ವತಂತ್ರಗೊಂಡ ಹೊಸತನದಲ್ಲಿ ಕನ್ನಡಿಗ ಒಳವಲಸಿಗರ ಸಂಖ್ಯೆ ಕಡಿಮೆ ಪ್ರಮಾಣದಲ್ಲಿತ್ತು. ಆದರೆ ಈಗ ಅವರು ಮೂರು ಲಕ್ಷಕ್ಕೂ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ.[9] ಗೋವೆಯ ಪ್ರಮುಖ ಕೊಳಚೆ ಪ್ರದೇಶಗಳಾದ ಬಯನಾ ಹಾಗೂ ಮಂಗೂರಹಿಲ್ಸ್‌ಗಳಲ್ಲಿ ಕನ್ನಡಿಗರು, ಲಂಬಾಣಿಗರು ಹೆಚ್ಚಿನ ಸಂಖ್ಯೆಯಲ್ಲಿ ವಾಸವಾಗಿದ್ದಾರೆ. ಕೆಲವರು ಶಾಸ್ವತ ನೆಲೆಸಿದ್ದು, ಮತ್ತೆ ಕೆಲವರು ಋತುಮಾನದ ವಲಸಿಗರಾಗಿದ್ದಾರೆ. ಕರ್ನಾಟಕದಿಂದ ವಲಸೆ ಬಂದವರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ವಿಜಾಪುರ ಜಿಲ್ಲೆಯವರಾಗಿದ್ದಾರೆ. ಕಾರವಾರ ಮಂಗಳೂರು ಹಾಗೂ ಉಡುಪಿ ಜಿಲ್ಲೆಯ ಜನರೂ ವಲಸೆ ಬಂದು ವಿವಿಧ ವ್ಯಾಪಾರಗಳಲ್ಲಿ ತೊಡಗಿದ್ದಾರೆ. ಧಾರವಾಡ ಹಾಗೂ ಬೆಳಗಾವಿ ಜಿಲ್ಲೆಗಳಿಂದಲೂ ಕೂಲಿಕಾರರು ವಲಸೆ ಬಂದಿದ್ದು ಇವರ ಸಂಖ್ಯೆ ಬಹಳ ಕಡಿಮೆ ಇದೆ.

---

7. Goa Tourist Directory: (2004) Govt of Goa, Pg. 2.
8. Census of India: (2001) Goa, Daman and Diu, Part II(A).
9. ಮಾಂಡವಿ: 32, ಸ್ಮರಣಸಂಚಿಕೆ: 'ಗೋವಾ ಕನ್ನಡ ಸಂಘ' ಮಡಗಾಂವ (1995)

**ಗೋವೆಗೆ ವಿಜಾಪುರ ಜಿಲ್ಲೆಯ ಲಂಬಾಣಿಗರ ಆಗಮನ:**

ವಲಸೆ ವಿಜಾಪುರದ ಜನರಿಗೆ ಅಂಟಿದ ಕೊನೆಇಲ್ಲದ ನೆಂಟು ಎಂದೆನ್ನಬಹುದು ವಲಸೆ ಹೋಗುವುದು ಇಲ್ಲಿಯ ಜನರ ಜೀವನ ಮಾರ್ಗವೇ ಆಗಿದೆ. ಮಳೆ ಆಗದಿದ್ದರೆ ಗಂಟು ಮೂಟೆ ಕಟ್ಟಿಕೊಂಡು ಕುಟುಂಬ ಸಮೇತ ವಲಸೆ ಹೋಗುತ್ತಾರೆ. ಅದರಲ್ಲೂ ಭೂಮಿ-ಸೀಮೆಗಳಿಲ್ಲದ ಕೂಲಿಕಾರರು ಮಧ್ಯವರ್ತಿಗಳ ಹತ್ತಿರ ಉಪಜೀವನಕ್ಕಾಗಿ ಸಾಲ ಮಾಡಿ ಅವರು ಕರೆಯುವ ಸ್ಥಳಕ್ಕೆ ವಲಸೆ ಹೋಗುತ್ತಾರೆ. ಲಂಬಾಣಿಗರು ಮೊದಲು ಸಮೀಪದ ಸ್ಥಳಗಳಿಗೆ ಸುಗ್ಗಿಯ ವೇಳೆಯಲ್ಲಿ ವಲಸೆ ಹೋಗುತ್ತಿದ್ದರು ಬರಬರುತ್ತ ಇವರ ವಲಸೆಯ ಅಂತರವು ಹೆಚ್ಚ ತೊಡಗಿ ಮುಂಬೈನಗರ, ಗೋವೆಗಳಂತಹ ಪ್ರದೇಶಗಳಿಗೆ ವಲಸೆ ಹೋಗಲು ಆರಂಭಿಸಿದ್ದಾರೆ. ಗೋವೆಯ ವಿಮೋಚನೆಯ ಮೊದಲು ಲಂಬಾಣಿಗರು ಗೋವೆಗೆ ವಲಸೆ ಬಂದ ಬಗ್ಗೆ ಯಾವ ದಾಖಲೆಗಳು ಕಂಡುಬರುವುದಿಲ್ಲ. "K.S.Singh writes, "The Lamani's do not have their Origin in Goa. They migrated from the Gadag taluk of Dharwad District in Karnataka. two decades ago, soon after liberation in search of gainful employment. But today they are found settled sporadically in different parts of the State."[10] ಕೆ.ಎಸ್.ಸಿಂಗ್ ಅವರ ಪ್ರಕಾರ ಗೋವೆಯು ಲಂಬಾಣಿಗರ ಮೂಲ ಸ್ಥಾನವಲ್ಲ. ಅವರು ಕರ್ನಾಟಕದ ಧಾರವಾಡ ಜಿಲ್ಲೆಯ ಗದಗ ತಾಲ್ಲೂಕಿನಿಂದ ವಿಮೋಚನೆಗೊಂಡ ಗೋವಾಕ್ಕೆ ಎರಡು ದಶಕಗಳ ಹಿಂದೆ ಜೀವನೋಪಾಯಗಳನ್ನು ಅರಸುತ್ತ ಬಂದವರು. ಈಗ ಅವರು ಗೋವೆಯ ವಿವಿಧ ಭಾಗಗಳಲ್ಲಿ ಚದುರು ಚದುರಾಗಿ ನೆಲೆಗೊಂಡಿದ್ದಾರೆ.

ಗೋವೆ ವಿಮೋಚನೆಗೊಂಡ ನಂತರದ ಅವಧಿಗಳಲ್ಲಿ ಲಂಬಾಣಿಗರು ಗೋವೆಗೆ ವಲಸೆ ಬಂದಿದ್ದಾರೆ. ನನ್ನ ಸಂಶೋಧನಾ ಕ್ಷೇತ್ರವಾದ ನರಸಲಗಿ ತಾಂಡಾದ ಲಂಬಾಣಿಗರು 1972ರಿಂದ ಗೋವೆಗೆ ವಲಸೆಹೋಗಲು ಪ್ರಾರಂಭಿಸಿದ್ದಾರೆ. 1972-73ರಲ್ಲಿ ವಿಜಾಪುರ ಜಿಲ್ಲೆ ಭಯಂಕರ ಬರಗಾಲಕ್ಕೆ ತುತ್ತಾಗಿತ್ತು. "1972-73ರಲ್ಲಿ ಉತ್ತರ ಕರ್ನಾಟಕದಲ್ಲಿ ಒಣಬರ ಸಂಭವಿಸಿತ್ತು. ಜನರಿಗೆ ಗಂಜಿಗೂ ಗತಿಯಿಲ್ಲದಂತಾಯಿತು. ವಲಸೆ ಹೋದರೆ ಬದುಕು ಇಲ್ಲದಿದ್ದರೆ ಸಾವು ಎಂಬ ತೀರ್ಮಾನ ಜನರು ಎದುರಿಸಿಬೇಕಾಯಿತು. ಗುಟುಕು ನೀರಿಗೂ ಗತಿ ಇಲ್ಲದಂತಾಯಿತು. ಮನುಷ್ಯರಷ್ಟೇ ಅಲ್ಲ ಊರಿನ ದನ-ಕರುಗಳೆಲ್ಲ ಮೇವು ನೀರಿಲ್ಲದೆ ಕಂಡ ಕಂಡಲ್ಲಿ ಸತ್ತುಬಿದ್ದುವು."[11] ಜನರು ಬರಗಾಲದಲ್ಲಿ ದನ-ಕರುಗಳನ್ನು ಸಾಕಲಿಕ್ಕಾಗದೆ ಕಸಾಯಿಖಾನೆಗಳಿಗೆ ಮಾರಾಟ ಮಾಡಿದರು. ಕೂಲಿಕಾರ ಲಂಬಾಣಿಗರು ಹೊಟ್ಟೆಗೆ ಗಂಜಿ ಇಲ್ಲದೆ ಗೆಣಸಿನ ತಪ್ಪಲುಗಳಿಂದ ತಯಾರಿಸಿದ ಆಹಾರ ಸೇವಿಸಿದರು. ಮತ್ತೆ ಕೆಲವರು ಸೇರು ಹಿಟ್ಟಿನಲ್ಲಿ ಗಂಜಿಕುಡಿದು ಅನೇಕ ದಿನಗಳವರೆಗೆ ಬದುಕಿದ್ದೇವೆ ಎಂದು ನನ್ನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಲಂಬಾಣಿಗರು ಪ್ರತಿಕ್ರಿಯೆ ನೀಡಿದ್ದಾರೆ. ಇಂತಹ ಪರಿಸ್ಥಿತಿಯಲ್ಲಿ ಈಗಾಗಲೇ ಗೋವೆಯ ಪರಿಚಯವಿದ್ದ ಪರಿಶಿಷ್ಟ ಜಾತಿಯ ಜನರಾದ ದೇವಪ್ಪಹಲಗಿ ಹಾಗೂ ಹಣಮಂತಪ್ಪ ಗೋವೆಯಲ್ಲಿ ಉದ್ಯೋಗಾವಕಾಶವಿರುವ ವಿಷಯ ಲಂಬಾಣಿಗರಿಗೆ ತಿಳಿಸುತ್ತಾರೆ.

---

10. K.S.Singh (Ed) (1993) People of India-Goa, Vol-XXI, Anthropological Survey of India Popular Prakashan, Bombay, Pg. 141.
11. ಡಾ.ಹರಿಶ್ಚಂದ್ರ ದಿಗ್ಸಂಗಿಕರ್: (1999) 'ಕನ್ನಡಿಗರ ಗೋವಾ ವಲಸೆ' ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ ಪುಟ.38.

ನಂತರ ಇವರ ಜೊತೆ ಸೇರಿ ರೈಲಿನಿಲ್ಲಿ ಟಿಕೆಟ್ ಇಲ್ಲದೆ ನರಸಲಗಿ ತಾಂಡಾದ ಭೀಮಪ್ಪ ಹಾಗೂ ಶಂಕರ ಎಂಬ ಯುವಕರು ಗೋವೆಗೆ ಪ್ರಯಾಣ ಬೆಳೆಸುತ್ತಾರೆ. ಗೋವೆಯಲ್ಲಿ ಕರ್ನಾಟಕದ ರಾಮದುರ್ಗದ 'ಗಣಪತಿ' ಎಂಬ ಮೇಸ್ತ್ರಿಯ ಪರಿಚಯ ಮಾಡಿಕೊಂಡು ಕೂಲಿ ಕೆಲಸಕ್ಕೆ ಸೇರಿಕೊಳ್ಳುತ್ತಾರೆ. ಆ ವೇಳೆಯಲ್ಲಿ ಒಬ್ಬರಿಗೆ ದಿನಕ್ಕೆ 4 ರೂಪಾಯಿ ಕೂಲಿ ಇತ್ತು ಇದು ಸ್ವಸ್ಥಳದಲ್ಲಿ ಪಡೆಯುವ ಕೂಲಿಗಿಂತ ಎರಡರಷ್ಟಿತ್ತು. ನಂತರ ವಿಜಾಪುರ ಜಿಲ್ಲೆಯ ಇತರ ತಾಂಡಾಗಳಿಂದ ವಲಸೆ ಹೋಗಿರುವ ಲಂಬಾಣಿಗರ ಪರಿಚಯವಾಗಿ ಅವರ ಜೊತೆ ಸೇರಿ ವಾಸ್ಕೋನಗರದ ವಿಮಾನ ನಿಲ್ದಾಣದಲ್ಲಿ ರಸ್ತೆ ಡಾಂಬರೀಕರಣ ಮಾಡುವ ಉದ್ಯೋಗದಲ್ಲಿ ತೊಡಗುತ್ತಾರೆ. ಗೋವೆಯಲ್ಲಿ ಕೂಲಿಕೆಲಸಗಳು 'ಮಕಾರಮ್'ಗಳ ಮೂಲಕ ದೊರೆಯುತ್ತಿತ್ತು. ಮಾರ್ಮಗೋವಾ ಡಾಕ್ ಲೇಬರ್ ಬೋರ್ಡ್, (MPT) ಮಾರ್ಮ ಗೋವಾ ಪೋರ್ಟ ಟ್ರಸ್ಟ್ ಹಾಗೂ ಮ್ಯಾಂಗನೀಜ ಕಂಪನಿಗಳ ಮಾಲಿಕರಾದ ಚೊಗಲಾ, ಸಾಳಗಾಂವಕರ, ದಾಮೋದರ ಮಂಗಲಜಿ, ಡೆಂಪೊ ಮೊದಲಾದವರ ಅಡಿಯಲ್ಲಿ ಕೆಲವು ಮಕಾದಮ್‌ಗಳಿದ್ದರು ಇವರ ಮುಖಾಂತರ ಕೂಲಿಕಾರರಿಗೆ ಕೂಲಿ ಕೆಲಸಗಳು ದೊರೆಯುತ್ತಿದ್ದವು. ಅದುರು ಅಗೆಯುವುದು, ಹಡಗುಗಳಲ್ಲಿ ಅದುರು ತುಂಬುವುದು, ಬ್ರಿಜ್ ನಿರ್ಮಾಣ, ರಸ್ತೆ ಡಾಂಬರೀಕರಣ, ಅರಣ್ಯ ಸಮಗೊಳಿಸುವುದು, ಕಟ್ಟಡ ನಿರ್ಮಾಣದ ಕೆಲಸಕಾರ್ಯಗಳಲ್ಲಿ ಲಂಬಾಣಿಗರು ತೊಡಗಿದ್ದರು. ಗೋವೆಯ ಪರಿಚಯ ಮಾಡಿಕೊಂಡ ಲಂಬಾಣಿ ಯುವಕರು 'ಮಕಾದಮ್'ಗಳಾಗಿ ನರಸಲಗಿ ತಾಂಡಾದ ಜನರನ್ನು ಕಮಿಷನ್ ಆಧಾರದ ಮೇಲೆ ಗೋವೆಗೆ ಕೂಲಿಕೆಲಸಕ್ಕಾಗಿ ಕರೆತರಲು ಪ್ರಾರಂಭಿಸಿದರು. ಅಂದಿನಿಂದ ಇಂದಿನವರೆಗೆ ಲಂಬಾಣಿಗರು ಸತತವಾಗಿ ಗೋವೆಗೆ ವಲಸೆ ಬರುತ್ತಿದ್ದಾರೆ. ಮಕಾದಮ್‌ಗಳು ಕೂಲಿಕಾರ ಲಂಬಾಣಿಗರಿಗೆ ಮುಂಗಡ ಹಣ ಕೊಡುತ್ತಾರೆ, ಹಾಗೂ ಗೋವೆಗೆ ಹೋಗುವ ಖರ್ಚು ಭರಿಸುತ್ತಾರೆ. ಇಂಥಹ ಸೌಲಭ್ಯಗಳಿಂದ ಆಕರ್ಷಿತರಾಗಿ ಹೆಚ್ಚಿನ ಸಂಖ್ಯೆಯ ಲಂಬಾಣಿಗರು ಮಕಾದಮ್‌ಗಳ ಸಹಾಯದಿಂದ, ವಲಸೆ ಬಂದರೆ ಮತ್ತೆ ಕೆಲವರು ಸ್ನೇಹಿತರ ಸಹಾಯದಿಂದ, ಸಂಬಂಧಿಕರ ಸಹಾಯದಿಂದ ಗೋವೆಗೆ ವಲಸೆ ಬರುತ್ತಾರೆ. ನಮ್ಮ ಅಧ್ಯಯನದ ನಮೂನೆ ಕುಟುಂಬದ ಸದಸ್ಯರು ಗೋವೆಗೆ ವಲಸೆ ಬಂದ ಬಗೆಯನ್ನು ಈ ಮುಂದಿನ ಕೋಷ್ಟಕದ ಸಹಾಯದಿಂದ ನೋಡಬಹುದು.

**ಕೋಷ್ಟಕ 29, ವಲಸಿಗರು ಗೋವೆಗೆ ವಲಸೆ ಬಂದ ಬಗೆ ಆಧಾರಿತ ಸಂಖ್ಯೆ ಮತ್ತು ಶೇಕಡವಾರು ಹಂಚಿಕೆ.**
**(Number & percentage distribution of migrants by person through they migrated to Goa )**

| ವಲಸೆಗೆ ಬಂದ ರೀತಿ | ಸಂಖ್ಯೆ | ಪ್ರತಿಶತ |
|---|---|---|
| ದಲ್ಲಾಳಿಗಳ ಮೂಲಕ | 21 | 35.00 |
| ಸ್ನೇಹಿತರೊಂದಿಗೆ | 22 | 36.67 |
| ಸಂಬಂಧಿಕರೊಂದಿಗೆ | 17 | 28.33 |
| ಒಟ್ಟು | **60** | **100.00** |

ಮೇಲಿನ ಕೋಷ್ಟಕದ ಪ್ರಕಾರ ಪ್ರತಿಶತ 35.00ರಷ್ಟು ಮಾಹಿತಿದಾರರು ದಲ್ಲಾಳಿಗಳ ಮೂಲಕ (ಮಕಾದಮ್) ಪ್ರತಿಶತ 36.67ರಷ್ಟು ಮಾಹಿತಿದಾರರು ಸ್ನೇಹಿತರ ಮೂಲಕ ಹಾಗೂ ಪ್ರತಿಶತ 28.33ರಷ್ಟು ಮಾಹಿತಿದಾರರು ಸಂಬಂಧಿಕರ ಸಹಾಯದಿಂದ ಗೋವೆಗೆ ವಲಸೆ ಬಂದಿದ್ದಾರೆ.

**ವಲಸೆಯ ವೆಚ್ಚ (Cost of the Migration):**

ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಜನರು ವಲಸೆ ಹೋಗಲು ಮುಖ್ಯವಾಗಿ ಹಣ ಬೇಕಾಗುತ್ತದೆ. ಭಾರತದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಜನರು ಬಡವರಿದ್ದು ವಲಸೆ ಹೋಗಲು ಹಣ ಬೇಕಾಗುವುದರಿಂದ ದೂರದ ಪ್ರದೇಶಗಳಿಗೆ ವಲಸೆ ಹೋಗುವುದಿಲ್ಲ. ನಮ್ಮ ಅಧ್ಯಯನದ ಪ್ರಕಾರ ಪ್ರತಿಶತ 31.67ರಷ್ಟು ಮಾಹಿತಿದಾರರಿಗೆ 100 ರಿಂದ 200 ರೂಪಾಯಿ, ಪ್ರತಿಶತ 35.00ರಷ್ಟು ಮಾಹಿತಿದಾರರಿಗೆ 201 ರಿಂದ 400 ರೂಪಾಯಿಗಳ ವರೆಗೆ ಹಾಗೂ ಪ್ರತಿಶತ 33.34ರಷ್ಟು ಮಾಹಿತಿದಾರರಿಗೆ 401 ರಿಂದ 601 ರೂಪಾಯಿಗಳು ಗೋವೆಗೆ ವಲಸೆ ಬರಲು ವೆಚ್ಚವಾಗಿದೆ. ಈ ವೆಚ್ಚವನ್ನು ಮಾಹಿತಿದಾರರು ವಿವಿಧ ಮೂಲಗಳಿಂದ ಭರಿಸಿದ್ದು ಈ ಮುಂದಿನ ಕೋಷ್ಟಕದ ಸಹಾಯದಿಂದ ತಿಳಿಯಬಹುದು.

**ಕೋಷ್ಟಕ 30, ವಲಸೆಗೆ ತಗಲುವ ವೆಚ್ಚದ ಮೂಲಗಳ ಆಧಾರಿತ ಸಂಖ್ಯೆ ಹಾಗೂ ಶೇಕಡವಾರು ಹಂಚಿಕೆ. (Number & percentage distribution of migrants by source of expenditure to migrate)**

| ವ್ಯವಸ್ಥೆಯ ಅಂಶಗಳು | ಸಂಖ್ಯೆ | ಪ್ರತಿಶತ |
|---|---|---|
| ಉಳಿತಾಯದಿಂದ | 16 | 26.67 |
| ಸಂಬಧಿಕರ ಸಹಾಯದಿಂದ | 14 | 23.33 |
| ಬಡ್ಡಿ ಸಾಲದಿಂದ | 27 | 45.00 |
| ಜಾನುವಾರುಗಳನ್ನು ಮಾರಾಟ ಮಾಡಿ | 2 | 3.33 |
| ಮನೆಯಲ್ಲಿ ಕಳ್ಳತನ ಮಾಡಿ | 1 | 1.67 |
| ಒಟ್ಟು | **60** | **100.00** |

ಮೇಲಿನ ಕೋಷ್ಟಕದಿಂದ ವ್ಯಕ್ತವಾಗುವುದೇನೆಂದರೆ ಪ್ರತಿಶತ 26.67ರಷ್ಟು ಮಾಹಿತಿದಾರರು ಗೋವೆಗೆ ಬರಲು ಖರ್ಚಾದ ಹಣವನ್ನು ಉಳಿತಾಯದ ಮೂಲಗಳಿಂದ ಭರಿಸಿದ್ದಾರೆ. ಪ್ರತಿಶತ 23.33ರಷ್ಟು ಮಾಹಿತಿದಾರರು ಸಂಬಂಧಿಕರ ಸಹಾಯದಿಂದ, ಪ್ರತಿಶತ45.00ರಷ್ಟು ಮಾಹಿತಿದಾರರು ಬಡ್ಡಿ ಸಾಲದಿಂದ, ಪ್ರತಿಶತ 3.33ರಷ್ಟು ಮಾಹಿತಿದಾರರು ಪ್ರಾಣಿಗಳನ್ನು ಮಾರಟ ಮಾಡಿ ಬಂದ ಹಣದಿಂದ ಹಾಗೂ ಪ್ರತಿಶತ 1.67ರಷ್ಟು ಮಾಹಿತಿದಾರರು ಮನೆಯಲ್ಲಿ ಕಳ್ಳತನ ಮಾಡಿ ಪ್ರಯಾಣದ ವೆಚ್ಚವನ್ನು ಭರಿಸಿದ್ದಾರೆ. ಉದಾಹರಣೆಗೆ: ಸಂಗತಿ: ಸಂಖ್ಯೆ 8ರ ಕುಟುಂಬದಲ್ಲಿಯ ಯುವಕನ ವಯಸ್ಸು 18, ಮೂರನೆಯ ತರಗತಿವರೆಗಿನ ಪ್ರಾಥಮಿಕ ಶಿಕ್ಷಣ ಪಡೆದಿದ್ದಾನೆ. ಆರ್ಥಿಕ ಸಮಸ್ಯೆಯಿಂದ ಇವನಿಗೆ ಶಿಕ್ಷಣ ಪಡೆಯಲು ಸಾಧ್ಯವಾಗಿಲ್ಲ. 1997ರಿಂದ ಸತತ ಗೋವೆಗೆ ವಲಸೆ ಬಂದು ಕಾಸಾಳಿ ಉತ್ತೋಡಾದಲ್ಲಿ ಸಾಂತಾನ ಬ್ರೆಡ್ ಬೇಕರಿಯಲ್ಲಿ ಸಹಾಯಕನಾಗಿ ಕೆಲಸ ಮಾಡುತ್ತಿದ್ದಾನೆ. ಈತನು ಮಾಸಿಕ 2000 ರೂಪಾಯಿ ಸಂಬಳ

ಪಡೆಯುತ್ತಾನೆ. ಹಾಗೂ ಕೆಲಸ ಕೊಟ್ಟ ಮಾಲಿಕರು ಈತನಿಗೆ ಊಟ, ಉಪಹಾರ, ವಸತಿ ಸೌಕರ್ಯಗಳನ್ನು ಕಲ್ಪಿಸಿಕೊಟ್ಟಿದ್ದಾರೆ. ಸ್ವಸ್ಥಳದಲ್ಲಿ ಇವನ ಕುಟುಂಬ ಬಡತನದ ಬೇಗೆ ಅನುಭವಿಸುತ್ತಿದ್ದಾಗ ಗೋವೆಗೆ ವಲಸೆ ಬರಲು ಹಣ ಇರುವುದಿಲ್ಲ. ಇಂತಹ ಸಂದರ್ಭದಲ್ಲಿ ತಂದೆ-ತಾಯಿಗಳಿಗೆ ಗೊತ್ತಾಗದ ಹಾಗೆ ಮನೆಯಲ್ಲಿಯ ಪಾತ್ರೆಗಳನ್ನು ಕದ್ದು ಮಾರಾಟ ಮಾಡಿ ಬಂದ ಹಣದಿಂದ ಗೋವೆಗೆ ವಲಸೆ ಬಂದಿದ್ದಾನೆ. ಇದೇ ಪ್ರಕಾರವಾಗಿ ಸಂಗತಿ ಸಂಖ್ಯೆ 10ರಲ್ಲಿಯ ವ್ಯಕ್ತಿಯ ವಯಸ್ಸು 43, ಅನಕ್ಷರಸ್ಥ, 1965ರಲ್ಲಿ ಗೋವೆಗೆ ವಲಸೆ ಬಂದು ಸಮುದ್ರದಲ್ಲಿ ಮೀನು ಹಿಡಿಯುವ ಕೆಲಸ ಮಾಡುತ್ತಿದ್ದಾನೆ. ಪ್ರಸ್ತುತ ವಾಸ್ಕೋನಗರದ ಮಂಗೂರಹಿಲ್ ಕೊಳಚೆ ಪ್ರದೇಶದಲ್ಲಿ ವಾಸವಾಗಿದ್ದಾರೆ. ಇವನ ಕುಟುಂಬದಲ್ಲಿ 8 ಜನರು ಸದಸ್ಯರಿದ್ದಾರೆ. ಇವರು ಗೋವೆಗೆ ವಲಸೆ ಬರುವ ಸಂದರ್ಭದಲ್ಲಿ ಪ್ರಯಾಣದ ಖರ್ಚಿಗೆ ಹಣ ಇಲ್ಲದ್ದರಿಂದ 300 ರೂಪಾಯಿಗಳಿಗೆ ಆಡುಗಳನ್ನು ಮಾರಾಟ ಮಾಡಿ, ಬಂದ ಹಣದಿಂದ ಗೋವೆಗೆ ವಲಸೆ ಬಂದಿದ್ದು, ಹೆಚ್ಚಿನ ಸಂಖ್ಯೆಯ ಲಂಬಾಣಿಗರು ಸಾಲ ಮಾಡಿ ಪ್ರಯಾಣದ ಖರ್ಚನ್ನು ಭರಿಸಿದ್ದಾರೆ.

**ಗೋವೆಯಲ್ಲಿ ಲಂಬಾಣಿಗರನ್ನು ಆಕರ್ಷಿಸುವ ಅಂಶಗಳು (Pull Factors):**

ಗೋವೆ ವಿಮೋಚನೆಗೊಂಡ ನಂತರದ ಅವಧಿಯಲ್ಲಿ ಸೃಷ್ಟಿಯಾದ ಉದ್ಯೋಗಾವಕಾಶಗಳಿಗೆ ಆಕರ್ಷಿತರಾಗಿ, ಬಡತನದಲ್ಲಿ ಬಳಲುತ್ತಿರುವ ಲಂಬಾಣಿಗರು ವಲಸೆ ಬಂದಿದ್ದಾರೆ. ಭಾರತೀಯರು ಹೆಚ್ಚಾಗಿ ಅನಕ್ಷರಸ್ಥರಿರುವುದರಿಂದ ನಗರ ಪ್ರದೇಶಗಳ ಪರಿಚಯವಿಲ್ಲದ ಕಾರಣ ಸಾಮಾನ್ಯವಾಗಿ ದೂರದ ಪ್ರದೇಶಗಳಿಗೆ ವಲಸೆ ಹೋಗುವುದಿಲ್ಲ ಎಂದು ಜನಸಂಖ್ಯಾಶಾಸ್ತ್ರಜ್ಞರು ಅಭಿಪ್ರಾಯಪಟ್ಟಿದ್ದಾರೆ. ಆದರೆ ಲಂಬಾಣಿಗರಿಗೆ ಮಧ್ಯವರ್ತಿಗಳು ಗೋವೆಯ ಪರಿಚಯ ಮಾಡಿಸಿದ್ದಾರೆ. ಲಂಬಾಣಿಗರು ಗೋವೆಗೆ ವಲಸೆ ಬರಲು ಮುಖ್ಯವಾಗಿ ಮಧ್ಯವರ್ತಿಗಳು ಕಾರಣೀಭೂತರಾಗಿದ್ದಾರೆ.

**ಮಧ್ಯವರ್ತಿಗಳು (ಮಕಾದಮ್) ಹಾಗೂ ವಲಸೆ:**

ಲಂಬಾಣಿಗರ ವಲಸೆಗೆ ಮಕಾದಮ್‌ಗಳು ಕಾಣೀಭೂತರಾಗಿಗ್ದಾರೆ. ಇವರು ಒದಗಿಸುವ ಸೌಕರ್ಯಗಳಿಗೆ ಆಕರ್ಷಕರಾಗಿ ನಗರ ಪ್ರದೇಶದ ಪರಿಚಯವಿಲ್ಲದ ಗ್ರಾಮೀಣ ಮುಗ್ಧಕೂಲಿಕಾರರು ಇವರ ಜೊತೆ ವಲಸೆ ಬರುತ್ತಾರೆ. ಆರ್ಥಿಕವಾಗಿ ಪ್ರಬಲರಾದ ಹಾಗೂ ಸ್ವಲ್ಪ ಓದಲು ಬರೆಯಲು ಜ್ಞಾನವಿರುವ ಕೆಲವು ಲಂಬಾಣಿ ಜನರು 'ಮಕಾದಮ್'ಗಳಾಗಿದ್ದಾರೆ. ಹೀಗಾಗಿ ತಮ್ಮವರೇ ಆದ ಮಧ್ಯವರ್ತಿಗಳು ಗೋವೆಯ ಬಗ್ಗೆ ಹಾಗೂ ಅಲ್ಲಿ ಉದ್ಯೋಗಾವಕಾಶಗಳ ಬಗ್ಗೆ ಹೇಳುವುದನ್ನು ಜನರು ನಂಬುವರಲ್ಲದೇ "ನಮಗೆ ನಮ್ಮ ಜನರು ಮೋಸ ಮಾಡಲಾರರು" ಎಂದು ದೃಡವಾದ ವಿಶ್ವಾಸವನ್ನು ಹೊಂದಿರುತ್ತಾರೆ. ಗೋವೆ ವಿಮೋಚನೆಗೊಂಡ ಹೊಸತನದಲ್ಲಿ ಇವರಿಗೆ ಹೆಚ್ಚಿನ ಬೇಡಿಕೆಯಿತ್ತು. "Several construction companies have emerged and provided a boom to the building construction workers who arrived by means of middleman or 'Mukadam' from the Poverty striken areas of Karnataka and Kerala."[12]

---

12.S.R.Phal: 1982: 'Society in Goa' (Some aspects of Tradition and Modern Trends) B.R. Publishing Corporation -Delhi- P -53.

ಎಸ್.ಆರ್.ಫಲ್ ಅವರು ಹೇಳುವಂತೆ ಅನೇಕ ಕಟ್ಟಡ ನಿರ್ಮಾಣ ಕಂಪನಿಗಳು ಗೋವೆಯಲ್ಲಿ ಅಸ್ಥಿತ್ವಕ್ಕೆ ಬಂದು ಕಟ್ಟಡ ಕಟ್ಟುವಿಕೆಯ ಕಾರ್ಯ ಭರದಿಂದ ಸಾಗಿ ಬಡತನದಿಂದ ಬಳಲುತ್ತಿರುವ ಕೇರಳ, ಕರ್ನಾಟಕ ಪ್ರದೇಶಗಳಿಂದ ಕೆಲಸವನ್ನರಿಸುತ್ತ ಅನೇಕ ಜನರು ಮುಕಾದಮ್‌ರ ಸಹಾಯದಿಂದ ಗೋವೆಯನ್ನು ಸೇರಿದ್ದಾರೆ. ಮಧ್ಯವರ್ತಿಗಳಿಗೆ ಕೂಲಿಕೆಲಸದಲ್ಲಿ ಅನುಭವವಿರುತ್ತದೆ. ಇವರು ಕೂಲಿಕಾರರ ಜೊತೆ ಅನ್ಯೂನ್ಯವಾದ ಸಂಬಂಧ ಹೊಂದಿರುತ್ತಾರೆ. ಕೂಲಿಕಾರರು ಹಾಗೂ ಮಾಲಿಕರ ಮಧ್ಯೆ ಸಂಪರ್ಕ ಜೋಡಿಸುವ ಕೊಂಡಿಯ ಹಾಗೆ ಇವರು ಕೆಲಸ ಮಾಡುತ್ತಾರೆ. ಮಕಾದಮ್‌ಗಳು ಮಾಲಿಕರಿಂದ ಮುಂಗಡ ಹಣ ಪಡೆದು ಕೆಲಸ ತೀವ್ರವಾಗಿ ಮುಗಿಸಿ ಕಮಿಶನ್ ಪಡೆಯುವ ಆಶೆಯಿಂದ ಕೂಲಿಕಾರರಿಗೆ ಹಣದ ಆಮಿಷ ತೋರಿಸಿ ಮುಂಗಡ ಹಣಕೊಟ್ಟು ಕೂಲಿಕಾರರನ್ನು ಕರೆದುಕೊಂಡು ಬರುತ್ತಾರೆ. ಅನಕ್ಷರಸ್ಥ ಕೂಲಿಕಾರರು ಮಕಾದಮ್‌ಗಳ ಹಿಂದೆ ವಲಸೆ ಬರುತ್ತಾರೆ. ನಿಗದಿಪಡಿಸಿದ ಅವಧಿಯೊಳಗೆ ಮಾಲಿಕರ ಕೆಲಸ ಮುಗಿಸಿಕೊಡುವ ಜವಾಬ್ದಾರಿ ಮಕಾದಮ್‌ಗಳು ಹೊಂದಿದ್ದರಿಂದ ಕೆಲಸ ತೀವ್ರವಾಗಿ ಮುಗಿಸಿ ಮಾಲಿಕರಿಂದ ಹಾಗೂ ಕೆಲಸಗಾರರಿಂದ ಶೇಕಡಾವಾರು ಕಮಿಶನ್ ಹಣ ಪಡೆಯುತ್ತಾರೆ. ಉದಾಹರಣಗೆ: ಸಂಗತಿ: 21ರಲ್ಲಿಯ ಕುಟುಂಬದ ಮುಖ್ಯಸ್ಥನ ಉದ್ಯೋಗ ದಲ್ಲಾಳಿ (ಮಕಾದಮ್) ವಯಸ್ಸು 50, 8ನೆಯ ತರಗತಿವರೆಗಿನ ಶಿಕ್ಷಣ ಪಡೆದಿದ್ದಾನೆ. 1985ರಿಂದ ಸತತವಾಗಿ ಕೆಲವು ಕೂಲಿಕಾರರನ್ನು ಜೊತೆಯಲ್ಲಿ ಕರೆದುಕೊಂಡು ಬಂದಿದ್ದು, ಕೂಲಿಕಾರರಿಗೆ ಕೆಲಸ ಕೊಡಿಸಿ ಅವರಿಂದ ಕಮಿಶನ್ ಹಣ ಪಡೆಯುತ್ತಾನೆ. ಇವನ ತಿಂಗಳ ಆದಾಯ 18,000 ರೂಪಾಯಿ ಇದೆ. ಅನಕ್ಷರಸ್ಥ ಲಂಬಾಣಿ ಕೂಲಿಕಾರರು ಈ ಮಕಾದಮ್‌ನ ಹಿಂದೆ ಗೋವೆಗೆ ವಲಸೆ ಬರುವುದು ಅನಿವಾರ್ಯವಾಗಿದೆ. ಈತನು ಸ್ವಸ್ಥಳದಲ್ಲಿ ಮನೆ ಕಟ್ಟಿಸಿಕೊಂಡಿದ್ದಾನೆ. ಹಾಗೂ ಕುಟುಂಬದ ಸಾಲ ತೀರಿಸಿಕೊಂಡು ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿದ್ದಾನೆ. ಇವರ ಹಿಂದೆ ನರಸಲಗಿ ತಾಂಡಾದ ಕೂಲಿಕಾರರು ವಲಸೆ ಬಂದು ಗೋವೆಯ ವಿವಿಧ ಪ್ರದೇಶಗಳಲ್ಲಿ ಕೂಲಿಕೆಲಸಗಳಲ್ಲಿ ತೊಡಗಿದ್ದಾರೆ. ಲಂಬಾಣಿಗರ ವಲಸೆಗೆ ಗೋವೆಯಲ್ಲಿ ಆಕರ್ಷಿಸುವ ಅಂಶಗಳನ್ನು ಈ ಮುಂದಿನಂತೆ ನೋಡಬಹುದು.

**ಕೋಷ್ಟಕ 31, ವಲಸೆಗೆ ಗೋವೆ ಆಯ್ಕೆ ಮಾಡಿಕೊಳ್ಳಲು ಕಾರಣವಾದ ಅಂಶಗಳ ಆಧಾರಿತ ಸಂಖ್ಯೆ ಮತ್ತು ಶೇಕಡವಾರು ಹಂಚಿಕೆ. (Number & percentage distribution of migrants by reason for migration to Goa)**

| ಕಾರಣಗಳು | ಸಂಖ್ಯೆ | ಪ್ರತಿಶತ |
|---|---|---|
| ಜನರು ಪರಿಚಯವಿರುವುದರಿಂದ | 10 | 16.67 |
| ಹೆಚ್ಚು ಕೂಲಿದರ | 13 | 21.67 |
| ಆಹಾರ ಹೊಂದುವುದರಿಂದ | 8 | 13.33 |
| ದುಡಿಮೆಗೆ ತಕ್ಕ ಕೂಲಿ ಸಿಗುವುದರಿಂದ | 7 | 11.67 |
| ಆಕರ್ಷಕ ಜೀವನ | 8 | 13.33 |
| ಎಲ್ಲಾ ಸೌಲಭ್ಯಗಳು ದೊರೆಯುವುದರಿಂದ | 2 | 3.33 |
| ನಿರಂತರವಾಗಿ ಉದ್ಯೋಗ ಸಿಗುವುದರಿಂದ | 12 | 20 |
| **ಒಟ್ಟು** | **60** | **100** |

ಮೇಲಿನ ಕೋಷ್ಟಕದ ಪ್ರಕಾರ ಪ್ರತಿಶತ 16.67ರಷ್ಟು ಮಾಹಿತಿದಾರರು ಜನರು ಪರಿಚಯವಿರುವುದರಿಂದ, ಪ್ರತಿಶತ 21.67ರಷ್ಟು ಮಾಹಿತಿದಾರರು ಹೆಚ್ಚು ಕೂಲಿದರವಿರುವುದರಿಂದ, ಪ್ರತಿಶತ 13.33ರಷ್ಟು ಮಾಹಿತಿದಾರರು ಆಹಾರ ಒಗ್ಗುವುದರಿಂದ ಪ್ರತಿಶತ 11.67ರಷ್ಟು ಮಾಹಿತಿದಾರರು ಶ್ರಮಕ್ಕೆ ತಕ್ಕ ಕೂಲಿ ದೊರೆಯುವುದರಿಂದ, ಪ್ರತಿಶತ 13.33ರಷ್ಟು ಮಾಹಿತಿದಾರರು ಆಕರ್ಷಕ ಜೀವನವಿರುವುದರಿಂದ, ಪ್ರತಿಶತ 3.33ರಷ್ಟು ಮಾಹಿತಿದಾರರು ಎಲ್ಲಾ ಸೌಕರ್ಯಗಳು ದೊರೆಯುವುದರಿಂದ ಹಾಗೂ ಪ್ರತಿಶತ 20.00ರಷ್ಟು ಮಾಹಿತಿದಾರರು ಸತತ ಉದ್ಯೋಗ ಸಿಗುವುದರಿಂದ ಗೋವೆಗೆ ವಲಸೆ ಬಂದಿದ್ದಾರೆ. ಲಂಬಾಣಿಗರು ವಲಸೆ ಬರಲು ಕಾರಣವಾದ ಅಂಶಗಳನ್ನು ವಿವರವಾಗಿ ಈ ಮುಂದಿನಂತೆ ನೋಡಬಹುದು.

1. ಲಂಬಾಣಿಗರು ಗೋವೆಗೆ ವಲಸೆ ಬರಲು ಹಲವಾರು ಅಂಶಗಳು ಕಾರಣವಾಗಿವೆ. ಮೇಲಿನ ಕೋಷ್ಟಕದ ಪ್ರಕಾರ ಗೋವೆಯಲ್ಲಿ ಈಗಾಗಲೇ ಹೋಗಿ ನೆಲೆಸಿರುವ ಸ್ನೇಹಿತರು, ಸಂಬಂಧಿಕರು, ಸಮೀಪದ ಹಳ್ಳಿಯ ಜನರು ಪರಿಚಯವಿರುವುದರಿಂದ ಪ್ರತಿಶತ 16.67ರಷ್ಟು ಲಂಬಾಣಿಗರು ವಲಸೆ ಬಂದಿದ್ದಾರೆ. ಲಂಬಾಣಿಗರ ವಲಸೆಗೆ ಹೆಚ್ಚಿನ ಕೂಲಿದರ, ಆಕರ್ಷಕ ಜೀವನ ಹಾಗೂ ಇನ್ನಿತರ ಅಂಶಗಳು ಕಾರಣವಾಗುವುದರ ಜೊತೆಗೆ ವಲಸೆ ಹೋದ ಪ್ರದೇಶದಲ್ಲಿ ಜನರು ಪರಿಚಯವಿರುವುದು ಕಾರಣವಾಗಿದೆ. ಉದಾಹರಣೆಗೆ: ಸಂಗತಿ: ಸಂಖ್ಯೆ 9ರ ಕುಟುಂಬದ ಲಕ್ಷ್ಮೀಬಾಯಿ ವಯಸ್ಸು 37, ಶಿಕ್ಷಣ 3ನೇಯ ತರಗತಿವರೆಗಿನ ಪ್ರಾಥಮಿಕ ಶಿಕ್ಷಣ ಪಡೆದಿದ್ದಾಳೆ. ಇವಳು 1980ರಲ್ಲಿ ಗೋವೆಗೆ ವಲಸೆ ಬಂದು ಮಾಪ್ಸಾನಗರದ ಶ್ರೀಮಂತ ಕ್ರಿಶ್ಚಿಯನ್ನರ ಮನೆಯಲ್ಲಿ ಗೃಹ ಕೆಲಸಕಾರ್ಯಗಳನ್ನು ಮಾಡುತ್ತಿದ್ದಾಳೆ. ತಿಂಗಳಿಗೆ ೨೫೦೦ ರೂಪಾಯಿ ಸಂಬಳ ಪಡೆಯುತ್ತಿದ್ದಾಳೆ. ಇವಳ ಪರಿಚಯದಿಂದ ಸಹೋದರ ಗುರು, ಹಾಗೂ ಸಂಬಂಧಿಕ ಗೋಕುಲ ವಲಸೆ ಬಂದು ವಾಸ್ಕೊನಗರದ ಆದರ್ಶ ಹೋಟೇಲಿನಲ್ಲಿ ಸಹಾಯಕರಾಗಿ ಕೆಲಸ ಕಾರ್ಯಗಳನ್ನು ಮಾಡುತ್ತಿದ್ದಾರೆ. ಇದಲ್ಲದೆ ಇನ್ನು ಕೆಲವು ಲಂಬಾಣಿ ಸ್ತ್ರೀಯರು ಇವಳ ಪರಿಚಯದಿಂದ ವಲಸೆ ಬಂದು ಗೃಹ ಕೆಲಸಗಳಲ್ಲಿ ತೊಡಗಿದ್ದಾರೆ. ವಿದ್ಯಾರ್ಥಿರವರು ಕೈಕೊಂಡ ರಾಂಚಿ ಪಟ್ಟಣದ ಅಧ್ಯಯನದಲ್ಲಿಯೂ 'ಆಕರ್ಶಿಸುವ ಅಂಶಗಳಲ್ಲಿ' ನಗರ ಪ್ರದೇಶದಲ್ಲಿ ಪರಿಚಿತ ಜನರಿರುವದು ಬಹಳ ಮಹತ್ವವಾದ ಆಕರ್ಶಿಸುವ ಕಾರಣವಾಗಿದೆ.[13] ಇದೇ ಪ್ರಕಾರವಾಗಿ ಎಸ್.ಸಿ.ಜೋಶಿರವರು ಕೈಕೊಂಡ 'Migration from Kumaon to Delhi' ಎಂಬ ಅಧ್ಯಯನದಲ್ಲಿಯೂ, ವಲಸಿಗರು ಕುಮಾನ್‌ದಿಂದ ದೆಹಲಿಗೆ ವಲಸೆ ಬರಲು, ದೆಹಲಿಯಲ್ಲಿರುವ ಸ್ನೇಹಿತರು, ಸಂಬಂಧಿಕರು ಇರುವುದರಿಂದ ಪ್ರತಿಶತ 78.59ರಷ್ಟು ಜನರು ವಲಸೆ ಹೋಗಿದ್ದಾರೆ.[14] ಆದ್ದರಿಂದ ವಲಸೆ ಹೋಗುವ ಪ್ರದೇಶದಲ್ಲಿ ಸ್ನೇಹಿತರು ಸಂಬಂಧಿಕರು ಇರುವುದು ಅವಶ್ಯವಾಗಿದೆ. ಏಕೆಂದರೆ ವಲಸೆ ಹೋಗುವ ಪ್ರದೇಶದಲ್ಲಿ ಉದ್ಯೋಗ ಕೊಡಿಸಲು, ಉಳಿದುಕೊಳ್ಳಲು ನೆರವಾಗುತ್ತಾರೆ. ಆದ್ದರಿಂದ ವಲಸಿಗರು ವಲಸೆ ಹೋಗುವುದಕ್ಕಿಂತ ಮೊದಲು ವಲಸೆ ಹೋಗುವ

---

13. L.P.Vidyarthi: (1969) 'Cultural Configuration of Ranchi' Calcutta, P-72.
14. S.C.Joshi: (1999) Sociology of Migration and Kinship Anmol Publications, New Delhi, P-56.

ಪ್ರದೇಶದಲ್ಲಿಯ ಸ್ನೇಹಿತರನ್ನು ಸಂಪರ್ಕಿಸಿ ನಂತರ ವಲಸೆ ಹೋಗುತ್ತಾರೆ. ವಲಸೆ ಹೋಗುವ ಪ್ರದೇಶದಲ್ಲಿ ಜನರು ಪರಿಚಯವಿರುವುದು ತುಂಬಾ ಮಹತ್ವದ ಪಾತ್ರವಹಿಸಿ ವಲಸಿಗರನ್ನು ವಲಸೆ ಹೋಗಲು ಪ್ರೇರೇಪಿಸುತ್ತದೆ.

## 2. ಉನ್ನತ ಕೂಲಿ (High Wages)

ಗ್ರಾಮೀಣ ಪ್ರದೇಶದಲ್ಲಿ ಕಡಿಮೆ ಕೂಲಿದರ ಇರುವುದರಿಂದ ಗ್ರಾಮೀಣ ಜನರು ಉನ್ನತ ಕೂಲಿದರಗಳಿರುವ ನಗರ ಪ್ರದೇಶಕ್ಕೆ ವಲಸೆ ಹೋಗುತ್ತಾರೆ.[15] ಗೋವೆ ಸಂಪತ್ಭರಿತ ರಾಜ್ಯವಾಗಿದೆ. ಸ್ಥಳಿಯರು ದೇಶ-ವಿದೇಶಗಳಿಗೆ ವಲಸೆ ಹೋಗಿರುವುದರಿಂದ ಕೂಲಿಕಾರರಿಗೆ ಹೆಚ್ಚಿನ ಬೇಡಿಕೆ ಇದೆ. ಆದ್ದರಿಂದ ಕೂಲಿಕಾರರು ಹೆಚ್ಚು ಕೂಲಿ ಪಡೆಯುತ್ತಾರೆ. ವಿಜಾಪುರ ಜಿಲ್ಲೆಯಲ್ಲಿ ಕೂಲಿಕಾರರು ದಿನಕ್ಕೆ 30 ರೂಪಾಯಿ, ಕೂಲಿ ಪಡೆದರೆ, ಗೋವೆಯಲ್ಲಿ ದಿನಕ್ಕೆ 100 ರೂಪಾಯಿಗಳಿಂದ 200 ರೂಪಾಯಿಗಳವರೆಗೆ ಕೂಲಿ ಪಡೆಯುತ್ತಾರೆ. ನಮ್ಮ ಅಧ್ಯಯನದ ಪ್ರಕಾರ ಪ್ರತಿಶತ 21.67ರಷ್ಟು ಲಂಬಾಣಿಗರು ಹೆಚ್ಚಿನ ಕೂಲಿದರಗಳಿಗೆ ಆಕರ್ಶಿತರಾಗಿ ಗೋವೆಗೆ ವಲಸೆ ಬಂದಿದ್ದಾರೆ. ಉದಾಹರಣೆಗೆ: ಸಂಗತಿ: ಸಂಖ್ಯೆ 59ರ ಕುಟುಂಬದ ಅಶೋಕ, ವಯಸ್ಸು 38, ಪಿಯುಸಿ.ವರೆಗಿನ ಕಾಲೇಜು ಶಿಕ್ಷಣ ಮುಗಿಸಿದ್ದಾನೆ. 2000ನೆಯ ಸಾಲಿನಿಂದ ಸತತವಾಗಿ ಗೋವಗೆ ವಲಸೆ ಬರುತ್ತಿದ್ದು ವಾಸ್ಕೋನಗರದಲ್ಲಿ ಸಮುದ್ರದಲ್ಲಿ ಬೋಟುಚಾಲಕನಾಗಿ ಕೆಲಸ ಮಾಡುತ್ತಿದ್ದು, ತಿಂಗಳಿಗೆ 3,500 ರೂಪಾಯಿ ಸಂಬಳ ಪಡೆಯುತ್ತಾನೆ. ಮೊದಲು ಇವನು ಸ್ವಸ್ಥಳದಲ್ಲಿ ಕೂಲಿಕೆಲಸದಲ್ಲಿ ತೊಡಿಗಿದ್ದ ದಿನಕ್ಕೆ 30 ರೂಪಾಯಿ ಕೂಲಿ ಪಡೆಯುತ್ತಿದ್ದನು. ಈ ಅಲ್ಪ ಆದಾಯದಿಂದು ಕುಟುಂಬ ನಿರ್ವಹಿಸಲು ಸಾಧ್ಯವಾಗದೇ ಇರುವುದರಿಂದ ತನ್ನ ಹೆಂಡತಿ ಮಕ್ಕಳನ್ನು ಸ್ವಸ್ಥಳದಲ್ಲಿ ಬಿಟ್ಟು ಗೋವೆಗೆ ವಲಸೆ ಬಂದಿದ್ದಾನೆ. ಇವನ ವಲಸೆಗೆ ವಿಜಾಪುರ ಜಿಲ್ಲೆಯಲ್ಲಿಯ ಕಡಿಮೆ ಕೂಲಿದರಗಳು ಮುಖ್ಯ ಕಾರಣವಾಗಿದೆ. ಗೋವೆಯ ಜನರು ತಮ್ಮ ಕೆಲಸಕಾರ್ಯಗಳನ್ನು ತೀವ್ರವಾಗಿ ಮಾಡಿಸಿಕೊಳ್ಳಲು ಕೂಲಿಕಾರರಿಗೆ ಹೆಚ್ಚು ಕೂಲಿ ಕೊಡುತ್ತಾರೆ. ಕೆಲಸಗಾರರು ಹೆಚ್ಚು ವೇಳೆ ದುಡಿದರೆ ಹೆಚ್ಚು ಸಂಬಳ ಪಡೆಯುತ್ತಾರೆ.

## 3. ಆಹಾರ ಹೊಂದುವುದರಿಂದ (Food's are Adjustable)

ಮೊದಲಿನಿಂದಲೂ ಅಲೆಮಾರಿ ಜೀವನ ಸಾಗಿಸುತ್ತ ಬಂದ ಲಂಬಾಣಿಗರು ಇತರ ಅಲೆಮಾರಿ ಸಮುದಾಯಗಳಂತೆ ಕಾಡುಗಳಲ್ಲಿ ಸುಲಭವಾಗಿ ಸಿಗುವ ಪ್ರಾಣಿ-ಪಕ್ಷಿಗಳನ್ನು ಬೇಟೆಯಾಡಿ ಅವುಗಳ ಮಾಂಸಾಹಾರವನ್ನು ಉಪಯೋಗಿಸುತ್ತ ಬಂದಿದ್ದಾರೆ. ಇವರು ಆರ್ಥಿಕವಾಗಿ ಬಡವರಾಗಿದ್ದರೂ, ಮಾಂಸಹಾರ ಹಾಗೂ ಮದ್ಯ ಮೇಲಿಂದ ಮೇಲೆ ಉಪಯೋಗಿಸುತ್ತಾರೆ. ಇವರು ಮೀನು, ಎಡಿ, ಪಕ್ಷಿಗಳು, ಊಡ, ಕಾಡುಹಂದಿ, ಕೌಜಗ, ಮೊಲ ಮುಂತಾದವುಗಳ ಮಾಂಸವನ್ನು ಉಪಯೋಗಿಸುತ್ತಾರೆ. ತಮ್ಮ ಸಂಪಾದನೆಯ ಅರ್ಧದಷ್ಟು ಭಾಗ ಮಾಂಸ ಹಾಗೂ ಮದ್ಯಪಾನಕ್ಕೆ ಖರ್ಚು ಮಾಡುತ್ತಾರೆ. ಗೋವೆಯಲ್ಲಿ ಮೀನಿನ ಆಹಾರ ಹಾಗೂ ಮದ್ಯ ಅಗ್ಗದರಗಳಲ್ಲಿ ಸಿಗುವುದರಿಂದ ಹಾಗೂ ಗೋವೆಯ ಆಹಾರ ಪದ್ಧತಿ ಲಂಬಾಣಿಗರ ಆಹಾರ

---

15. Ashish, Bose, Studies in India's Urbanisation 1901 -71 Tata MCgraw Hill Pub -Co: Ltd, New Delhi, (1975) P-103.

ಪದ್ಧತಿಗೆ ಹೊಂದುವುದರಿಂದ ಲಂಬಾಣಿಗರು ವಲಸೆ ಹೋಗುತ್ತಾರೆ. ನಮ್ಮ ಅಧ್ಯಯನದ ಪ್ರಕಾರ ನರಸಲಗಿ ತಾಂಡಾದ ಪ್ರತಿಶತ 13.33ರಷ್ಟು ಮಾಹಿತಿದಾರರು ಆಹಾರ ಹೊಂದುವುದರಿಂದ ಗೋವೆಗೆ ವಲಸೆ ಬಂದಿದ್ದಾರೆ. ಉದಾಹರಣೆಗೆ: ಸಂಗತಿ: ಸಂಖ್ಯೆ 15ರಲ್ಲಿಯ ಕುಟುಂಬದ ರೇಖಪ್ಪ ರಾಠೋಡ, ವಯಸ್ಸು 25, 3ನೇಯ ತರಗತಿವರೆಗಿನ ಪ್ರಾಥಮಿಕ ಶಿಕ್ಷಣ ಪಡೆದಿದ್ದಾನೆ. ಈತನು 1999ರಲ್ಲಿ ಗೋವೆಗೆ ವಲಸೆಬಂದು ಪಿಲಾರ ಪಟ್ಟಣದಲ್ಲಿ ಲಾರಿಡ್ರೈವರ್ ಆಗಿ ಉದ್ಯೋಗ ಮಾಡುತ್ತಿದ್ದಾನೆ. ತಿಂಗಳಿಗೆ 4,500 ರೂಪಾಯಿ ಸಂಬಳ ಪಡೆಯುತ್ತಿದ್ದಾನೆ. ಇವನ ಕುಟುಂಬದಲ್ಲಿ ಒಟ್ಟು 3 ಜನ ಸದಸ್ಯರು ವಾಸವಾಗಿದ್ದಾರೆ. ಸ್ವ ಸ್ಥಳದಲ್ಲಿ ಈತನಿಗೆ ನೀರಾವರಿ ಭೂಮಿ ಇದ್ದರೂ, ವಲಸೆ ಬಂದಿದ್ದಾನೆ. ಕಾರಣ ಈತನು ಸತತವಾಗಿ ಮದ್ಯಪಾನ ಮಾಡುವವನಾಗಿದ್ದು ಹಾಗೂ ಮಾಂಸಾಹಾರವನ್ನು ಸೇವಿಸುವವನಾಗಿದ್ದು, ಈತನ ಆಹಾರ ಹಾಗೂ ಗೋವೆಯ ಆಹಾರ ಹೊಂದುವುದರಿಂದ ಗೋವೆಯಲ್ಲಿ ವಾಸವಾಗಿರುವುದಾಗಿ ನನ್ನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕೈಕೊಂಡ ಸಂದರ್ಶನದಲ್ಲಿ ಪ್ರತಿಕ್ರಿಯೆ ನೀಡಿದ್ದಾನೆ.

**4. ಶ್ರಮಕ್ಕೆ ತಕ್ಕಕೂಲಿ (Gets Apt wage for work)**

ವಿಜಾಪುರ ಬರಪೀಡಿತ ಪ್ರದೇಶವಾಗಿರುವುದರಿಂದ ಇಲ್ಲಿ ಹಣಕ್ಕೆ ಹೆಚ್ಚಿನ ಬೆಲೆ ಇದೆ. ಇಲ್ಲಿಯ ಕೂಲಿಕಾರರು ಕಡಿಮೆ ಕೂಲಿ ಪಡೆಯುತ್ತಾರೆ. ಅವರ ಶ್ರಮಕ್ಕೆ ತಕ್ಕಕೂಲಿ ಪಡೆಯುವುದಿಲ್ಲ. ಆದರೆ ಗೋವೆಯಲ್ಲಿ ಕೂಲಿಕಾರರು ಶ್ರಮಕ್ಕೆ ತಕ್ಕಕೂಲಿ ಪಡೆಯುತ್ತಾರೆ. ಆದ್ದರಿಂದ ಹಣಸಂಪಾದಿಸುವ ಆಸೆ-ಆಕಾಂಕ್ಷೆಗಳನ್ನಿಟ್ಟುಕೊಂಡು ಲಂಬಾಣಿಗರು ಗೋವೆಗೆ ವಲಸೆ ಬರುತ್ತಾರೆ. ನಮ್ಮ ಅಧ್ಯಯನದ ನಮೂನೆಗಳಲ್ಲಿ ಪ್ರತಿಶತ 11.67ರಷ್ಟು ಮಾಹಿತಿದಾರರು ಶ್ರಮಕ್ಕೆ ತಕ್ಕಕೂಲಿ ದೊರೆಯುವುದರಿಂದ ಹಾಗೂ ಹೆಚ್ಚು ವೇಳೆ ಕೆಲಸ ಮಾಡಿದರೆ ಪ್ರತ್ಯೇಕ ಕೂಲಿ ಸಿಗುವುದರಿಂದ ಗೋವೆಗೆ ವಲಸೆ ಬಂದಿದ್ದಾರೆ.

**5. ಆಕರ್ಷಕ ಜೀವನ (Atractive Life):**

ಗೋವೆ ಜಗತ್ತಿನ ಪ್ರವಾಸಿ ಸ್ಥಳಗಳಲ್ಲಿ ಒಂದಾಗಿದ್ದು ಇಲ್ಲಿಯ ಬೀಚುಗಳು, ಸುಂದರ ನಗರಗಳು, ಸಮುದ್ರತೀರ ಪ್ರದೇಶ, ಚರ್ಚುಗಳು, ದೇವಾಲಯಗಳು, ಮನೋರಂಜನಾ ಸಾಧನಗಳು ಜನರನ್ನು ಆಕರ್ಷಿಸುತ್ತವೆ. ಇದರ ಪ್ರಭಾವ ಲಂಬಾಣಿಗರ ಮೇಲೂ ಬೀರಿದೆ ಆದ್ದರಿಂದ ಲಂಬಾಣಿಗರು ಗೋವೆಯ ಆಕರ್ಷಕ ಜೀವನಕ್ಕೆ ಪ್ರಭಾವಿತರಾಗಿ ವಲಸೆ ಬರುತ್ತಾರೆ. ನಮ್ಮ ಅಧ್ಯಯನದ ನಮೂನೆಯ ಪ್ರತಿಶತ 13.33ರಷ್ಟು ಮಾಹಿತಿದಾರರು ಗೋವೆಯ ಆಕರ್ಶಕ ಜೀವನಕ್ಕೆ ಪ್ರಭಾವಿತರಾಗಿ ವಲಸೆ ಬಂದಿದ್ದಾರೆ. ಉದಾಹರಣೆಗೆ: ಸಂಗತಿ; ಸಂಖ್ಯೆ 44ರಲ್ಲಿಯ ಕುಟುಂಬದ ಸದಸ್ಯ ದೇವಿಂದ್ರ. ವಯಸ್ಸು 21, ಎಸ್.ಎಸ್.ಎಲ್.ಸಿ.ವರೆಗೆ ವಿದ್ಯಾಭ್ಯಾಸ ಮಾಡಿದ್ದಾನೆ. ವಾಸ್ಕೊನಗರದಲ್ಲಿ ಇಂಡಿಯನ್ ಆಯಿಲ್ ಕಾರ್ಪೋರೇಶನ್ ಸಂಸ್ಥೆಯಲ್ಲಿ ಡ್ರೈವರಾಗಿ ಕೆಲಸ ಮಾಡುತ್ತಿದ್ದಾನೆ. ತಿಂಗಳಿಗೆ 10,000 ರೂಪಾಯಿ ಸಂಬಳ ಪಡೆಯುತ್ತಿದ್ದಾನೆ. ಹಾಗೂ ಸ್ವತಃ ಡಿಜೇಲ್ ಟ್ಯಾಂಕರ್ ಖರೀದಿಸಿಕೊಂಡು ಬಾಡಿಗೆಗೆ ನೀಡಿದ್ದಾನೆ. ಈತನು ಗೋವೆಯಲ್ಲಿ ಆಕರ್ಷಕ ಜೀವನ ಪದ್ಧತಿಗೆ ಮಾರು ಹೋಗಿದ್ದು, ಮರಳಿ ಸ್ವಸ್ಥಳಕ್ಕೆ ಬರುವುದಿಲ್ಲ ಅಲ್ಲಿ ಏನಿದೆ? ಗೋವೆಯಲ್ಲಿ ನಮಗೆ ಏನುಬೇಕೋ ಅದು ಸಿಗುತ್ತದೆ ಎಂದು ಪ್ರತಿಕ್ರಿಯೆ ನೀಡಿದ್ದಾನೆ. ಆದರೆ

ಎಸ್.ಸಿ.ಜೋಶಿರವರು ಕೈಕೊಂಡ ಕುಮನ್‌ರ ದೆಹಲಿ ವಲಸೆಯ ಅಧ್ಯಯನದಲ್ಲಿ 'ನಗರ ಆಕರ್ಷಕ' ಜೀವನವು ವಲಸಿಗರ ಮೇಲೆ ಪ್ರಭಾವ ಬೀರಿಲ್ಲ.[16]

**6. ಎಲ್ಲಾ ಸೌಕರ್ಯಗಳು ದೊರೆಯುವುದರಿಂದ (All facilities are available):**

ಕೂಲಿಕಾರರಿಗೆ ಗೋವೆಯಲ್ಲಿ ವಸತಿ, ಉಪಹಾರ, ವೈದ್ಯಕೀಯ ಹಾಗೂ ಇನ್ನಿತರ ಮೂಲಭೂತ ಸೌಲಭ್ಯಗಳನ್ನು ಒದಗಿಸುತ್ತಾರೆ. ಉದ್ಯೋಗ ಒದಗಿಸುವ ಮಾಲಿಕರು ತಮ್ಮ ಸ್ವಂತ ಜಾಗದಲ್ಲಿ ಚಿಕ್ಕ-ಚಿಕ್ಕ ಗುಡಿಸಲುಗಳನ್ನು ನಿರ್ಮಿಸಿ, ಕೂಲಿಕಾರರಿಗೆ ಅನುಕೂಲ ಮಾಡಿಕೊಡುತ್ತಾರೆ. ಈ ಮನೆಗಳಿಗೆ ಬಾಡಿಗೆ ಪಡೆಯುವುದಿಲ್ಲ. ಅದೇ ಪ್ರಕಾರವಾಗಿ ಕೂಲಿಕಾರರು ವಾಸಿಸುವ ಸ್ಥಳಕ್ಕೆ ವೈದ್ಯರು ಬಂದು ಆರೋಗ್ಯ ಸೇವೆ ಒದಗಿಸುತ್ತಾರೆ. ಹೋಟೇಲುಗಳಲ್ಲಿ, ಶ್ರೀಮಂತರ ಮನೆಗಳಲ್ಲಿ ದುಡಿಯುವ ಕೂಲಿಕಾರರಿಗೆ ಆಹಾರ, ವಸತಿ, ವೈದ್ಯಕೀಯ ಸೌಲಭ್ಯಗಳನ್ನು ಒದಗಿಸುತ್ತಾರೆ. ಕೂಲಿಕಾರರಿಗೆ ಕಷ್ಟ ಕಾರ್ಪಣ್ಯಗಳು ಬಂದಾಗ ಹಣಕಾಸಿನ ಸಹಾಯ ಮಾಡುತ್ತಾರೆ. ಈ ಸೌಲಭ್ಯಗಳಿಂದ ತೃಪ್ತಿ ಹೊಂದುವ ಕೂಲಿಕಾರರು ಸತತವಾಗಿ ಗೋವೆಗೆ ವಲಸೆ ಬರುತ್ತಾರೆ. ಇಂತಹ ಸಮೃದ್ಧ ಪ್ರದೇಶದಲ್ಲಿ ಹೊಂದಿಕೊಂಡ ಲಂಬಾಣಿಗರು ಸ್ವಸ್ಥಳಗಳಲ್ಲಿ ಹೆಚ್ಚು ದಿನ ಉಳಿಯುವುದಿಲ್ಲ. ವಿವಾಹ, ದಸರಾಹಬ್ಬ, ತೀಜ್ (ಗೋದಿ ಸಸಿಹಬ್ಬ) ಯಾರಾದರೂ ಮರಣ ಹೊಂದಿದಾಗ ತಾಂಡಾಗಳಿಗೆ ಭೇಟಿನೀಡಿ ಮತ್ತೆ ಮರಳಿ ಹೋಗುತ್ತಾರೆ. ನಮ್ಮ ಅಧ್ಯಯನದ ಪ್ರಕಾರ ಪ್ರತಿಶತ 3.33ರಷ್ಟು ಮಾಹಿತಿದಾರರು ಎಲ್ಲಾ ಸೌಲಭ್ಯಗಳು ದೊರೆಯುವುದರಿಂದ ಗೋವೆಗೆ ವಲಸೆ ಬಂದಿದ್ದಾರೆ.

**7. ನಿರಂತರವಾಗಿ ಉದ್ಯೋಗ ದೊರೆಯುವಿಕೆ (Availability of continuous work):**

ವಿಜಾಪುರ ಜಿಲ್ಲೆಯಲ್ಲಿ ಕೂಲಿಕಾರರಿಗೆ ಬೆಳೆನಾಟಿ ಮಾಡುವ ಹಾಗೂ ಬೆಳೆ ಕಟಾವು ಮಾಡುವ ಸಂದರ್ಭ ಬಿಟ್ಟರೆ ಉಳಿದ ವೇಳೆಯಲ್ಲಿ ಕೂಲಿಕೆಲಸ ಸಿಗುವುದಿಲ್ಲ. ಆದ್ದರಿಂದ ಸಾಂಧರ್ಭಿಕ ನಿರುದ್ಯೋಗ ಸಂಭವಿಸುತ್ತದೆ. ಆದರೆ ಗೋವೆಯಲ್ಲಿ ಬರಗಾಲದ ಭೀತಿ ಇಲ್ಲದೆ ವರ್ಷದ ಎಲ್ಲಾ ದಿನಗಳಲ್ಲಿ ನಿರಂತರವಾಗಿ ಕೂಲಿಕೆಲಸ ಸಿಗುತ್ತದೆ. ಆದ್ದರಿಂದ ಕೂಲಿಕಾರರು ವಲಸೆ ಬರುತ್ತಾರೆ. ನಮ್ಮ ಅಧ್ಯಯನದ ನಮೂನೆಯಲ್ಲಿ ನರಸಲಗಿ ತಾಂಡಾದ ಪ್ರತಿಶತ 20.00ರಷ್ಟು ಲಂಬಾಣಿಗರು ನಿರಂತರವಾಗಿ ಉದ್ಯೋಗ ಸಿಗುವುದರಿಂದ ಗೋವೆಗೆ ವಲಸೆ ಬಂದಿದ್ದಾರೆ.

**8. ಉದ್ಯೋಗಾವಕಾಶಗಳ ಸೃಷ್ಠಿ:**

ಗೋವೆಯು ಬಹುಕಾಲದವರೆಗೆ ಪರಕೀಯರ ಆಡಳಿತಕ್ಕೆ ಒಳಪಟ್ಟಿತ್ತು. ಆದ್ದರಿಂದ ಗೋವೆಯಲ್ಲಿ ಅಭಿವೃದ್ಧಿ ಕಾರ್ಯಗಳು ಕುಂಟುತ್ತಾಸಾಗಿದ್ದವು. ಪೋರ್ಚುಗೀಸರ ಆಡಳಿತದ ಅವಧಿಯಲ್ಲಿ ಮತಾಂತರ ಹೊಂದಿದವರಿಗೆ ಮಾತ್ರ ಸೌಲಭ್ಯಗಳನ್ನು ಒದಗಿಸಲಾಗುತ್ತಿತ್ತು. ಅವರು ಗೋವೆಯ ಸಮಗ್ರ ಅಭಿವೃದ್ಧಿಗೆ ಪ್ರಯತ್ನಿಸಲಿಲ್ಲ. ಗೋವೆ ವಿಮೋಚನೆಗೊಂಡ ನಂತರ ಭಾರತದ ಕೇಂದ್ರಾಡಳಿತ ಪ್ರದೇಶವಾಯಿತು ಶತಮಾನಗಳಿಂದ ಶೋಷಣೆಗೆ ಒಳಪಟ್ಟ ಜನರಿಗೆ ಸಾಮಾಜಿಕ ನ್ಯಾಯ ಒದಗಿಸಲು ಭಾರತ ಸರ್ಕಾರ

16. S.C.Joshi: (1999) Sociology of Migration and Kinship -P-58.

ಆಡಳಿತವನ್ನು ವಿಕೇಂದ್ರಿಕರಿಸಿ ಅಭಿವೃದ್ಧಿ ಕಾರ್ಯಗಳನ್ನು ತುರ್ತಾಗಿ ಪ್ರಾರಂಭಿಸಿದ್ದರಿಂದ ಹಾಗೂ ತೀವ್ರವಾಗಿ ಬೆಳೆದ ಔದ್ಯೋಗಿರಣದ ಪರಿಣಾಮದಿಂದ ಗೋಡಂಬಿ ಕಾರ್ಖಾನೆಗಳು, ಯೂರಿಯಾ ಫ್ಯಾಕ್ಟರಿ ತೆಂಗಿನಎಣ್ಣೆ ತಯಾರಿಸುವ ಫ್ಯಾಕ್ಟರಿ ಮುಂತಾದವು ಪ್ರಾರಂಭವಾಗಿ ಉದ್ಯೋಗಾವಕಾಶಗಳು ಸೃಷ್ಟಿಯಾದವು. ಈ ಉದ್ಯೋಗಾವಕಾಶಗಳಿಗೆ ಆಕರ್ಶಿತರಾಗಿ ವಿಜಾಪುರ ಜಿಲ್ಲೆಯ ಲಂಬಾಣಿಗರು ಗೋವೆಗೆ ವಲಸೆ ಬರಲು ಪ್ರಾರಂಭಿಸಿದ್ದಾರೆ. ಗೋವೆಯಲ್ಲಿ ಪದವೀಧರರಿಗೆ ಉದ್ಯೋಗಾವಕಾಶಗಳು ಕಡಿಮೆ ಕೂಲಿಕಾರರಿಗೆ ಹೆಚ್ಚಿನ ಬೇಡಿಕೆ ಇರುವುದರಿಂದ ಗೋವೆ ತನ್ನ ಕಡೆ ಕೂಲಿಕಾರರನ್ನು ಸೆಳೆಯುತ್ತಿದೆ.

**9. ಪ್ರವಾಸೋದ್ಯಮ:**

ಪ್ರವಾಸೋದ್ಯಮದಿಂದ ಲಂಬಾಣಿಗರಿಗೆ ಸಾಕಷ್ಟು ಪ್ರಮಾಣದಲ್ಲಿ ಕೂಲಿಕೆಲಸಗಳು ದೊರೆಯುತ್ತಿವೆ. ಲಂಬಾಣಿ ಯುವಕರು ಹೋಟೇಲುಗಳಲ್ಲಿ ಸಪ್ಲೈಯರ್, ಅಡುಗೆ ಆಳುಗಳಾಗಿ ಕೆಲಸ ಮಾಡುತ್ತಿದ್ದಾರೆ. ಕೆಲವರು ಬೀಚುಗಳಲ್ಲಿ ತೆಂಗಿನಕಾಯಿ ಮಾರಾಟ, ಐಸ್‌ಕ್ರೀಮ್, ಗಾಂಜಾ ಮಾರಾಟ ಮಾಡುತ್ತಿದ್ದಾರೆ. ಉದಾಹರಣೆಗೆ: ಸಂಗತಿ; ಸಂಖ್ಯೆ 45ರ ಕುಟುಂಬದ ಸದಸ್ಯನ ವಯಸ್ಸು 21, ಐದನೆಯ ತರಗತಿ ವರೆಗಿನ ಶಿಕ್ಷಣ ಪಡೆದಿದ್ದಾನೆ. ಈತನು ಸಂಬಂಧಿಕರ ಹಿಂದೆ 1995ರಿಂದ ಗೋವೆಗೆ ವಲಸೆ ಬರುತ್ತಿದ್ದಾನೆ. ಮಾಪುಸಾ ತಾಲ್ಲೂಕಿನ ಅಂಜುನಾ ಬೀಚಿನಲ್ಲಿ ಐಸ್‌ಕ್ರೀಮ್ ಮಾರಾಟ ಮಾಡುವುದರ ಜೊತೆಗೆ, ಗಾಂಜಾ ಹಾಗೂ ಇನ್ನೀತರ ಮಾದಕ ಪದಾರ್ಥಗಳನ್ನು ಮಾರಾಟ ಮಾಡುತ್ತಿದ್ದಾನೆ. ಈ ಉದ್ಯೋಗದಿಂದ ಈತನು ಆರ್ಥಿಕವಾಗಿ ಮುಂದುವರಿದಿದ್ದು ಸ್ವಸ್ಥಳದಲ್ಲಿ ಭೂಮಿ, ದ್ವಿಚಕ್ರವಾಹನ ಖರೀದಿಸಿದ್ದಾನೆ. ಇದಲ್ಲದೆ ಲಂಬಾಣಿ ಸ್ತ್ರೀಯರು ತಮ್ಮ ಸಾಂಪ್ರದಾಯಿಕ ವೇಷಭೂಷಣಗಳನ್ನು ವಿದೇಶಿಯರಿಗೆ ಮಾರಾಟ ಮಾಡುವ ಉದ್ಯೋಗದಲ್ಲಿ ತೊಡಗಿದ್ದಾರೆ. ಲಂಬಾಣಿ ಯುವಕರು-ಯುವತಿಯರು ವಿದೇಶಿಯರಿಗೆ ಎಣ್ಣೆ ಮಸಾಜ್ ಮಾಡುವ ಕೆಲಸ ಮಾಡುವುದು ಕಂಡುಬಂದಿದೆ. ಇದರಿಂದ ಒಂದು ಗಂಟೆಗೆ ಕನಿಷ್ಠ 500 ರೂಪಾಯಿ ಕೂಲಿ ಪಡೆಯುತ್ತಾರೆ. ಉದಾಹರಣೆಗೆ: ಸಂಗತಿ: ಸಂಖ್ಯೆ 8 ರ ಕುಟುಂಬದಲ್ಲಿ ವಾಸವಾಗಿರುವ ಮಹಿಳೆಯ ವಯಸ್ಸು 25, ಅನಕ್ಷರಸ್ಥೆ ವಿಚ್ಛೇದಿತೆ, 1999ರಲ್ಲಿ ಗೋವೆಗೆ ವಲಸೆ ಬಂದು ಮಾಪ್ಸಾನಗರದಲ್ಲಿ ಶ್ರೀಮಂತರ ಮನೆಯೊಂದರಲ್ಲಿ ಮನೆಯ ಕೆಲಸ-ಕಾರ್ಯಗಳನ್ನು ಮಾಡುತ್ತಿದ್ದಾಳೆ. ಇದರ ಜೊತೆಗೆ ಸಮುದ್ರತೀರ ಪ್ರದೇಶದ ಬೀಚುಗಳಲ್ಲಿ ವಿದೇಶಿಯರಿಗೆ ಎಣ್ಣೆ ಮಸಾಜ್ ಮಾಡುವ ಉದ್ಯೋಗದಲ್ಲಿ ತೊಡಗಿದ್ದಾಳೆ. ಇದರಿಂದ ದಿನಕ್ಕೆ ಕನಿಷ್ಠ 500 ರೂಪಾಯಿ ಆದಾಯವಿದೆ. ಆದ್ದರಿಂದ ಪ್ರವಾಸೋದ್ಯಮ ಸಂಬಂಧವಾಗಿ ಉದ್ಭವಿಸಿರುವ ಉದ್ಯೋಗವಕಾಶಗಳಿಗೆ ಆಕರ್ಷಕರಾಗಿ ಲಂಬಾಣಿಗರು ಗೋವೆಗೆ ವಲಸೆ ಬಂದಿದ್ದಾರೆ.

**ವಲಸಿಗರನ್ನು ಕಳುಹಿಸಿಕೊಡುವ ಸಮುದಾಯದ ಮೇಲೆ ಆಗುತ್ತಿರುವ ಪರಿಣಾಮಗಳು. (Impact on sending Community)**

ವಲಸೆಯು ದ್ವಿಮುಖ ಬದಲಾವಣೆಗೆ ಕಾರಣವಾಗುತ್ತದೆ. ಅದು ಜನರನ್ನು ಹೊರತಳ್ಳುವ ಸಮಾಜದ ಮೇಲೆಯೂ ಬರಮಾಡಿಕೊಳ್ಳುವ ಸಮಾಜದ ಮೇಲೆಯೂ, ಪರಿಣಾಮ ಬೀರುತ್ತದೆ. ಲಂಬಾಣಿಗರನ್ನು

ಹೊರತಳ್ಳಿದ ವಿಜಾಪುರ ಜಿಲ್ಲೆಯ ನರಸಲಗಿ ತಾಂಡಾದ ಮೇಲೆ ಹಾಗೂ ಲಂಬಾಣೇತರ ಸಮಾಜದ ಮೇಲೆ ಬೀರಿದ ಪರಿಣಾಮವನ್ನು ಈ ಮುಂದಿನಂತೆ ತಿಳಿದುಕೊಳ್ಳಬಹುದು.

**ಸಾಮಾಜಿಕ ಜೀವನದ ಮೇಲೆ ಆಗುತ್ತಿರುವ ಪರಿಣಾಮಗಳು:**

ವಲಸೆಯಿಂದ ಲಂಬಾಣಿಗರ ಸಾಮಾಜಿಕ ಜೀವನದಲ್ಲಿ ಕೆಲವು ಬದಲಾವಣೆಗಳಾಗಿವೆ. ಲಂಬಾಣಿಗರು ತಮ್ಮ ಕುಟುಂಬದ ಸಮೇತ ಗೋವೆಗೆ ವಲಸೆ ಹೋಗುವುದರಿಂದ ಅವರ ಹಿಂದೆ ಮಕ್ಕಳೂ ಅನಿವಾರ್ಯವಾಗಿ ವಲಸೆ ಹೋಗುತ್ತಾರೆ. ಇದರಿಂದ ಲಂಬಾಣಿಗರಿಗೆ ತಮ್ಮ ಮಕ್ಕಳಿಗೆ ಶಿಕ್ಷಣ ಕೊಡಿಸಲು ಸಾಧ್ಯವಾಗುತ್ತಿಲ್ಲ. ಶಿಕ್ಷಣ ಕೊಡಿಸುತ್ತಿರುವವರೂ, ಅರ್ಧಕ್ಕೆ ನಿಲ್ಲಿಸಿದ್ದಾರೆ. ವಲಸೆಯು ಸ್ತ್ರೀ ಶಿಕ್ಷಣದ ಮೇಲೂ ತುಂಬಾ ಪರಿಣಾಮಬೀರಿದೆ. ಸ್ತ್ರೀಯರನ್ನು ಕಡೆಗಣಿಸುವ ಲಂಬಾಣಿಗರು ಶಿಕ್ಷಣ ಪಡೆಯುತ್ತಿರುವ ಹೆಣ್ಣು ಮಕ್ಕಳನ್ನು ಶಾಲೆ ಬಿಡಿಸಿ ತಮ್ಮ ಹಿಂದೆ ಗೋವೆಗೆ ಕರೆದುಕೊಂಡು ಹೋಗುತ್ತಾರೆ. ಉದಾಹರಣಗೆ: ಸಂಗತಿ; ಸಂಖ್ಯೆ 13ರಲ್ಲಿ ವಾಸವಾಗಿರುವ ಕುಟುಂಬದ ಮುಖ್ಯಸ್ಥನ ವಯಸ್ಸು 35, ಎಸ್.ಎಸ್.ಎಲ್.ಸಿ. ವರೆಗೆ ಶಿಕ್ಷಣ ಪಡೆದಿದ್ದಾನೆ. ಈತನು 2002 ರಿಂದ ಸತತವಾಗಿ ಗೋವೆಗೆ ವಲಸೆ ಬಂದು ಪಿಲಾರಗ್ರಾಮದ ಹತ್ತಿರದ ಪ್ರದೇಶದಲ್ಲಿ ನೆಲೆಸಿ ಕೂಲಿ ಕೆಲಸದಲ್ಲಿ ತೊಡಗಿದ್ದಾನೆ. ಇವನ ಕುಟುಂಬದಲ್ಲಿ ಒಟ್ಟು 6 ಜನರು ವಾಸವಾಗಿದ್ದು, ಅವರಲ್ಲಿ ಇಬ್ಬರು ಸದಸ್ಯರು ಮಾತ್ರ ಸಂಪಾದಿಸುವವರಾಗಿದ್ದಾರೆ. ಸ್ವ ಸ್ಥಳದಲ್ಲಿ ಜೀವನೋಪಾಯಕ್ಕಾಗಿ ಯಾವುದೇ ಆಧಾರವಿಲ್ಲದ್ದರಿಂದ ಕುಟುಂಬ ಸಮೇತ ವಲಸೆ ಬಂದಿದ್ದಾರೆ. ಇವರ ಕುಟುಂಬದ ಒಬ್ಬ ಬಾಲಕಿ 6ನೆಯ ತರಗತಿಯವರೆಗಿನ ವಿದ್ಯಾಭ್ಯಾಸ ಮಾಡುತ್ತಿದ್ದಳು. ಅವಳನ್ನು ಶಾಲೆ ಬಿಡಿಸಿ ಗೋವೆಗೆ ಕರೆದುಕೊಂಡು ಬಂದಿದ್ದಾರೆ. ಗೋವೆಯಲ್ಲಿ ಶಿಕ್ಷಣ ಮುಂದುವರಿಸಲು ಇವರಿಗೆ ಸಾಧ್ಯವಾಗುತ್ತಿಲ್ಲ. ಆದರೆ, ವಲಸೆ ಹೋದ ಪ್ರದೇಶದ ವಾಸ್ಕೊ, ಫಣಜಿ, ಜುವಾರಿನಗರಗಳಲ್ಲಿ ಕನ್ನಡ ಪ್ರಾಥಮಿಕ ಶಾಲೆಗಳಿದ್ದು, ನಗರಗಳಲ್ಲಿ ವಾಸವಾಗಿರುವ ಕೆಲವು ಕೂಲಿಕಾರರ ಮಕ್ಕಳು ಶಿಕ್ಷಣ ಪಡೆಯುತ್ತಿದ್ದಾರೆ. ಆದರೆ ನರಸಲಗಿ ತಾಂಡಾದ ವಿದ್ಯಾರ್ಥಿಗಳು ಈ ಶಾಲೆಗಳಲ್ಲಿ ಕಂಡುಬಂದಿಲ್ಲ. ಕಾರಣ ಲಂಬಾಣಿಗರು ಕೆಲಸದ ಅವಕಾಶಗಳಿರುವ ಕಡೆಗೆ ತಮ್ಮ ವಸತಿಗಳನ್ನು ಮೇಲಿಂದ ಮೇಲೆ ಸ್ಥಳಾಂತರಿಸುವುದರಿಂದ ಇವರ ಮಕ್ಕಳಿಗೆ ಶಿಕ್ಷಣ ಕೊಡಿಸಲು ಸಾಧ್ಯವಾಗುತ್ತಿಲ್ಲ.

**ಆರೋಗ್ಯ ಸಮಸ್ಯೆ (Health Problems):**

ವಲಸೆಯಿಂದ ಆರೋಗ್ಯದ ಮೇಲೆ ಪರಿಣಾಮ ಉಂಟಾಗುತ್ತದೆ. ವಲಸೆ ಹೋದ ಲಂಬಾಣಿ ಕುಟುಂಬಗಳ ವೃದ್ಧ ತಂದೆ-ತಾಯಿಗಳ ಕಾಳಜಿ ಕಡಿಮೆಯಾಗುತ್ತಿದೆ. ಅವರು ಅನಾರೋಗ್ಯಗಳಿಂದ ಬಳಲುತ್ತಿದ್ದು ಅವರ ಸ್ಥಿತಿ ಚಿಂತಾಜನಕವಾಗಿದೆ. ಇವರ ಆರೋಗ್ಯ ಆರೈಕೆಗಾಗಿ ಕುಟುಂಬದಲ್ಲಿ ಸದಸ್ಯರಿಲ್ಲದಿರುವುದರಿಂದ ತೊಂದರೆಯಲ್ಲಿ ಜೀವನ ಸಾಗಿಸುತ್ತಿದ್ದಾರೆ. ತಾಂಡಾದಲ್ಲಿ ಆಸ್ಪತ್ರೆ ಇಲ್ಲದ್ದರಿಂದ ಇವರು ಮತ್ತಷ್ಟು ತೊಂದರೆಯ ಜೀವನವನ್ನು ಕಳೆಯುತ್ತಿದ್ದಾರೆ. ಗೋವೆಗೆ ವಲಸೆ ಹೋಗಿರುವ ನರಸಲಗಿ ತಾಂಡಾದ ಪ್ರತಿಶತ 38.33ರಷ್ಟು ಕುಟುಂಬಗಳ ಲಂಬಾಣಿಗರು ಆರೋಗ್ಯದ ಸಮಸ್ಯೆ ಎದುರಿಸುತ್ತಿದ್ದಾರೆ. ಅದನ್ನು ಈ ಮುಂದಿನ ಕೋಷ್ಟಕದ ಸಹಾಯದಿಂದ ಕಂಡುಕೊಳ್ಳಬಹುದು.

ಕೋಷ್ಟಕ 32, ವಲಸಿಗರು ಮಾಡುತ್ತಿರುವ ಉದ್ಯೋಗಗಳಿಂದ ಅವರ ಆರೋಗ್ಯದ ಮೇಲೆ ಆಗುತ್ತಿರುವ ಪರಿಣಾಮಗಳ ಆಧಾರಿತ ಸಂಖ್ಯೆ ಮತ್ತು ಶೇಕಡವಾರು ಹಂಚಿಕೆ. **(Number and percentage distribution of migrants suffering from health by type of work and sex)**

| ಆರೋಗ್ಯ ಸಮಸ್ಯೆ | | | | | | | | |
|---|---|---|---|---|---|---|---|---|
| ಉದ್ಯೋಗಗಳು | ವಿಪರೀತ ಶಕೆಯಿಂದ ಬಳಲುತ್ತಿರುವವರು | ಪ್ರತಿಶತ | ಚರ್ಮರೋಗಗಳಿಂದ ಬಳಲುತ್ತಿರುವವರು | ಪ್ರತಿಶತ | ಮೈಕೈ ನೋವಿನಿಂದ ಬಳಲುತ್ತಿರುವವರು | ಪ್ರತಿಶತ | ಒಟ್ಟು | ಪ್ರತಿಶತ |
| ಕೂಲಿ | 5 | 55.56 | 9 | 69.23 | 0 | - | 14 | 60.87 |
| ಮೀನು ಹಿಡಿಯುವುದು | 0 | 0.00 | 2 | 15.38 | 1 | 100 | 3 | 13.04 |
| ಬೋಟ್ ಚಾಲಕ | 1 | 11.11 | 0 | 0.00 | 0 | 0.00 | 1 | 4.35 |
| ಹೋಟೆಲಿನಲ್ಲಿ ವೇಟರ್ | 1 | 11.11 | 0 | 0.00 | 0 | 0.00 | 1 | 4.35 |
| ಬೇಕರಿಯಲ್ಲಿ ಸಹಾಯಕ | 2 | 22.22 | 2 | 15.38 | 0 | 0.00 | 4 | 17.39 |
| ಒಟ್ಟು | **9** | **100.00** | **13** | **100.00** | **1** | **100.00** | **23** | **100.00** |

ಮೇಲಿನ ಕೋಷ್ಟಕದ ಪ್ರಕಾರ ಪ್ರತಿಶತ 60.87ರಷ್ಟು ಕೂಲಿಕಾರರು ವಿಪರೀತ ಶಕೆ, ಹಾಗೂ ಚರ್ಮದ ಗುಳ್ಳೆಗಳಿಂದ ಬಳಲುತ್ತಿದ್ದಾರೆ. ಪ್ರತಿಶತ 13.04ರಷ್ಟು ಮೀನುಹಿಡಿಯುವ ಕೂಲಿಕಾರರು ಚರ್ಮರೋಗ ಹಾಗೂ ಮೈ,ಕೈ ನೋವಿನಿಂದ ಬಳಲುತ್ತಿದ್ದಾರೆ. ಪ್ರತಿಶತ 4.35ರಷ್ಟು ಬೋಟ್‌ಚಾಲಕರು ವಿಪರೀತ ಶಕೆಯಿಂದ ಬಳಲುತ್ತಿದ್ದಾರೆ. ಪ್ರತಿಶತ 4.35ರಷ್ಟು ಹೋಟೇಲುಗಳಲ್ಲಿ ಸಹಾಯಕರಾಗಿ ಕೆಲಸ ಮಾಡುವವರು ವಿಪರೀತ ಶಕೆಯಿಂದ ಬಳಲುತ್ತಿದ್ದಾರೆ. ಹಾಗೂ ಪ್ರತಿಶತ 17.39ರಷ್ಟು ಬ್ರೆಡ್ ಬೇಕರಿಗಳಲ್ಲಿ ಸಹಾಯಕರಾಗಿ ಕೆಲಸ ಮಾಡುವವರು ವಿಪರೀತ ಶಕೆ ಹಾಗೂ ಚರ್ಮದ ಸಮಸ್ಯೆಗಳಿಂದ ಬಳಲುತ್ತಿದ್ದಾರೆ. ಹೆಚ್ಚಿನ ಸಂಖ್ಯೆಯ ಲಂಬಾಣಿ ಕೂಲಿಕಾರರು ವಿಪರೀತ ಶಕೆ ಹಾಗೂ ಚರ್ಮರೋಗಗಳಿಂದ ಬಳಲುತ್ತಿದ್ದಾರೆ. ಉದಾಹರಣೆಗೆ ಸಂಗತಿ ಸಂಖ್ಯೆ 1ರ ಕುಟುಂಬದ ತಾರಾಸಿಂಗ, ವಯಸ್ಸು 24, ಐದನೆಯ ತರಗತಿಯವರಿಗೆ ಶಿಕ್ಷಣ ಪಡೆದಿದ್ದು, 2002ರಿಂದ ಗೋವೆಗೆ ಸತತವಾಗಿ ವಲಸೆ ಬಂದು, ಸಮುದ್ರದಲ್ಲಿ ಮೀನಿನಬಲೆ ಎಳೆಯುವ ಕೆಲಸದಲ್ಲಿ ತೊಡಗಿದ್ದಾನೆ. ಈತನು ತಿಂಗಳಿಗೆ 3,500 ರೂಪಾಯಿ ಸಂಬಳ ಪಡೆಯುತ್ತಿದ್ದಾನೆ. ಈತನು ಚರ್ಮರೋಗಗಳಿಂದ, ಹಾಗೂ ವಿಪರೀತ ಶಕೆಯಿಂದ ಬಳಲುತ್ತಿದ್ದು, ಚರ್ಮದ ಮೇಲೆ ಗಾಯಗಳಾಗಿವೆ. ಇದೆ ಪ್ರಕಾರವಾಗಿ. ಹೆಚ್ಚಿನ ಸಂಖ್ಯೆಯ ಯುವಕರು ಮಾದಕ ವಸ್ತುಗಳನ್ನು ಸೇವಿಸುತ್ತಿದ್ದು ಇದರಿಂದ ಅವರ ಆರೋಗ್ಯದ ಮೇಲೆ ಪರಿಣಾಮ ಉಂಟಾಗುತ್ತಿದೆ. ಲಂಬಾಣಿಗರು ಕಠಿಣವಾದ ಕೆಲಸಗಳಲ್ಲಿ ತೊಡಗಿದ್ದಾರೆ, ಮದ್ದಿನಿಂದ ಬಂಡೆಕಲ್ಲುಗಳನ್ನು ಸಿಡಿಸುವಾಗ ಕಲ್ಲು ಸಿಡಿದು ಒಬ್ಬ ಮಹಿಳೆಯ ಕಾಲಿಗೆ ಬಡಿದು

ಅಂಗವಿಕಲಳಾಗಿದ್ದಾಳೆ. ಉದಾಹರಣೆಗೆ: ಸಂಗತಿ; ಸಂಖ್ಯೆ 22ರ ಕುಟುಂಬದ ಶಂಕರ ಪವಾರ, ವಯಸ್ಸು 30, ಅನಕ್ಷರಸ್ಥ, 2004ನೇ ಸಾಲಿನಿಂದ ಕೂಲಿ ಕೆಲಸಕ್ಕಾಗಿ ಕುಟುಂಬ ಸಮೇತ ವಲಸೆ ಬಂದು ಗೋವೆಯ ಬಾಣಸ್ತರಿ ಗ್ರಾಮದ ಹತ್ತಿರದ ಪ್ರದೇಶದಲ್ಲಿ ವಾಸವಾಗಿದ್ದಾನೆ. ಬೆಟ್ಟದಲ್ಲಿ ಬಂಡೆಕಲ್ಲುಗಳನ್ನು ಒಡೆಯುವಾಗ ಸಿಡಿಮದ್ದು ಸಿಡಿದು ಕಲ್ಲು ಬಡೆದು ಇವನ ಪತ್ನಿಯ ಕಾಲು ಮುರಿದಿದೆ. ಇದರಿಂದ ಅಂಗವಿಲಕಳಾದ ಇವನ ಪತ್ನಿಗೆ ಕೆಲಸ ಮಾಡಲು ಸಾಧ್ಯವಾಗುತ್ತಿಲ್ಲ. ಇದರಿಂದ ಕೂಲಿ ಕೆಲಸ ಅವಲಂಬಿಸಿದ ಈ ಕುಟುಂಬ ಆರ್ಥಿಕ ಸಮಸ್ಯೆಯನ್ನು ಎದುರಿಸುತ್ತಿದೆ. ಲಂಬಾಣಿಗರು ಗೋವೆಯಿಂದ ತಿರುಗಿ ಬರುವಾಗ ತಮ್ಮ ಜೊತೆ ಕಾಯಿಲೆಗಳನ್ನು ತರುತ್ತಾರೆ. ಸ್ವಚ್ಛ, ಆರೋಗ್ಯಯುತ ಜೀವನ ಸಾಗಿಸುತ್ತಿದ್ದ ಲಂಬಾಣಿ ತಾಂಡಾಗಳಲ್ಲಿ ಇಂದು ಏಡ್ಸ್‌ನಂತಹ ಕಾಯಿಲೆಗಳು ಕಾಣಿಸಿಕೊಳ್ಳುತ್ತಿವೆ. ನಮ್ಮ ಅಧ್ಯಯನದ ನಮೂನೆ ಕುಟುಂಬಗಳಲ್ಲಿ ಎರಡು ಕುಟುಂಬಗಳು ಗೋವೆಯಿಂದ ಮರಳಿ ಬಂದು ಇಬ್ಬರು ಮಹಿಳೆಯರು ಏಡ್ಸ್ ಕಾಯಿಲೆಯಿಂದ ಮೃತಪಟ್ಟಿದ್ದಾರೆ. ಉದಾಹರಣೆಗೆ: ಸಂಗತಿ; ಸಂಖ್ಯೆ 33ರ ಕುಟುಂಬದ ಶಾಂತಾಬಾಯಿ, ವಯಸ್ಸು 46, ಅನಕ್ಷರಸ್ಥೆ ವಿಧವೆ, 1980ರಲ್ಲಿ ಗೋವೆಗೆ ವಲಸೆ ಬಂದು ವಾಸ್ಕೊನಗರದ ನಿವಾಡಂ-ಮನೆಸಂಖ್ಯೆ 85 ರಲ್ಲಿ ವಾಸವಾಗಿ ಶ್ರೀಮಂತರ ಮನೆಯಲ್ಲಿ ಮನೆಕೆಲಸ ಮಾಡುತ್ತಿದ್ದಳು. ತಿಂಗಳಿಗೆ 5000 ರೂಪಾಯಿ ಸಂಬಳ ಪಡೆಯುತ್ತಿದ್ದಳು. ಇತ್ತೀಚೆಗೆ ಇವಳು ಜುಲೈ-2006ರಲ್ಲಿ ಏಡ್ಸ್ ಕಾಯಿಲೆಯಿಂದ ಬಳಲಿ ಸಾವನ್ನಪ್ಪಿದ್ದಾಳೆ.

**ಸಾಂಪ್ರದಾಯಿಕ ವೇಷಭೂಷಣಗಳಲ್ಲಿ ಆಗುತ್ತಿರುವ ಬದಲಾವಣೆಗಳು:**

ಲಂಬಾಣಿಗರ ವೇಷಭೂಷಣಗಳು ವಿಶಿಷ್ಟವಾಗಿವೆ. ಇವು ಜಿಪ್ಸಿಗಳ ವೇಷಭೂಷಣವನ್ನು ಹೋಲುತ್ತವೆ. ಇದರಲ್ಲಿ ಕಲೆಯು ಅಡಗಿದೆ. ಆದ್ದರಿಂದ ಇಂದು ದೇಶ-ವಿದೇಶಗಳ ಜನರು ಇವುಗಳನ್ನು ಮೆಚ್ಚಿಕೊಂಡು ಕೊಳ್ಳುತ್ತಿದ್ದಾರೆ. ರಂಗು-ರಂಗಿನ ಉಡುಪುಗಳ ಆಧಾರದ ಮೇಲೆ ಲಂಬಾಣಿ ಜನಾಂಗವನ್ನು ಗುರುತಿಸಲಾಗುತ್ತದೆ. ಲಂಬಾಣಿಗರು ಪ್ರಾಚೀನ ಕಾಲದಲ್ಲಿ ವ್ಯಾಪಾರಕ್ಕಾಗಿ ಬೆಟ್ಟ-ಗುಡ್ಡಗಳನ್ನು ಹಾಯ್ದು ಸಂಚರಿಸಬೇಕಾಗಿದ್ದರಿಂದ ಒರಟಾದ ಉಡುಪುಗಳನ್ನು ಧರಿಸುತ್ತಿದ್ದರು. ಇವು ಕಾಡುಪ್ರಾಣಿಗಳಿಂದ ರಕ್ಷಿಸಿಕೊಳ್ಳಲು ಸಹಾಯವಾಗುತ್ತಿದ್ದುವು. ಆದರೆ ಬದಲಾಗುತ್ತಿರುವ, ಶೋಭಾಚಾರಕ್ಕೆ ಹೆಚ್ಚಿನ ಪ್ರಾಸಸ್ತ್ಯವಿರುವ ಆಧುನಿಕ ಸಮಾಜದಲ್ಲಿ ಸಾಂಪ್ರದಾಯಿಕ ಉಡುಗೆ-ತೊಡುಗೆಗಳ ಅವಶ್ಯಕತೆ ಇಲ್ಲದ್ದರಿಂದ ಹಾಗೂ ಇವುಗಳನ್ನು ತಯಾರಿಸಲು ಹೆಚ್ಚು ಸಮಯ ವ್ಯಯವಾಗುವುದರಿಂದ ಆಧುನಿಕ ಸಮಾಜಕ್ಕೆ ಹೊಂದಿಕೊಳ್ಳಲು ಲಂಬಾಣಿಗರು ಇತರ ಜನಾಂಗಗಳು ಧರಿಸುವ ಮಾದರಿಯಲ್ಲಿ ಉಡುಪುಗಳನ್ನು ಧರಿಸುತ್ತಿದ್ದಾರೆ. ಆದರೆ ಲಂಬಾಣಿ ಸಮುದಾಯದ ಹಿರಿಯರು ಈ ಬದಲಾವಣೆಯನ್ನು ವಿರೋಧಿಸುತ್ತಿದ್ದಾರೆ.

ಗೋವೆಗೆ ವಲಸೆ ಹೋಗಲು ಪ್ರಾರಂಭಿಸಿದ ನಂತರದ ಅವಧಿಯಲ್ಲಿ ನರಸಲಗಿ ತಾಂಡಾದ ಸ್ತ್ರೀ-ಪುರುಷರು ತಮ್ಮ ಸಾಂಪ್ರದಾಯಿಕ ವೇಷ-ಭೂಷಣಗಳಲ್ಲಿ ಬದಲಾವಣೆ ಮಾಡಿಕೊಳ್ಳುತ್ತಿದ್ದಾರೆ. ನನ್ನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಲಂಬಾಣಿಗರಿಗೆ ನಿಮ್ಮ ಸಾಂಪ್ರದಾಯಿಕ ಉಡುಗೆ ತೊಡುಗೆಗಳನ್ನು ಮುಂದುವರಿಸುವಿರಾ? ಎಂದು ಕೇಳಿದ ಪ್ರಶ್ನೆಗೆ ಕೇವಲ ಪ್ರತಿಶತ 18.33ರಷ್ಟು ಮಾಹಿತಿದಾರರು ಹೌದು ಎಂದು, ಪ್ರತಿಶತ 81.67ರಷ್ಟು ಮಾಹಿತಿದಾರರು ಇಲ್ಲಾ ಎಂದು ಪ್ರತಿಕ್ರಿಯೆ ನೀಡಿದ್ದಾರೆ. ಪ್ರತಿಶತ

18.33ರಷ್ಟು ಮಾಹಿತಿದಾರರು ತಮ್ಮ ಸಂಸ್ಕೃತಿ ಮುಂದುವರಿಸುವ ಉದ್ದೇಶದಿಂದ ಸಾಂಪ್ರದಾಯಿಕ ವೇಷಭೂಷಣಗಳನ್ನು ಮುಂದುವರಿಸುತ್ತಿದ್ದಾರೆ. ಉಳಿದವರು ಸಾಂಪ್ರದಾಯಿಕ ಉಡುಗೆ-ತೊಡುಗುಗಳನ್ನು ಮುಂದುವರಿಸದಿರಲು ಕಾರಣಗಳನ್ನು ಕೆಳಗಿನ ಕೋಷ್ಟಕದಿಂದ ತಿಳಿಯಬಹುದು.

**ಕೋಷ್ಟಕ 33, ವಲಸಿಗರು ಸಾಂಪ್ರದಾಯಿಕ ಉಡುಗೆ-ತೊಡುಗೆಗಳನ್ನು ಧರಿಸದಿರಲು ಕಾರಣವಾದ ಅಂಶಗಳ ಆಧಾರಿತ ಸಂಖ್ಯೆ ಮತ್ತು ಶೇಕಡವಾರು ಹಂಚಿಕೆ. (Number & percentage of migrants not wearing traditional Lambani dress by reason)**

| ಕಾರಣಗಳು | ಸಂಖ್ಯೆ | ಪ್ರತಿಶತ |
|---|---|---|
| ಗೌರವ ಸಿಗುವುದಿಲ್ಲವಾದ್ದರಿಂದ | 27 | 55.10 |
| ಉದ್ಯೋಗಕ್ಕೆ ಹಚ್ಚುವುದಿಲ್ಲವಾದ್ದರಿಂದ | 11 | 22.45 |
| ಗೋವೆಯ ಜನರೊಂದಿಗೆ ಹೊಂದಿಕೊಳ್ಳಲು | 11 | 22.45 |
| **ಒಟ್ಟು** | **49** | **100.00** |

ಮೇಲಿನ ಕೋಷ್ಟಕದ ಪ್ರಕಾರ ಪ್ರತಿಶತ 55.10ರಷ್ಟು ಮಾಹಿತಿದಾರರಿಗೆ ಸಾಮಾಜಿಕ ಗೌರವ ಸಿಗುತ್ತಿಲ್ಲವಾದ್ದರಿಂದ, ಪ್ರತಿಸತ 22.45ರಷ್ಟು ಮಾಹಿತಿದಾರರಿಗೆ ಉದ್ಯೋಗ ಪಡೆಯಲು ತೊಂದರೆಯಾಗುತ್ತಿರುವುದರಿಂದ, ಪ್ರತಿಶತ 22.45ರಷ್ಟು ಮಾಹಿತಿದಾರರು ಗೋವೆಯ ಜನರ ಜೊತೆ ಹೊಂದಿಕೊಳ್ಳಲು ತಮ್ಮ ಸಾಂಪ್ರದಾಯಿಕ ವೇಷಭೂಷಣಗಳನ್ನು ಬದಲಾವಣೆ ಮಾಡಿಕೊಂಡಿದ್ದಾರೆ. ಲಂಬಾಣಿ ಸ್ತ್ರೀಯರು ತಮ್ಮ ಸಾಂಪ್ರದಾಯಿಕ ವೇಷಭೂಷಣಗಳ ಬದಲಾಗಿ ಇತರ ಜನಾಂಗದವರು ಧರಿಸುವ ಸೀರೆ, ಚೂಡಿದಾರ ಧರಿಸುತ್ತಿದ್ದಾರೆ. ಪುರುಷರು ಧೋತಿ, ಅಂಗಿ, ಪೇಟಾ, ಟೊಪ್ಪಿಗೆಯ ಬದಲಾಗಿ ಪ್ಯಾಂಟು, ಶರ್ಟು, ಟಿಶರ್ಟು, ಉತ್ತಮದರ್ಜೆಯ ಪಾದರಕ್ಷೆಗಳನ್ನು ಧರಿಸುತ್ತಿದ್ದಾರೆ.

**ಧಾರ್ಮಿಕ ಹಾಗೂ ಸಾಂಸ್ಕೃತಿಕ ಪದ್ಧತಿಗಳಲ್ಲಿ ಆದ ಬದಲಾವಣೆಗಳು:**

ಲಂಬಾಣಿಗರು ತಮ್ಮದೇ ಆದ ಸಂಸ್ಕೃತಿ, ಪರಂಪರೆಗಳನ್ನು ಹೊಂದಿದ್ದು ಅವುಗಳನ್ನು ಮುಂದುವರಿಸಿಕೊಂಡು ಹೋಗುತ್ತಿದ್ದಾರೆ. ದೇವರು, ಧರ್ಮದ ವಿಷಯದಲ್ಲಿ ಅಷ್ಟೊಂದು ಬದಲಾವಣೆ ಮಾಡಿಕೊಂಡಿಲ್ಲ ಮೊದಲಿನ ಹಾಗೆ ತಮ್ಮ ಕುಲದೇವತೆಗಳಾದ ತುಳಜಾದೇವಿ, ಅಂಬಾಭವಾನಿ, ದುರ್ಗಾದೇವಿ ಹಾಗೂ ಸಂತ ಸೇವಾಲಾಲರನ್ನು ಭಯ-ಭಕ್ತಿಯಿಂದ ಆರಾಧಿಸುತ್ತಾರೆ. ದಸರಾ ಹಬ್ಬದ ಸಂದರ್ಭದಲ್ಲಿ ಪ್ರಾಣಿ ಬಲಿಕೊಟ್ಟು ದೇವತೆಗಳನ್ನು ಆರಾಧಿಸುವುದು ಇಂದಿಗೂ ಮುಂದುವರಿದಿದೆ. ಮೊದಲು ಲಂಬಾಣಿಗರಲ್ಲಿ ಕೆಲವು ಅರ್ಥಹೀನವಾದ ಮೂಢನಂಬಿಕೆ, ಮಾಟ-ಮಂತ್ರಗಳಲ್ಲಿ ನಂಬಿಕೆಯಿರಿಸಿದ್ದರು. ತಾಂಡಾದಲ್ಲಿ ಗೂಗೆ ಕೂಗಿದರೆ ಕೆಡಕುಗಳು ಸಂಭವಿಸುತ್ತವೆಂದು ಪ್ರಾಣಿ ಬಲಿಕೊಟ್ಟು ಸಾಮೂಹಿಕವಾಗಿ ಪೂಜಿಸುತ್ತಿದ್ದರು. ರೋಗರುಜಿನಗಳು ಬಂದರೆ ಕುಲದೇವತೆಯನ್ನು ಸಂತ ಸೇವಲಾಲರನ್ನು ಆರಾಧಿಸುತ್ತಿದ್ದರು. ಆದರೆ ಇಂತಹ

ಮೂಢನಂಬಿಕೆಗಳನ್ನು ಇಂದು ತ್ಯಜಿಸುತ್ತಿದ್ದಾರೆ. ಮುಸ್ಲಿಂ ದರ್ಗಾಗಳಿಗೆ, ಪೀರರಿಗೆ, ಚರ್ಚುಗಳಿಗೆ ಹೋಗಿ ಏಸುಕ್ರಿಸ್ತರನ್ನು ಆರಾಧಿಸುತ್ತಿರುವುದು ಇತ್ತೀಚಿನ ಬದಲಾವಣೆಯಾಗಿದೆ.

ಲಂಬಾಣಿಗರ ಶವಸಂಸ್ಕಾರ ಪದ್ಧತಿಯಲ್ಲಿಯೂ ಸ್ವಲ್ಪ ಬದಲಾವಣೆ ಕಂಡುಬರುತ್ತದೆ. ಮೊದಲು ಮೃತರಿಗೆ ಅಡ್ಡಲಾಗಿ ಮಲಗಿಸಿ ತಲೆಯ ಹಿಂದಿನ ಭಾಗದಲ್ಲಿ ಹಣತೆ ಹಚ್ಚಿಡುತ್ತಿದ್ದರು. ಆದರೆ ಇಂದು ಲಂಬಾಣೇತರರ ಹಾಗೆ ಮೃತರಿಗೆ ಗೋಡೆಗೆ ಹಚ್ಚಿ ಕೂಡಿಸುವುದು, ಹೆಣವನ್ನು ಶೃಂಗರಿಸುವುದು, ಮೆರವಣಿಗೆ ಮಾಡುತ್ತಾ ಪಟಾಕಿಗಳನ್ನು ಹಾರಿಸುತ್ತಾ ಸ್ಮಶಾನಕ್ಕೆ ಸಾಗಿಸುವುದು ಕಂಡುಬರುತ್ತದೆ. ಮೊದಲು ಹೆಣ್ಣು ಮಕ್ಕಳು ಸ್ಮಶಾನಕ್ಕೆ ಹೋಗಲು ನಿರ್ಭಂಧವಿತ್ತು ಆದರೆ ಇಂದು ಯಾವುದೇ ನಿರ್ಭಂಧನೆ ಇಲ್ಲದೆ ಸ್ಮಶಾನಕ್ಕೆ ಹೊಗುತ್ತಿದ್ದಾರೆ. ಎರಡನೆಯ ದಿನದಲ್ಲಿ ಮಾಡುವ ಮೃತರ ಸಂಸ್ಕಾರಗಳಲ್ಲಿಯೂ ಬದಲಾವಣೆಯಾಗಿದೆ. ಮೊದಲು ತಾಂಡಾದ ನಾಯಕರ ಮುಖಂಡತ್ವದಲ್ಲಿ ಎಲ್ಲಾ ಜನರು ಸೇರಿ ಸ್ಮಶಾನಕ್ಕೆ ಸಮೀಪವಿರುವ ಜಾಗದಲ್ಲಿ ಗೋದಿ ಮಾದ್ಲಿಯ ಉಂಡೆಗಳನ್ನು ತಯಾರಿಸಿ, ಮೊದಲು ದುಃಖದಲ್ಲಿರುವ ಮೃತನ ಸಂಬಂಧಿಕರು ಉಂಡೆ ತಿಂದ ಮೇಲೆ, ಸಾಮೂಹಿಕವಾಗಿ ತಾಂಡಾದ ಜನರು ತಿಂದು ಬರುವ ಪದ್ಧತಿ ರೂಢಿಯಲ್ಲಿತ್ತು. ಆದರೆ ಇಂದು ಬದಲಾವಣೆ ಮಾಡಿಕೊಂಡಿದ್ದು, ಮಾದ್ಲಿಯ ಬದಲಾಗಿ ಅಂಗಡಿಗಳಲ್ಲಿ ತಯಾರಿಸಿದ ಬೂಂದಿ ಉಂಡೆಗಳನ್ನು ಖರೀದಿಸಿ ಸತ್ತವರ ಮನೆಯ ಮುಂದೆ ದಿನಕರ್ಮ ಕಾರ್ಯ ಮಾಡುವ ಪದ್ಧತಿ ಬೆಳೆದಿದೆ. ಆದರೆ ಸತ್ತವರು ಭೂತ ಪಿಶಾಚಿಗಳಾಗುತ್ತಾರೆಂದು, ಅವು ಇತರರಿಗೆ ತಗುಲುತ್ತವೆಂದೂ ಇಂದಿಗೂ ನಂಬುತ್ತಾರೆ. ಭೂತ-ಪಿಶಾಚಿ ತಗುಲಿದವರು ಮರಣ ಹೊಂದಿದ ವ್ಯಕ್ತಿಯ ಹಾಗೆ ನಟಿಸುತ್ತಾರೆ. ಇಂಥವರನ್ನು ಮಾತ್ರಿಕನ ಹತ್ತಿರ, ಮುಸ್ಲಿಂ, ಮಸೀದಿಗಳಿಗೆ ಕರೆದೊಯ್ದು ಭೂತ ಬಿಡಿಸುವ ಕ್ರಮ ಇಂದಿಗೂ ರೂಢಿಯಲ್ಲಿದೆ. ಭೂತಪಿಶಾಚಿಗಳು ಜನರಿಗೆ ತಗುಲಬಾರೆಂದು ಝೂಂಡಿ (ಕೆಂಪು ಬಟ್ಟೆಯಿಂದ ತಯಾರಿಸಿದ ತಾಯತ) ಧರಿಸುತ್ತಿದ್ದರು. ಆದರೆ ಇಂದು ಧರಿಸುತ್ತಿಲ್ಲ.

**ಲಂಬಾಣಿ ಜಾತಿ-ಪಂಚಾಯಿತಿಯಲ್ಲಿ ಆದ ಬದಲಾವಣೆಗಳು:**

ಇತರ ಸಮುದಾಯದ ಜನರಂತೆ ಲಂಬಾಣಿಗರೂ ತಮ್ಮ ತಾಂಡಾಗಳಲ್ಲಿ ಜಾತಿಪಂಚಾಯಿತಿ ಹೊಂದಿದ್ದಾರೆ. ಪಂಚಾಯಿತಿಗೆ ಇಬ್ಬರು ಸಾಂಪ್ರದಾಯಿಕ ನಾಯಕರು ಮುಖ್ಯಸ್ಥರಾಗಿರುತ್ತಾರೆ. ಪಂಚಾಯತ್ ಸಂಘಟನೆ ಸಧೃಡವಾಗಿರುತ್ತಿದ್ದವು. ತಾಂಡಾದ ಸಾಮಾಜಿಕ ಜೀವನದಲ್ಲಿ ನಾಯಕರ (ನಾಯಕ ಹಾಗೂ ಕಾರಭಾರಿ) ಪಾತ್ರ ಬಹಳ ಶ್ರೇಷ್ಠವಾಗಿದ್ದವು ಇವರು ಪ್ರಶ್ನಾತೀತವಾದ ಅಧಿಕಾರವನ್ನು ಹೊಂದಿರುತ್ತಿದ್ದರು. ತಾಂಡಾಗಳಲ್ಲಿ ನಡೆಯುವ ಒಳಜಗಳಗಳು, ಕಳ್ಳತನ, ಅತ್ಯಾಚಾರ, ಕೊಲೆ ಹೀಗೆ ಯಾವುದೇ ಕೃತ್ಯ ನಡೆದರೂ ವ್ಯಾಜ್ಯಗಳು ತಾಂಡದಲ್ಲಿಯೆ ಇತ್ಯರ್ಥವಾಗುತ್ತಿದ್ದುವು. ಆದರೆ ಇತ್ತೀಚೆಗೆ ನಗರ ಪ್ರದೇಶಗಳ ಪ್ರಭಾವದಿಂದ ಸಾಂಪ್ರದಾಯಿಕ ನಾಯಕರು ತಮ್ಮ ಸ್ಥಾನ-ಮಾನವನ್ನು ಕಳೆದುಕೊಳ್ಳುತ್ತಿದ್ದಾರೆ. ಇಂದು ಸಣ್ಣಪುಟ್ಟ ಸಮಸ್ಯೆಗಳಿಗೂ ತಾಂಡಾದ ಜನರು ಪೊಲೀಸ್, ಕೋರ್ಟ್, ಕಛೇರಿಗಳಿಗೆ ಹೋಗುತ್ತಿದ್ದಾರೆ. ಆದರೆ ಧಾರ್ಮಿಕ ವಿಷಯಕ್ಕೆ ಸಂಬಂಧಿಸಿದಂತೆ ತಾಂಡಾಗಳಲ್ಲಿ ನಡೆಯುವ ಸಸಿಹಬ್ಬದ ಆಚರಣೆ, ಸೀತಲಾದೇವಿಯ ಪೂಜೆ, ಹೋಳಿಹಬ್ಬದ ಆಚರಣೆಗಳು, ದೀಪಾವಳಿ ಆಚರಣೆ ಮುಂತಾದವು ಇಂದಿಗೂ, ತಾಂಡಾದ ನಾಯಕರ ಮುಖಂಡತ್ವದಲ್ಲಿ

ಆಚರಿಸಲ್ಪಡುತ್ತಿವೆ. ಇತ್ತೀಚೆಗೆ ಈ ನಾಯಕರೂ ಕೂಡಾ ದುಡಿಯಲು ಗೋವೆಗೆ ವಲಸೆ ಹೋಗುತ್ತಿದ್ದು ಗೋವೆಯಲ್ಲಿ ಅವರಿಗೆ ತಾಂಡಾದಲ್ಲಿ ದೊರೆಯುವಂತೆ ಸ್ಥಾನಮಾನಗಳು ದೊರೆಯುತ್ತಿಲ್ಲ.

**ಸಾಂಪ್ರದಾಯಿಕ ವಿವಾಹ ಪದ್ಧತಿಗಳಲ್ಲಿ ಆದ ಬದಲಾವಣೆಗಳು:**

ಲಂಬಾಣಿಗರ ವಿವಾಹ ಪದ್ಧತಿಗಳು ಭಿನ್ನ ಸ್ವರೂಪದ್ದವುಗಳಾಗಿವೆ. ಸಾಂಪ್ರದಾಯಿಕ ವಿವಾಹಗಳು ಮೊದಲು 15 ದಿನಗಳಿಂದ ಒಂದು ತಿಂಗಳವರೆಗೆ ನಡೆಯುತ್ತಿದ್ದವು. ಸಾಮಾನ್ಯವಾಗಿ ಹೆಣ್ಣಿನ ಮನೆಯ ಮುಂದೆ ಹೆಚ್ಚಿನ ವಿವಾಹಕಾರ್ಯಗಳು ನಡೆಯುತ್ತಿದ್ದವು. ಮುಸ್ಲಿಂ ಆಡಳಿತದ ಅವಧಿಯಲ್ಲಿ ಕನ್ಯೆಯರನ್ನು ಅಪಹರಿಸುತ್ತಿದ್ದರಿಂದ ವಿವಾಹದ ಆಚರಣೆಗಳು ರಾತ್ರಿ ವೇಳೆಯಲ್ಲಿ ವಾದ್ಯಗಳಿಲ್ಲದೆ ನಡೆಯುತ್ತಿದ್ದವು. ಆದರೆ ಇಂದು ವಿವಾಹದ ಆಚರಣೆಗಳಲ್ಲಿ ಬದಲಾವಣೆಯಾಗಿದ್ದು ಲಂಬಾಣೇತರ ಪದ್ಧತಿಯಲ್ಲಿ ಹಗಲು ಹೊತ್ತಿನಲ್ಲಿ ವಿವಾಹವಾಗುತ್ತಿದ್ದಾರೆ. ಶುಭ ಮೂಹೂರ್ತದಲ್ಲಿ ವಿವಾಹದ ದಿನವನ್ನು ನಿಗದಿಪಡಿಸಿ ಪುರೋಹಿತರನ್ನು ಕರೆಸಿ ಮನೆಯ ಮುಂದೆ ಆಧುನಿಕ ಹಂದರಗಳನ್ನು ನಿರ್ಮಿಸಿ ವಾದ್ಯಗಳೊಂದಿಗೆ ವಿವಾಹದ ಎಲ್ಲಾ ಕಾರ್ಯಗಳನ್ನು ಒಂದೆ ದಿನದಲ್ಲಿ ಮಾಡಿ ಮುಗಿಸುತ್ತಾರೆ. ಮೊದಲು ಲಂಬಾಣಿಗರಲ್ಲಿ ವಧುದಕ್ಷಿಣೆ ಪದ್ಧತಿ (Bride Price) ರೂಢಿಯಲ್ಲಿತ್ತು. ಆದರೆ ಇಂದು ಇದರ ಬದಲಾಗಿ ವರದಕ್ಷಿಣೆ ಪದ್ಧತಿ ಕಂಡುಬರುತ್ತಿದೆ. ಲಂಬಾಣಿಗರು ತಮ್ಮ ಹೆಣ್ಣು ಮಕ್ಕಳನ್ನು ವಿದ್ಯಾವಂತ ಉದ್ಯೋಗಸ್ಥರಿಗೆ ವಿವಾಹ ಮಾಡಿಕೊಡಲು ವರದಕ್ಷಿಣೆ ಕೊಡಬೇಕಾಗುವುದರಿಂದ ತಮ್ಮ ಭೂಮಿ-ಸೀಮೆ ಮಾರಾಟ ಮಾಡಿ ವರದಕ್ಷಿಣೆ ಹಣ ಕೊಡುತ್ತಿದ್ದಾರೆ. ವಿವಾಹದ ಮೊದಲ ದಿನ ಮದುಮಗನಿಗೆ ಹಾಕುತ್ತಿದ್ದ ಬರೆ, 'ದಾಗ್‌ಪದ್ಧತಿ' (ಕಾಯ್ದ ಸೂಚಿಯಿಂದ ತಾಂಡಾದ ನಾಯಕ ಬರೆ ಹಾಕುವ ಪದ್ಧತಿ) ಹೆಣ್ಣಿನ ಕಡೆಯವರು ವಿವಾಹದ ಸಂದರ್ಭದಲ್ಲಿ ಮದುಮಗನಿಗೆ ತಮಾಸೆಗಾಗಿ ಎಳೆದಾಡುವ ಪದ್ಧತಿ, ವಿವಾಹದ ನಂತರ ಮದುಮಗಳು ತಾಂಡಾದ ಪ್ರತಿ ಮನೆಗೆ ತೆರಳಿ ಹಲ್ಲುಜ್ಜಲು ಬೇವಿನಕಡ್ಡಿಗಳನ್ನು ಕೊಟ್ಟು ನಮಸ್ಕರಿಸುವ ಪದ್ಧತಿ, ಮದುಮಗಳನ್ನು ಎತ್ತಿನ ಮೇಲೆ ಕೂಡ್ರಿಸಿ ಗಂಡನ ಮನೆಗೆ ಬೀಳ್ಕೊಡುವ ಪದ್ಧತಿ ಮಾಯವಾಗಿ ಇದರ ಬದಲಾಗಿ ಮದುಮಗಳಿಗೆ ವಾಹನಗಳಲ್ಲಿ ಕಾರಿನಲ್ಲಿ ಬೀಳ್ಕೊಡುವ ಪದ್ಧತಿಗಳನ್ನು ರೂಢಿಸಿಕೊಂಡಿದ್ದಾರೆ.

ಲಂಬಾಣಿಗರಲ್ಲಿ ಪ್ರಚಲಿತವಿದ್ದ ಬಾಲ್ಯವಿವಾಹ ಪದ್ಧತಿ, ಅತ್ತಿಗೆ-ಮೈದುನರ ವಿವಾಹಗಳು ಕಣ್ಮರೆಯಾಗಿವೆ. ಇತರ ಜಾತಿಯ ಜನರ ಪ್ರಭಾವದಿಂದ ಅಂತರ್‌ಜಾತಿ ವಿವಾಹಗಳನ್ನು ಮಾಡಿಕೊಳ್ಳುತ್ತಿದ್ದಾರೆ. ಮೊದಲು ಲಂಬಾಣಿಗರ ಗುಂಪುಗಳು ವ್ಯಾಪಾರ ಮಾಡುತ್ತಾ ಬೇರೆ ಬೇರೆ ಕಡೆಗಳಲ್ಲಿ ಚದುರಿಹೋಗುತ್ತಿದ್ದವು ಆದ್ದರಿಂದ ವಿವಾಹವಾದ ಹೆಣ್ಣು ಮತ್ತೊಮ್ಮೆ ಮರಳಿ ಬರುವುದಿಲ್ಲ ಎಂಬ ಕಾರಣಕ್ಕಾಗಿ ವಿವಾಹದ ಸಂದರ್ಭಗಳಲ್ಲಿ ಅಳುವ ಪದ್ಧತಿ ರೂಢಿಯಲ್ಲಿತ್ತು. ಆದರೆ ಇಂದು ಶಾಸ್ವತ ನಲೆಗೊಂಡಿದ್ದರಿಂದ ಅಳುವ ಪದ್ಧತಿ ಕಡಿಮೆಯಾಗಿದೆ ಮೊದಲು ಹೆರಿಗೆಗಳು ಸಾಮಾನ್ಯವಾಗಿ ಮನೆಯಲ್ಲಿ ನಡೆಯುತ್ತಿದ್ದವು. ಆದರೆ ಇಂದು ಆಸ್ಪತ್ರೆಗಳಲ್ಲಿ ಹೆರಿಗೆ ಮಾಡಿಸುತ್ತಾರೆ. ಹೆರಿಗೆಯ ನಂತರ ಬಾಣಂತಿ ಸ್ತ್ರೀಯರಿಗೆ ಒಂದು ತಿಂಗಳವರೆಗೆ ಪ್ರತ್ಯೇಕವಾದ ಗುಡಿಸಲಿನಲ್ಲಿ ಇರಬೇಕಾಗಿತ್ತು. ಮಣ್ಣಿನ ಪಾತ್ರೆಗಳಲ್ಲಿ ಊಟ ಮಾಡಬೇಕಾಗಿತ್ತು. ಆದರೆ ಇಂದು ಈಪದ್ಧತಿಗಳು ಕಂಡುಬರುವುದಿಲ್ಲ. ಗಂಡುಮಗು ಜನಿಸಿದರೆ ತಾಂಡಾದಲ್ಲಿ ನಗಾರಿ ಬಾರಿಸುವ

ಪದ್ಧತಿ ರೂಢಿಯಲ್ಲಿತ್ತು. ಆದರೆ ಇಂದು ಮಕ್ಕಳು ಆಸ್ಪತ್ರೆಗಳಲ್ಲಿ ಜನಿಸುತ್ತಿರುವುದರಿಂದ ಈ ಪದ್ಧತಿ ನಿಂತು ಹೋಗಿದೆ.

**ಲಂಬಾಣಿಗರ ಭಾಷೆಯಲ್ಲಿ ಆದ ಬದಲಾವಣೆಗಳು:**

ಲಂಬಾಣಿಗರು ರಾಜಸ್ಥಾನಿ ಭಾಷೆಗೆ ಹೋಲುವ ಭಾಷೆಯನ್ನಾಡುತ್ತಿದ್ದು, ಇದಕ್ಕೆ ಲಿಪಿಇಲ್ಲ. ಇದನ್ನು ಬಂಜಾರಿ, ಗೋರ್‌ಬೋಲಿ' ಎಂದು ಕರೆಯುತ್ತಾರೆ. "ಲಂಬಾಣಿ ಜನರಿಗೆ ಅವರ ಭಾಷೆಯ ಬಗ್ಗೆ ತುಂಬಾ ಅಭಿಮಾನ, ಅವರು ಊರೂರು ಸುತ್ತಿದರೂ, ಒಂದೆಡೆ ನೆಲೆನಿಂತರೂ ತಮ್ಮ ಭಾಷೆಯನ್ನು ಮಾತ್ರ ಜೀವಂತವಾಗಿಟ್ಟಿದ್ದಾರೆ."[17] ಇಂದು ಆಧುನಿಕತೆ ಅಳವಡಿಸಿಕೊಂಡ ಹೊಸ ತಲೆಮಾರಿನ ಜನರಲ್ಲಿ ಲಂಬಾಣಿ ಭಾಷೆ ಮಾನ್ಯತೆ ಕಳೆದುಕೊಳ್ಳುತ್ತಿದೆ. ನಗರ ಪ್ರದೇಶಗಳಲ್ಲಿ ನೆಲೆಗೊಂಡಿರುವ ಲಂಬಾಣಿಗರಿಗೆ ಲಂಬಾಣಿ ಭಾಷೆ ಬಂದರೂ ಮಾತನಾಡುವುದಿಲ್ಲ. ಹಾಗೂ ತಮ್ಮ ಮಕ್ಕಳಿಗೆ ಕಲಿಸುತ್ತಿಲ್ಲ. ಗೋವೆಗೆ ವಲಸೆ ಹೋಗಿರುವ ಲಂಬಾಣಿ ಕೂಲಿಕಾರರು ತಾಂಡಾದಲ್ಲಿ ಬಂದಾಗ ಕೊಂಕಣಿ ಭಾಷೆಯಲ್ಲಿ ಮಾತನಾಡುತ್ತಾರೆ. ಗೋವೆಯಲ್ಲಿ ಮಸಾಜ್ ಮಾಡುವ ಹಾಗೂ ವಿದೇಶಿಯರುಗೆ ಲಂಬಾಣಿ ವೇಷಭೂಷಣ ಮಾರಾಟ ಮಾಡುವ ಸ್ತ್ರೀಯರು ಇಂಗ್ಲಿಷ್ ಭಾಷೆಯನ್ನು ಸುಲಲಿತವಾಗಿ ಮಾತನಾಡುತ್ತಿದ್ದಾರೆ.

**ಕೌಟುಂಬಿಕ ಬದಲಾವಣೆ:**

ಮೊದಲಿನಿಂದಲೂ ಲಂಬಾಣಿಗರಲ್ಲಿ ಪಿತೃಪ್ರಧಾನ ಅವಿಭಕ್ತ ಕುಟುಂಬ ಪ್ರಚಲಿತವಿದೆ. ಕುಟುಂಬದ ಎಲ್ಲಾ ಆಗುಹೋಗುಗಳನ್ನು ಕುಟುಂಬದ ಹಿರಿಯ ಪುರುಷ ವ್ಯಕ್ತಿ ನೋಡಿಕೊಂಡು ಹೋಗುತ್ತಾನೆ. ಕುಟುಂಬದ ಘನತೆ-ಗೌರವಗಳನ್ನು ಕಾಪಾಡಲು ಎಲ್ಲಾ ಸದಸ್ಯರು ಕಷ್ಟಪಟ್ಟು ದುಡಿಯುತ್ತಾರೆ. ಕುಟುಂಬದಲ್ಲಿರುವ ಅಂಗವಿಕಲರು, ವೃದ್ಧರು, ವಿಧವೆಯರನ್ನು ಕಡೆಗಣಿಸುವುದಿಲ್ಲ. ಸಾರ್ವಜನಿಕ ವಿಮಾಕಂಪನಿಯಂತೆ ಕುಟುಂಬ ಕಾರ್ಯ ನಿರ್ವಹಿಸುತ್ತದೆ. ಇಂದು ಆಧುನಿಕತೆಯ ಪರಿಣಾಮವಾಗಿ ಕುಟುಂಬದ ಸದಸ್ಯರು ಬೇರೆ ಬೇರೆ ಪ್ರದೇಶಗಳಿಗೆ ಉದ್ಯೋಗಕ್ಕಾಗಿ ವಲಸೆ ಹೋಗುವುದರಿಂದ, ಅವಿಭಕ್ತ ಕುಟುಂಬಗಳು ಒಡೆದು ಚಿಕ್ಕ ಕುಟುಂಬಗಳಾಗಿ ಪರಿವರ್ತನೆಗೊಳ್ಳುತ್ತಿವೆ. ಲಂಬಾಣಿಗರು ಇತ್ತೀಚೆಗೆ ಕುಟುಂಬ ಕಲ್ಯಾಣ ಯೋಜನೆಯ ಪ್ರಯೋಜನ ಪಡೆದು ಕಡಿಮೆ ಮಕ್ಕಳನ್ನು ಪಡೆಯುತ್ತಿರುವುದರಿಂದ ಕುಟುಂಬದ ಗಾತ್ರ ಚಿಕ್ಕದಾಗಿದೆ. ಚಿಕ್ಕ ಕುಟುಂಬಗಳಲ್ಲಿ ಸ್ತ್ರೀಯರಿಗೆ ಪುರುಷನ ಸರಿಸಮಾನವಾದ ಸ್ಥಾನಮಾನ ನೀಡಲಾಗಿದೆ. ನರಸಲಗಿ ತಾಂಡಾದಲ್ಲಿ ಕೆಲವು ಕುಟುಂಬಗಳಲ್ಲಿ ಪುರುಷರು ಮಾತ್ರ ತಮ್ಮ ಹೆಂಡತಿಮಕ್ಕಳನ್ನು ಬಿಟ್ಟು ವಲಸೆ ಹೋಗಿದ್ದಾರೆ. ಸ್ತ್ರೀಯರು ತಮ್ಮ ಮಕ್ಕಳ ಶಿಕ್ಷಣ ಹಾಗೂ ಮನೆಯ ಎಲ್ಲಾ ಜವಾಬ್ದಾರಿಯನ್ನು ನೋಡಿಕೊಂಡು ಹೋಗುತ್ತಿದ್ದಾರೆ. ಇಂದು ಲಂಬಾಣಿ ಸ್ತ್ರೀಯರು ಲಂಬಾಣೇತರ ಸಮುದಾಯದ ಸ್ತ್ರೀಯರಿಗಿಂತ ಹೆಚ್ಚಿನ ಸ್ವಾತಂತ್ರ್ಯ ಆನಂದಿಸುತ್ತಿದ್ದಾರೆ.

---

17. ಡಾ.ಪಿ.ಕೆ.ಖಂಡೋಬಾ: 'ಊರುಸುತ್ತಿದರೂ ಭಾಷೆ ಜೀವಂತ' ವಿಜಯ ಕರ್ನಾಟಕ ದಿನಪತ್ರಿಕೆ, ದಿ.೧೩.೦೩.೨೦೦೫

**ಆರ್ಥಿಕ ಬದಲಾವಣೆಗಳು:**

ಲಂಬಾಣಿಗರಿಗೆ ಹೆಚ್ಚಾಗಿ ಭೂಮಿ ಇಲ್ಲದ್ದರಿಂದ ಬೇರೆಯವರ ಭೂಮಿಯಲ್ಲಿ ಕೂಲಿಕಾರರಾಗಿ ಕೆಲಸ ಮಾಡುತ್ತಿದ್ದಾರೆ. ಅಲ್ಪ-ಸ್ವಲ್ಪ ಭೂಮಿ ಇರುವವರೂ ಬರಗಾಲ ಸಂಭವಿಸುವ ಸಂದರ್ಭಗಳಲ್ಲಿ ಕೂಲಿಕೆಲಸದಲ್ಲಿ ತೊಡಗಿರುತ್ತಾರೆ. ನಿರಂತರ ಕೂಲಿಕೆಲಸ ಸಿಗದಿರುವ ವೇಳೆಯಲ್ಲಿ ಕೂಲಿಕಾರರು ಗೋವೆಗೆ ವಲಸೆ ಬರುವುದರಿಂದ ಸ್ವಸ್ಥಳಗಳಲ್ಲಿ ಕೂಲಿಕಾರರ ಕೊರತೆ ಉಂಟಾಗುತ್ತದೆ. ಕೆ.ಡೇವಿಸ್‌ರವರ ಪ್ರಕಾರ "ನಗರಗಳಿಗೆ ತರುಣ ಹಾಗೂ ದುಡಿಯುವ ವಯಸ್ಸಿನವರು ವಲಸೆ ಹೋಗಿ ವೃದ್ಧ ಹಾಗೂ ಅಸಹಾಯಕರಿಗೆ ಹಳ್ಳಿಗಳಲ್ಲಿ ಬಿಟ್ಟು ಹೋಗುವುದರಿಂದ ಕೃಷಿಕಾರ್ಯಗಳು ಹಾಗೂ ಸಣ್ಣ ಉದ್ದಿಮೆಗಳು ಹಿನ್ನಡೆ ಸಾಧಿಸುತ್ತವೆ."[18] ಎಂದು ಅಭಿಪ್ರಾಯ ಪಟ್ಟಿದ್ದಾರೆ. ಇದೇ ಪ್ರಕಾರವಾಗಿ ನಮ್ಮ ಅಧ್ಯಯನದಲ್ಲಿಯೂ ಸ್ವಸ್ಥಳದಲ್ಲಿ ಕೆಲಸಗಾರರು ಇಲ್ಲದ್ದರಿಂದ ಭೂಮಿಯು ಹಾಳಾಗುತ್ತಿದೆ. ಸ್ಥಳೀಯ ಲಂಬಾಣೇತರ ಭೂಮಾಲಿಕರ ಮೇಲೂ ಪರಿಣಾಮಬೀರಿದ್ದು ಭೂಮಾಲೀಕರು ಕೆಲಸಗಾರರ ಕೊರತೆಯಿಂದ ತಮ್ಮ ಹೊಲ-ಗದ್ದೆಗಳನ್ನು ಮಾರಾಟ ಮಾಡುತ್ತಿದ್ದಾರೆ. ಕೆಲವರು ಎಂದೂ ಕೃಷಿಕಾರ್ಯಗಳನ್ನು ಮಾಡದವರು ತಮ್ಮ ಭೂಮಿಯಲ್ಲಿ ದುಡಿಯುತ್ತಿದ್ದಾರೆ. ಉದಾಹರಣೆಗೆ ನರಸಲಗಿ ಗ್ರಾಮದಲ್ಲಿಯೇ ಶ್ರೀಮಂತರಾದವರೊಬ್ಬರು ಎಂದೂ ಕೃಷಿ ಕಾರ್ಯಗಳನ್ನು ಮಾಡದವರು ಇಂದು ಅನಿವಾರ್ಯವಾಗಿ ಕೂಲಿಕಾರರ ಕೊರತೆಯಿಂದ ಕೃಷಿ ಕಾರ್ಯಗಳನ್ನು ಮಾಡುತ್ತಿದ್ದಾರೆ. ಲಂಬಾಣಿಗರು ಸ್ವಸ್ಥಳದಲ್ಲಿ ಕೂಲಿಕೆಲಸ ಮಾಡಲು ನಿರಾಕರಿಸುತ್ತಿದ್ದಾರೆ. ಆರ್ಥಿಕವಾಗಿ ಸುಧಾರಿಸುತ್ತಿರುವ ಲಂಬಾಣಿಗರು ಸಾಂಪ್ರದಾಯಿಕ ಲಂಬಾಣೇತರ ಶ್ರೀಮಂತರಿಗೆ, ಸಾಹುಕಾರರಿಗೆ ಗೌರವಕೊಡುತ್ತಿಲ್ಲ. ಆರ್ಥಿಕವಾಗಿ ಸಹಾಯ ಮಾಡುವುದಾಗಿ ಶ್ರೀಮಂತರು ಆಸೆ-ಆಮಿಷ ಒಡ್ಡಿದರೂ ಅದನ್ನೂ ನಿರಾಕರಿಸಿ ತಮ್ಮ ಸ್ಥಾನ-ಮಾನ ಕಾಪಾಡಿಕೊಳ್ಳುತ್ತಿದ್ದಾರೆ. ಜೀತಪದ್ಧತಿ ಹಾಗೂ ಶೋಷಣೆಯಿಂದ ತಪ್ಪಿಸಿಕೊಂಡಿದ್ದಾರೆ. ಕೆ.ಡೇವಿಸ್‌ರವರ ಪ್ರಕಾರ ಗ್ರಾಮದಿಂದ ನಗರಗಳಿಗೆ ವಲಸೆ ಹೋದ ಜನರು ಕೆಲವು ದಿನಗಳ ನಂತರ ತಮ್ಮ ಜೊತೆಗೆ ತರುವ ಉಪಯುಕ್ತವಾದ ಉಳಿತಾಯ, ಅವರ ಕುಟುಂಬಕ್ಕೆ ಸಹಾಯವಾಗುವುದರ ಜೊತೆಗೆ ಸ್ಥಳಿಯ ಬಂಡವಾಳಕ್ಕೆ ಉಪಯುಕ್ತವಾದ ಬಂಡವಾಳ ಸೇರ್ಪಡೆಯಾಗುವುದರಿಂದ ಗ್ರಾಮೀಣ ಬಂಡವಾಳ ಹೆಚ್ಚಾಗುತ್ತದೆ, ಹಾಗೂ ನಗರಗಳ ಭೌದ್ಧಿಕ ಜ್ಞಾನವು ಗ್ರಾಮೀಣ ಪ್ರದೇಶಕ್ಕೆ ಹರಿದು ಬರುತ್ತದೆ. ಇದರಿಂದ ಗ್ರಾಮ ಸಮುದಾಯಗಳು ಏಳಿಗೆ ಅಗಲು ಸಹಾಯವಾಗುತ್ತದೆ ಎಂದಿದ್ದಾರೆ.[19] ನಮ್ಮ ಅಧ್ಯಯನದಲ್ಲಿಯೂ ವಲಸೆ ಹೋದ ಕುಟುಂಬಗಳ ಆರ್ಥಿಕ ಸ್ಥಿತಿ-ಗತಿಗಳು ಉಳಿದ ಕುಟುಂಬಗಳಿಗಿಂತ ಉತ್ತಮ ಸ್ಥಿತಿಯಲ್ಲಿವೆ. ಗೋವೆಯಿಂದ ಆರ್ಥಿಕತೆಯು ಹರಿದು ಬರುತ್ತಿರುವುದರಿಂದ ನರಸಲಗಿ ತಾಂಡಾದ ಜನರ ಆರ್ಥಿಕ ಜೀವನದಲ್ಲಿ ಪರಿವರ್ತನೆ ಆಗುತ್ತಿದೆ. ಕೆಲವರು ತಮ್ಮ ಕುಟುಂಬದ ಸಾಲ ತೀರಿಸಿಕೊಂಡಿದ್ದಾರೆ. ಹೊಸ ಮನೆಗಳನ್ನು ನಿರ್ಮಿಸಿಕೊಂಡಿದ್ದಾರೆ, ಹಾಗೂ ಕೆಲವರು ಭೂಮಿ ಖರೀದಿಸಿದ್ದಾರೆ. ಹೆಚ್ಚಿನ ವಿವರವನ್ನು ಮುಂದಿನ ಕೋಷ್ಟಕದ ಸಹಾಯದಿಂದ ನೋಡಬಹುದು.

---

18. Kingsley Davis: 1951: The Population of India and Pakistan, Princeton University Press, New York, - P-136.

19. ಅದೇ. ಪುಟ.-136.

**ಕೋಷ್ಟಕ 34, ವಲಸಿಗರು ಜನ್ಮಸ್ಥಳದಲ್ಲಿ ಆಸ್ತಿ ಖರೀದಿಸಿದ ವಿವರ ಆಧಾರಿತ ಸಂಖ್ಯೆ ಮತ್ತು ಶೇಕಡವಾರು ಹಂಚಿಕೆ. (Number & percentage of migrants who purchased property at native place by type of property)**

| ಆಸ್ತಿಯವಿವರ | ಸಂಖ್ಯೆ | ಪ್ರತಿಶತ |
|---|---|---|
| ಭೂಮಿ ಮತ್ತು ಮನೆ | 3 | 9.09 |
| ಭೂಮಿ | 2 | 6.06 |
| ಮನೆ ಹಾಗೂ ಸಾಲ ತೀರಿಸಿದ್ದಾರೆ. | 6 | 18.18 |
| ಭೂಮಿ ಹಾಗೂ ಸಾಲ ತೀರಿಸಿದ್ದಾರೆ. | 1 | 3.63 |
| ಮನೆ | 21 | 63.64 |
| ಒಟ್ಟು | **33** | **100.00** |

ಮೇಲಿನ ಕೋಷ್ಟಕದ ಪ್ರಕಾರ ಪ್ರತಿಶತ 15.15ರಷ್ಟು ಮಾಹಿತಿದಾರರು ಭೂಮಿ ಖರೀದಿಸುವುದರ ಜೊತೆಗೆ ಹೊಸಮನೆಗಳನ್ನು ನಿರ್ಮಾಣ ಮಾಡಿಕೊಂಡಿದ್ದಾರೆ. ಪ್ರತಿಶತ 18.18ರಷ್ಟು ಮಾಹಿತಿದಾರರು ಮನೆ ನಿರ್ಮಿಸಿಕೊಂಡು ಕುಟುಂಬದ ಸಾಲ ತೀರಿಸಿಕೊಂಡಿದ್ದಾರೆ. ಹಾಗೂ ಪ್ರತಿಶತ 3.67ರಷ್ಟು ಮಾಹಿತಿದಾರರು ಭೂಮಿ ಖರೀದಿಸಿದ್ದಾರೆ. ಹಾಗೂ ಕುಟುಂಬದ ಸಾಲ ತೀರಿಸಿದ್ದಾರೆ. ಪ್ರತಿಶತ 63.64ರಷ್ಟು ಮಾಹಿತಿದಾರರು ಮನೆ ನಿರ್ಮಿಸಿಕೊಂಡಿದ್ದಾರೆ. ಇವರಲ್ಲಿ ಹೆಚ್ಚಿನವರು ಭೂಮಿ ಖರೀದಿಸಿದ್ದಾರೆ. ಹಾಗೂ ಮನೆ ಇಲ್ಲದವರು ಮನೆ ನಿರ್ಮಿಸಿಕೊಂಡಿದ್ದಾರೆ. ಉದಾಹರಣೆಗೆ ಸಂಗತಿ ಸಂಖ್ಯೆ 5ರ ಕುಟುಂಬದ ಸದಸ್ಯನ ವಯಸ್ಸು 21, ಐದನೆಯ ತರಗತಿವರೆಗೆ ವಿದ್ಯಾಭ್ಯಾಸ ಮಾಡಿದ್ದಾನೆ. 2002ರಿಂದ ಸತತವಾಗಿ ಗೋವೆಗೆ ವಲಸೆ ಬಂದು ವಾಸ್ಕೊನಗರದ ಗೋಮ್ಸ ಬೇಕರಿಯಲ್ಲಿ ಸಹಾಯಕನಾಗಿ ಉದ್ಯೋಗ ಮಾಡುತ್ತಿದ್ದು ಉಚಿತ ವಸತಿ, ಊಟ-ಉಪಹಾರದ ಜೊತೆಗೆ ತಿಂಗಳಿಗೆ 2,400 ರೂಪಾಯಿ ಸಂಬಳ ಪಡಿಯುತ್ತಾನೆ. ವಲಸೆ ಬಂದ ನಂತರ ಸ್ವಸ್ಥಳದಲ್ಲಿ 20,000 ಸಾವಿರ ರೂಪಾಯಿ ಮೌಲ್ಯದ ಮನೆ ಕಟ್ಟಿಸಿದ್ದಾನೆ. ಹಾಗೂ ಕುಟುಂಬದ 30,000 ಸಾವಿರ ರೂಪಾಯಿ ಸಾಲ ತೀರಿಸಿದ್ದಾನೆ. ಹೀಗೆ ಲಂಬಾಣಿಗರು ಆರ್ಥಿಕವಾಗಿ ಚೇತರಿಸಿಕೊಳ್ಳುತ್ತಿದ್ದಾರೆ.

ನರಸಲಗಿ ತಾಂಡಾದಲ್ಲಿ ಮೊದಲು ಸಾದಾ ರೀತಿಯಲ್ಲಿ ಆಚರಿಸ್ಪಡುತ್ತಿದ್ದ. ದಸರಾಹಬ್ಬ ಹಾಗೂ ತೀಜ್ (ಗೋಧಿ ಸಸಿಹಬ್ಬ) ಇಂದು ವಿಜ್ರಂಭಣೆಯಿಂದ ಆಚರಿಸುತ್ತಿದ್ದಾರೆ. ಇತ್ತೀಚೆಗೆ ಗಣೇಶ ಚತುರ್ಥಿಯನ್ನು ಆಚರಿಸುತ್ತಿದ್ದಾರೆ. ಹಬ್ಬ-ಹರಿದಿನಗಳ ಸಂದರ್ಭಗಳಲ್ಲಿ ಲಂಬಾಣೇತರರ ಹಾಗೆ ಮನೋರಂಜನೆಗಾಗಿ ದ್ಯಾಮವ್ವನ ಸೋಗು, ಕಳ್ಳಬೇಡರಸೋಗು, ಕರಡಿಸೋಗು, ಮೋಡಿಆಟ, ಕಬ್ಬಡ್ಡಿ ಪಂದ್ಯಾವಳಿಗಳನ್ನು ತಾಂಡಾಗಳಲ್ಲಿ ಏರ್ಪಡಿಸುತ್ತಿದ್ದಾರೆ. ಮನೋರಂಜನೆಗಾಗಿ ನಾಟಕಗಳನ್ನು ಮಾಡುತ್ತಾರೆ. ತಾಂಡಾದಲ್ಲಿ ಎರಡು ಕೀರಾಣಿ ಅಂಗಡಿಗಳು, ಒಂದು ಹಿಟ್ಟಿನಗಿರಿಣಿ, ಒಂದು ಹೋಟೇಲು ಭರದಿಂದ ನಡೆಯುತ್ತಿವೆ. ಚಹ-ಹಾಗೂ ಹೋಟೇಲು ತಿಂಡಿ-ತಿನಿಸುಗಳ ಬಗ್ಗೆ ಗೊತ್ತಿರದ ತಾಂಡಾದ ಜನರಿಗೆ ಇಂದು ತಾಂಡಾದಲ್ಲಿ ಹೋಟೇಲು ನಿರ್ಮಿಸಿದ್ದಾರೆ. ಕೆಲವರು ದೂರವಾಣಿ ಸಂಪರ್ಕ ಮೊಬೈಲ್ ಫೋನ್ ಹೊಂದಿದ್ದಾರೆ. ಟಿ.ವಿ.,

ರೇಡಿಯೋ, ಟೇಪ್‌ರೆಕಾರ್ಡರ್, ಮೋಟರ್‌ಸೈಕಲ್, ಆಟೋರಿಕ್ಷಾ, ಮಿಕ್ಸರ್ ಗ್ರೈಂಡರ್‌ಗಳಂತಹ ವಸ್ತುಗಳು ಲಂಬಾಣಿಗರ ಮನೆಗಳಲ್ಲಿ ಕಂಡುಬರುತ್ತಿವೆ. ಒಂದು ಕಡೆ ಆರ್ಥಿಕವಾಗಿ ಪ್ರಗತಿಯಾದರೆ ಇನ್ನೊಂದು ಕಡೆ ಸರ್ಕಾರ ಒದಗಿಸುವ ಸೌಲಭ್ಯಗಳಿಂದ ಲಂಬಾಣಿಗರು ವಂಚಿತರಾಗುತ್ತಿದ್ದಾರೆ. ವಲಸೆ ಹೋಗುವುದರಿಂದ ಲಂಬಾಣಿಗರಿಗೆ ಸರ್ಕಾರ ಒದಗಿಸುತ್ತಿರುವ ಮೀಸಲಾತಿಯ ಸೌಲಭ್ಯ, ಆರ್ಥಿಕ ಸಹಾಯ, ಪಡೆದುಕೊಳ್ಳಲು ಸಾಧ್ಯವಾಗುತ್ತಿಲ್ಲ. ವಲಸೆ ಹೋಗದ ಕುಟುಂಬಗಳು ಭೂಮಿ, ಕೊಳವೆಭಾವಿ ಸೌಲಭ್ಯ ಮನೆ ಹಾಗೂ ರಿಯಾಯಿತಿ ಬೆಲೆಯಲ್ಲಿ ಜಾನುವಾರುಗಳನ್ನು ಪಡೆದಿದ್ದಾರೆ.

**ದನಕರುಗಳ ಮೇಲೆ ಆಗುತ್ತಿರುವ ಪರಿಣಾಮಗಳು:**

ಮೊದಲು ಅಲೆಮಾರಿಗಳಾಗಿದ್ದ ಲಂಬಾಣಿಗರು ಅಸಂಖ್ಯಾತ ದನ-ಕರುಗಳನ್ನು ಹೊಂದಿರುವ ಬಗೆಗೆ ಉಲ್ಲೇಖಗಳಿವೆ. ಈಗಲೂ ಲಂಬಾಣಿಗರು ಪಶುಪಾಲನೆ ಮಾಡಿಕೊಂಡು ಬರುತ್ತಿರುವುದು ಕಂಡುಬರುತ್ತದೆ. ಎಮ್ಮೆ, ಆಕಳು, ಕುರಿ, ಕೋಳಿಸಾಕುವ ಕೆಲವರು ಅವುಗಳ ಉತ್ಪನ್ನದಿಂದ ಜೀವನ ನಿರ್ವಹಿಸುತ್ತಿದ್ದಾರೆ. ಕುರಿಗಳ ಉಣ್ಣೆ ತೆಗೆದು ನಗರಗಳಿಗೆ ಹೋಗಿ ಮಾರಾಟ ಮಾಡುತ್ತಾರೆ. ಪಶುಪಾಲನೆಯಿಂದ ಬರುವ ಹಾಲು, ಬೆಣ್ಣೆ, ತುಪ್ಪ ಇತ್ಯಾದಿಗಳನ್ನು ತಮಗೆ ಬೇಕಾದಷ್ಟನ್ನು ಇಟ್ಟುಕೊಂಡು ಉಳಿದುದ್ದನ್ನು ಮಾರಾಟ ಮಾಡುತ್ತಾರೆ.[20] ಜಾನುವಾರುಗಳು ಲಂಬಾಣಿಗರ ಆರ್ಥಿಕತೆಯ ಮೂಲ ಸಾಧನಗಳಾಗಿವೆ. ಆದರೆ ಪ್ರಸ್ತುತ ಗೋವೆಗೆ ಕೂಲಿಕೆಲಸಕ್ಕಾಗಿ ವಲಸೆ ಹೋಗುತ್ತಿರುವುದರಿಂದ ಜಾನುವಾರುಗಳನ್ನು ಸಾಕಲು ಯಾರು ಇಲ್ಲದ್ದರಿಂದ ಅವುಗಳನ್ನು ಮಾರಾಟ ಮಾಡುತ್ತಿದ್ದಾರೆ. ವಲಸೆಯಿಂದ ಪ್ರಾಣಿಗಳ ಮೇಲೂ ಪರಿಣಾಮಬೀರಿದೆ.

**ವಲಸಿಗರನ್ನು ಬರಮಾಡಿಕೊಳ್ಳುವ ಗೋವಾ ಸಮಾಜದ ಮೇಲೆ ಆಗುತ್ತಿರುವ ಪರಿಣಾಮಗಳು:**

ವಲಸಿಗರನ್ನು ಕಳುಹಿಸಿಕೊಡುವ ಸಮಾಜದ ಮೇಲೆ ಪರಿಣಾಮವಾದಂತೆ, ವಲಸಿಗರನ್ನು ಬರಮಾಡಿಕೊಳ್ಳುತ್ತಿರುವ ಗೋವಾ ಸಮಾಜದ ಮೇಲೂ, ಪರಿಣಾಮ ಬೀರುತ್ತದೆ. ವಲಸಿಗರಿಂದ ಗೋವೆಯಲ್ಲಿ ಅನೇಕ ಸಾಮಾಜಿಕ ಸಮಸ್ಯೆಗಳು ಹುಟ್ಟಿಕೊಳ್ಳಲು ಕಾರಣವಾಗಿದೆ. ಅವುಗಳನ್ನು ಈ ಮುಂದಿನಂತೆ ನೋಡಬಹುದು.

**1. ವಸತಿ ಸಮಸ್ಯೆ**

ಗೋವೆ ವಿಮೋಚನೆಗೊಂಡ ನಂತರದ ಅವಧಿಯಲ್ಲಿ ಆಡಳಿತದ ವಿಕೇಂದ್ರಿಕರಣ ಹಾಗೂ ಉದ್ದಿಮೆಗಳ ಸ್ಥಾಪನೆಯಿಂದ ಸೃಷ್ಟಿಯಾದ ಉದ್ಯೋಗಾವಕಾಶಗಳಿಗೆ ಆಕರ್ಷಿತರಾಗಿ ನೆರೆಯ ರಾಜ್ಯಗಳ ಬಡತನದಿಂದ ಬಳಲುತ್ತಿರುವ ಕೂಲಿಕಾರರು ಹೆಚ್ಚಿನ ಸಂಖ್ಯೆಯಲ್ಲಿ ಗೋವೆಗೆ ವಲಸೆ ಬರಲು ಪ್ರಾರಂಭಿಸಿದ್ದರಿಂದ ಗೋವೆಯ ಪ್ರಮುಖ ನಗರ ಪ್ರದೇಶಗಳಲ್ಲಿ ಮನೆಬಾಡಿಗೆ ಹಾಗೂ ಭೂಮಿಯ ಮೌಲ್ಯ ಹೆಚ್ಚಾಗಿದೆ. "ಎಸ್.ಆರ್.ಫಲರವರ ಪ್ರಕಾರ ಮಧ್ಯಮವರ್ಗಗಳ ಕುಟುಂಬಗಳ ಅಧ್ಯಯನದ ವರದಿಯ ಪ್ರಕಾರ ಫಣಜಿನಗರದ ಮನೆಬಾಡಿಗೆ ಭಾರತ ದೇಶದಲ್ಲಿಯೇ ಅತಿ ಹೆಚ್ಚಿನದ್ದಾಗಿದೆ"[21] ಎಂದಿದ್ದಾರೆ. ಮನೆಬಾಡಿಗೆ

---

20. ಡಾ.ಪಿ.ಕೆ.ಖಂಡೋಬಾ: 'ಕರ್ನಾಟಕದ ಬುಡಕಟ್ಟಿನ ಲಂಬಾಣಿಗರು', ಪುಟ-೯೧

21. S.R.Phal: 1982: 'Society in Goa' (Some aspects of Tradition and Modern Trends) B.R. Publishing Corporation -Delhi P -55.

ಹೆಚ್ಚಾಗಿದ್ದರಿಂದ ಮಧ್ಯಮವರ್ಗದ ಜನರು ಕಡಿಮೆ ಬಾಡಿಗೆಗೆ ಮನೆ ಸಿಗುವ ಗ್ರಾಮೀಣ ಪ್ರದೇಶಗಳಿಗೆ ಹೋಗಿ ನೆಲೆಸುತ್ತಿದ್ದಾರೆ. ಇದರಿಂದ ಗ್ರಾಮೀಣ ಪ್ರದೇಶದ ಶ್ರೀಮಂತರು ತಮ್ಮ ಭತ್ತದ, ತೆಂಗಿನಗದ್ದೆಗಳನ್ನು ನಾಶಪಡಿಸಿ ಹೊಸಮನೆಗಳನ್ನು ನಿರ್ಮಿಸುತ್ತಿದ್ದಾರೆ. ಇದರಿಂದ ಕೂಲಿಕಾರರಿಗೆ ಮತ್ತಷ್ಟು ಉದ್ಯೋಗವಕಾಶಗಳು ಸೃಷ್ಟಿಯಾಗುತ್ತಿವೆ. ಲಂಬಾಣಿ ಕೂಲಿಕಾರರು ಬಾಡಿಗೆ ಮನೆಗಳಲ್ಲಿ ವಾಸವಾಗದೇ ಕೆಲಸದ ಸಮೀಪದ ಸ್ಥಳಗಳಲ್ಲಿ ಚಿಕ್ಕ-ಚಿಕ್ಕ ಗುಡಿಸಲುಗಳನ್ನು ನಿರ್ಮಿಸಿಕೊಂಡು ವಾಸವಾಗಿದ್ದಾರೆ. ಕೆಲವರು ಕೆಲಸಕೊಟ್ಟ ಮಾಲಿಕರ ಮನೆಯಲ್ಲಿ ಹಾಗೂ ಕೊಳಚೆ ಪ್ರದೇಶಗಳಲ್ಲಿ ವಾಸವಾಗಿದ್ದಾರೆ.

**2. ನೀರು ಹಾಗೂ ನಿರ್ಮಲೀಕರಣ ಸಮಸ್ಯೆ:**

ಗೋವೆಗೆ ಕೂಲಿಕಾರರು ವಲಸೆ ಬರುತ್ತಿರುವುದರಿಂದ ಜನಸಂಖ್ಯೆ ಹೆಚ್ಚಾಗಿ ನೀರಿನ ಸಮಸ್ಯೆ ಹಾಗೂ ನೈರ್ಮಲೀಕರಣ ಸಮಸ್ಯೆ ಉಂಟಾಗುತ್ತಿದೆ. ಸಾರ್ವಜನಿಕ ನೀರಿನ ನಲ್ಲಿಗಳು ಜನಜಂಗುಳಿಯಿಂದ ತುಂಬಿರುತ್ತವೆ. ಸಾರ್ವಜನಿಕರಿಗೆ ನೀರಿನ ಹಾಗೂ ನೈರ್ಮಲ್ಯದ ಸೌಕರ್ಯಗಳನ್ನು ಒದಗಿಸುವುದು ಸರ್ಕಾರಕ್ಕೆ ವೆಚ್ಚದಾಯಕವಾಗಿದೆ. ಬೀಚುಗಳ ದಡಗಳಲ್ಲಿ ರಸ್ತೆಯ ಪಕ್ಕದಲ್ಲಿ ಅಗ್ಗವಾದ ಹೋಟೇಲು, ಬಾರು, ಡಬ್ಬಾಅಂಗಡಿಗಳನ್ನು ತೆರೆದಿದ್ದರಿಂದ ನಿರ್ಮಲೀಕರಣ ಸಮಸ್ಯೆ ಉಂಟಾಗಿದೆ. ಗೋವೆಯ ಕೊಳಚೆ ಪ್ರದೇಶದಲ್ಲಿಯ ನೈರ್ಮಲೀಕರಣದಿಂದ ಸೊಳ್ಳೆಗಳು ಕ್ರಿಮಿಕೀಟಗಳು ನಿರ್ಮಾಣವಾಗಿ ಜನರು ಅನಾರೋಗ್ಯದ ಸಮಸ್ಯೆ ಎದುರಿಸುತ್ತಿದ್ದಾರೆ. ನಗರ ಪೌರಸಂಸ್ಥೆಗೆ ನಗರ ಪ್ರದೇಶ ಸ್ವಚ್ಛಗೊಳಿಸುವುದು ತುಂಬಾ ಕಷ್ಟದಾಯಕವಾಗಿದೆ.

**3. ಬೆಲೆ ಏರಿಕೆ ಸಮಸ್ಯೆ:**

ಗೋವೆಗೆ ಹೆಚ್ಚಿನ ಸಂಖ್ಯೆಯಲ್ಲಿ ಕೂಲಿಕಾರರು ವಲಸೆ ಹೋಗುವುದರಿಂದ ಅಲ್ಲಿಯ ಜನಸಂಖ್ಯೆ ಹೆಚ್ಚಾಗುತ್ತ ಸಾಗಿದೆ. ಇದರಿಂದ ಆಹಾರ ಪದಾರ್ಥಗಳ ಕೊರತೆ ಸಂಭವಿಸಿ ಬೆಲೆಗಳು ಗಗನಕ್ಕೇರಿವೆ. ಅಗತ್ಯ ಆಹಾರ ಪದಾರ್ಥಗಳು, ತರಕಾರಿ, ಹಣ್ಣು ಮುಂತಾದವುಗಳ ಕೊರತೆ ಇರುವುದರಿಂದ ಕರ್ನಾಟಕ ಹಾಗೂ ಇತರ ರಾಜ್ಯಗಳಿಂದ ಆಮದು ಮಾಡಿಕೊಂಡು ದ್ವಿಗುಣ ಬೆಲೆಗೆ ಮಾರಾಟ ಮಾಡುತ್ತಾರೆ. ಇದರಿಂದ ಮಧ್ಯಮ ಹಾಗೂ ಬಡಜನರು ಜೀವನ ಸಾಗಿಸುವುದು ತುಂಬಾ ಕಷ್ಟದಾಯಕವಾಗಿದೆ.

**4. ಅಪರಾಧಗಳ ಹೆಚ್ಚಳ:**

ಗೋವೆಗೆ ವಲಸೆ ಬಂದವರಲ್ಲಿ ಹೆಚ್ಚಿನವರು ಕೆಳವರ್ಗದ ಕೂಲಿಕಾರರಾಗಿದ್ದಾರೆ. ಆರ್ಥಿಕ ಕೊರತೆಯಿಂದ ಹಾಗೂ ಕೊಳಚೆ ಪ್ರದೇಶದ ಸಂಸ್ಕೃತಿಗೆ ಪ್ರಭಾವಿತರಾಗಿ ಸಣ್ಣ-ಪುಟ್ಟ ಅಪರಾಧಿ ಕೃತ್ಯಗಳ ಜೊತೆಗೆ ಕಳ್ಳತನ, ಮಾದಕಪದಾರ್ಥಗಳ ಮಾರಾಟ ಹಾಗೂ ವೇಶ್ಯಾವೃತ್ತಿಯಲ್ಲಿ ತೊಡಗಿದ್ದಾರೆ. ಹೆಚ್ಚುತ್ತಿರುವ ಅಪಾರಾಧಿಕೃತ್ಯಗಳನ್ನು ನಿಯಂತ್ರಿಸುವುದು ಪೊಲೀಸ್ ಇಲಾಖೆಗೆ ಕಷ್ಟದಾಯಕವಾಗಿದೆ. ನಮ್ಮ ಅಧ್ಯಯನದ ನಮೂನೆಯಲ್ಲಿ ಕೆಲವು ಲಂಬಾಣಿ ಯುವಕರು ಕೆಲಸದ ಸ್ಥಳಗಳಲ್ಲಿ ಸಣ್ಣ-ಪುಟ್ಟ ವಸ್ತುಗಳನ್ನು ಕಳುವು ಮಾಡಿ ಮಾರಾಟ ಮಾಡುವುದು, ಮಾದಕಪದಾರ್ಥಗಳ ವ್ಯಾಪಾರದಲ್ಲಿ ತೊಡಿಗಿದ್ದು ಕಂಡುಬಂದಿದೆ. ಉದಾಹರಣೆಗೆ: ಸಂಗತಿ: ಸಂಖ್ಯೆ 5ರ ಕುಟುಂಬದ ಸದಸ್ಯನ ವಯಸ್ಸು 18, ಅವಿವಾಹಿತ 7ನೇ ತರಗತಿವರೆಗೆ

ಶಿಕ್ಷಣ ಪಡೆದಿದ್ದು 2000ನೇ ಸಾಲಿನಿಂದ ಸತತವಾಗಿ ಗೋವೆಗೆ ವಲಸೆ ಬಂದು ಗೋಲ್ಡನ್ ಬೇಕರಿ ಪೊಂಡಾದಲ್ಲಿ ಬೇಕರಿ ಸಹಾಯಕನಾಗಿ ಕೆಲಸ ಮಾಡುತ್ತಿದ್ದು ತಿಂಗಳಿಗೆ 2,400 ರೂಪಾಯಿ ಸಂಬಳ ಪಡಿಯುತ್ತಾನೆ. ಈತನು ಸಣ್ಣಪುಟ್ಟ ವಸ್ತುಗಳಾದ ಟೇಪರೇಕಾರ್ಡರ್, ವಿಸಿಡಿಗಳಂತಹ ವಸ್ತುಗಳನ್ನು ಕದ್ದು ಮಾರಾಟ ಮಾಡುತ್ತಾನೆ. ಎಂಬ ವಿಷಯ ನನ್ನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಇವನ ಸ್ನೇಹಿತರು ಮಾಹಿತಿ ನೀಡಿದ್ದಾರೆ.

**5. ಕೊಳಚೆ ಪ್ರದೇಶಗಳ ನಿರ್ಮಾಣ:**

ಅರೆಕೌಶಲ್ಯ Semiskilled ಮತ್ತು Unskilled ಕೌಶಲ್ಯವಿಲ್ಲದ ಕೂಲಿಕಾರರು ನಗರ ಪ್ರದೇಶಗಳಿಗೆ ಅದರಲ್ಲಿಯೂ ವಿಶೇಷವಾಗಿ ಬೃಹತ್ ನಗರ ಪ್ರದೇಶಗಳಿಗೆ ವಲಸೆ ಬರುವುದರ ಪರಿಣಾಮದಿಂದ ನಗರಗಳಲ್ಲಿ ಕೊಳಚೆ ಪ್ರದೇಶಗಳ ನಿರ್ಮಾಣವಾಗುತ್ತಿದೆ."[22] ಗೋವೆಗೆ ವಲಸೆ ಬಂದ ವ್ಯಾಪಾರಸ್ಥರು ಬಾಡಿಗೆ ಮನೆಗಳಲ್ಲಿ ವಾಸವಾಗಿದ್ದಾರೆ. ಆದರೆ ಮನೆಬಾಡಿಗೆ ದುಬಾರಿಯಿರುವುದರಿಂದ ಬಡಕೂಲಿಕಾರರು ಕೆಲಸ ಮಾಡುವ ಹತ್ತಿರದ ಪ್ರದೇಶಗಳಲ್ಲಿ ಚಿಕ್ಕ-ಚಿಕ್ಕ ಗುಡಿಸಲುಗಳನ್ನು ನಿರ್ಮಿಸಿಕೊಂಡು ವಾಸವಾಗಿದ್ದಾರೆ. ಇಂತಹ ಅನಧಿಕೃತ ಗುಡಿಸಲುಗಳ ನಿರ್ಮಾಣವೇ ಗೋವೆಯಲ್ಲಿ ಬಯನಾ ಹಾಗೂ ಮಂಗೂಹಿಲ್‌ಗಳಂತಹ ಕೊಳಚೆ ಪ್ರದೇಶಗಳ ನಿರ್ಮಾಣವಾಗಲು ಕಾರಣವಾಗಿದೆ. ಈ ಕೊಳಚೆ ಪ್ರದೇಶಗಳಲ್ಲಿ ಕೂಲಿಕಾರರು, ರಿಕ್ಷಾಚಾಲಕರು, ರಸ್ತೆ ಬದಿಯ ವ್ಯಾಪಾರಿಗಳು, ತರಕಾರಿ ವ್ಯಾಪಾರಸ್ಥರು ಹೀಗೆ ಕಡಿಮೆ ಆದಾಯದ ಕೆಳವರ್ಗದ ಜನರು ವಾಸವಾಗಿದ್ದಾರೆ. ವಾಸ್ಕೋನಗರದ 'ಕೆಂಪು ದ್ವೀಪ' ಎಂದು ಹೆಸರುವಾಸಿಯಾದ ಬಯನಾ ಕೊಳಚೆ ಪ್ರದೇಶದಲ್ಲಿ ಜೂಜಾಟ, ಗೂಂಡಾಗಿರಿ, ಕೊಲೆ, ಮಾದಕಪದಾರ್ಥಗಳ ಮಾರಾಟ, ವೇಶ್ಯಾವೃತ್ತಿಗಳಂತಹ ಕೃತ್ಯಗಳು ನಡೆಯುತ್ತಿವೆ. ವೇಶ್ಯಾವೃತ್ತಿಯಲ್ಲಿ ನಿರತರಾಗಿದ್ದ ಸುಮಾರು 3000 ಲೈಂಗಿಕ ಕಾರ್ಯಕರ್ತೆಯರನ್ನು 14.06.2004ರಂದು ಒತ್ತಾಯಪೂರ್ವಕವಾಗಿ ಸ್ಥಳಾಂತರಿಸಲಾಗಿದೆ. ಗೋವೆ ವಿಮೋಚನೆ ಅದಾಗ್ಗಿನಿಂದ ಇಲ್ಲಿಯವರಿಗೆ ಈ ಪ್ರದೇಶದಲ್ಲಿ ಲೈಂಗಿಕ ವ್ಯಾಪಾರ ನಡೆಯುತ್ತಿತ್ತು. ಬಯನಾ ಪ್ರದೇಶದಲ್ಲಿ ನಡೆಯುತ್ತಿದ್ದ ವೇಶ್ಯಾವೃತ್ತಿಗೆ ಕೆಲವು ರಾಜಕೀಯ ಶಕ್ತಿಗಳು ಪೊಲೀಸ್ ಅಧಿಕಾರಿಗಳ ಪ್ರೋತ್ಸಾಹವಿತ್ತು ಸ್ಥಳಿಯ ಯುವಕರು ಹೆಚ್ಚಿನ ಸಂಖ್ಯೆಯಲ್ಲಿ ಏಡ್ಸ್ ರೋಗದಿಂದ ಸಾವನ್ನಪ್ಪುತ್ತಿದ್ದರಿಂದ ವೇಶ್ಯೆಯರನ್ನು ಅಲ್ಲಿಂದ ತೆರವುಗೊಳಿಸಲಾಗಿದೆ. ಬಯನಾ ಕೊಳಚೆ ಪ್ರದೇಶದಿಂದ ಸ್ಥಳಿಯ ಹೋಟೇಲುಗಳ, ಲಾಡ್ಜುಗಳ, ಬಾರ್, ರಿಕ್ಷಾಧಾರಿಗಳಿಗೆ ಹಾಗೂ ಮೋಟಾರ್‌ಸೈಕಲ್ ನಡೆಸುವ ವ್ಯಾಪಾರಸ್ಥರು ಇತರ ಪ್ರದೇಶಗಳಿಂದ ಬಯನಾ ಕೊಳಚೆ ಪ್ರದೇಶಕ್ಕೆ ವೇಶ್ಯಾವೃತ್ತಿಗಾಗಿ ಗಿರಾಕಿಗಳನ್ನು ಕರೆ ತಂದು ಬಿಡುವುದರಿಂದ ಇವರ ಉದ್ಯೋಗ ಲಾಭದಾಯಕವಾಗಿತ್ತು. ಬಯನಾ ಪ್ರದೇಶದಿಂದ ಲೈಂಗಿಕ ಕಾರ್ಯಕರ್ತೆಯರನ್ನು ತೆರವುಗೊಳಿಸಿ ರಾಯಬಂದರಿನಲ್ಲಿ ಪುನರ್‌ವಸತಿ ಕಲ್ಪಿಸಲಾಯಿತು. ಆದರೆ ವೇಶ್ಯೆಯರು ಅಲ್ಲಿ ನೆಲೆಗೊಳ್ಳಲಿಲ್ಲ. ಅವರು ಗೋವೆಯ ಇನ್ನಿತರ ಕೊಳಚೆ ಪ್ರದೇಶಗಳಾದ ಮಂಗೂರಹಿಲ್ಸ್, ಜುವಾರಿನಗರ, ಹೊಸವಡ್ಡಾಮ್, ವಾಸ್ಕೊದ ಶಾಂತಿನಗರ ಹಾಗೂ ಇಂದಿರಾನಗರದ ಜೋಪಡಿ ಪಟ್ಟಿಗಳಲ್ಲಿ ನೆಲೆಸಿದ್ದಾರೆ. ಕೆಲವು ವೇಶ್ಯೆಯರು

22. Rao,M.S.A: 1974: 'The Migrant to the City' Yojana. 18(20) 7-13.

ಗೋವೆಯ ವಿವಿಧ ನಗರ ಪ್ರದೇಶಗಳಿಗೆ ಚದುರಿಹೋಗಿ ವಾಸವಾಗಿದ್ದರಿಂದ ಸ್ಥಳಿಯರು ಭಯ-ಭೀತಿಯಿಂದ ಜೀವನ ಸಾಗಿಸುತ್ತಿದ್ದಾರೆ.

**ಬಯನಾ ಕೊಳಚೆ ಪ್ರದೇಶದಿಂದ ಲೈಂಗಿಕ ಕಾರ್ಯಕರ್ತೆಯರನ್ನು ಸ್ಥಳಾಂತರಿಸಲು ಕಾರಣಗಳು:**

1. ಬಯನಾ ಬೀಚನ್ನು ಮೊದಲಿನ ಹಾಗೆ ಪ್ರವಾಸಿಗರನ್ನು ಆಕರ್ಷಿಸುವ ಸ್ಥಳವನ್ನಾಗಿ ಮಾರ್ಪಡಿಸಲು.
2. ವೇಶ್ಯಾವೃತ್ತಿಯಿಂದ ವಾಸ್ಕೊನಗರದಲ್ಲಿ ಏಡ್ಸ್‌ಕಾಯಿಲೆ ತೀವ್ರವಾಗಿ ಹರಡಿ ಹೆಚ್ಚಿನ ಸಂಖ್ಯೆಯಲ್ಲಿ ಯುವಕರು ಮರಣ ಹೊಂದುತ್ತಿರುವುದರಿಂದ.
3. ಬಯನಾ ಕೊಳಚೆ ಪ್ರದೇಶದಿಂದ ಗೋವೆಗೆ ಕೆಟ್ಟಹೆಸರು ಬರುತ್ತಿರುವುದರಿಂದ.
4. ರಸ್ತೆ ನಿರ್ಮಾಣ ಮಾಡಲು ಬಯನಾ ಪ್ರದೇಶ ಅಡತಡೆ ಆಗಿದ್ದರಿಂದ.
5. ಬಯನಾ ಕೊಳಚೆ ಪ್ರದೇಶದಲ್ಲಿ ವೇಶ್ಯಾವೃತ್ತಿ, ಕಳ್ಳತನ, ಕೊಲೆ, ಗೂಂಡಾಗಿರಿ, ಜೂಜಾಟ, ಕಳ್ಳಸಾಗಾಣಿಕೆ, ಮಾದಕಪದಾರ್ಥಗಳ ವ್ಯಾಪಾರ ಮುಂತಾದವು ನಡೆಯುತ್ತಿದ್ದರಿಂದ.

ಈ ಮೇಲಿನ ಕಾರಣಗಳಿಂದ ಬಯನಾ ಕೊಳಚೆ ಪ್ರದೇಶದಲ್ಲಿ ವಾಸವಾಗಿರುವವರನ್ನು ಗೋವಾ ಸರ್ಕಾರ ತೆರವುಗೊಳಿಸಿದೆ.

**6. ಅಗ್ಗದರದ ಮನೋರಂಜನಾ ಸಾಧನಗಳ ಉಗಮ:**

ಗೋವೆ ಪ್ರವಾಸಿಕೇಂದ್ರವಾಗಿರುವುದರಿಂದ ಹಾಗೂ ಈ ಪ್ರದೇಶ ವಿದೇಶಿಯರ ಆಡಳಿತಕ್ಕೆ ಒಳಗಾಗಿದ್ದರಿಂದ ವಿದೇಶಿ ಮಾದರಿಯ ಮನೋರಂಜನಾ ಸಾಧನಗಳಾದ ಕ್ಲಬ್, ಬಾರ್/ಮಧ್ಯದಂಗಡಿಗಳು, ನಾಟ್ಯಗೃಹಗಳು ಮುಂತಾದವು ಕಂಡುಬರುತ್ತವೆ. ಈ ಸಾಧನಗಳು ಮಧ್ಯಮ ಹಾಗೂ ಕೆಳವರ್ಗದವರ ಕೈಗೆಟುಕುವುದಿಲ್ಲ. ಆದ್ದರಿಂದ ಗೋವೆಯಲ್ಲಿ ಕೆಳದರ್ಜೆಯ ಗುಣಮಟ್ಟದ ಅಗ್ಗವಾದ ಮನೋರಂಜನಾ ಸೌಲಭ್ಯಗಳನ್ನು ಒದಗಿಸುವ ಕೇಂದ್ರಗಳು ಸ್ಥಾಪನೆಯಾಗಿವೆ. ಕೆಳವರ್ಗದ ಜನರು ಮನೋರಂಜನೆ ಪಡೆಯಲು ಜೂಜಾಟ, ವೇಶ್ಯಾಗೃಹ, ಕೆಳಮಟ್ಟದ ಬಾರ್, ಕ್ಲಬ್‌ಗಳಿಗೆ ಭೇಟಿ ನೀಡುತ್ತಾರೆ. ಹೆಚ್ಚಿನ ಸಂಖ್ಯೆಯಲ್ಲಿ ಅವಿವಾಹಿತ ಪುರುಷರು ಗೋವೆಗೆ ವಲಸೆ ಬರುವುದರಿಂದ ವೇಶ್ಯಾ ಗೃಹಗಳಿಗೆ ಭೇಟಿ ನೀಡುತ್ತಾರೆ. ಈ ಕೆಳದರ್ಜೆಯ ಗುಣಮಟ್ಟದ ಮನೋರಂಜನೆ ಒದಗಿಸುವ ಸಾಧನಗಳು ಗೋವೆಗೆ ಕಪ್ಪುಚುಕ್ಕೆಗಳಾಗಿ ಪರಿಣಮಿಸಿವೆ.

**7. ಉದ್ಯೋಗದ ಮಾರುಕಟ್ಟೆಯಲ್ಲಿ ಸ್ಥಳಿಯರಿಗೆ ಸ್ಪರ್ಧೆ ಏರ್ಪಡುತ್ತಿದೆ:**

ಗೋವೆಯ ವಿಲಾಸಿ ಜೀವನ, ಉದ್ಯೋಗವಕಾಶಗಳು, ಮನೋರಂಜನಾ ಸೌಲಭ್ಯ, ಆಹಾರ ಅಭ್ಯಾಸಗಳಿಗೆ ಆಕರ್ಷಕರಾಗಿ ವಲಸಿಗರು ಶಾಸ್ವತವಾಗಿ ನೆಲೆಸುತ್ತಿದ್ದಾರೆ. ವಲಸಿಗರ ಮಕ್ಕಳು ಶಿಕ್ಷಣ ಪಡೆದು ಸರ್ಕಾರಿ ಹಾಗೂ ಖಾಸಗಿ ಸಂಸ್ಥೆಗಳಲ್ಲಿ ಉದ್ಯೋಗ ಪಡೆಯುತ್ತಿದ್ದಾರೆ. ಜುವಾರಿನಗರದ ಯೂರಿಯಾ ಫ್ಯಾಕ್ಟರಿಯಲ್ಲಿ ಲಂಬಾಣಿಗರು ಖಾಯಂ ಉದ್ಯೋಗ ಪಡೆದಿದ್ದಾರೆ. ಇದರಿಂದ ಸ್ಥಳಿಯರಿಗೆ ಉದ್ಯೋಗ ಪಡೆಯಲು ಸ್ಪರ್ಧೆ ಏರ್ಪಟ್ಟಿದೆ. ಅದೇ ರೀತಿ ಲಂಬಾಣಿಗರು ಸಣ್ಣ-ಪುಟ್ಟ ವ್ಯಾಪಾರ ವಹಿವಾಟುಗಳಲ್ಲಿ ತೊಡಗಿ ಆರ್ಥಿಕವಾಗಿ ಸುಧಾರಿಸುತ್ತಿದ್ದಾರೆ. ಇದರಿಂದ ಸ್ಥಳಿಯ ವ್ಯಾಪಾರಸ್ಥರಿಗೆ ಸ್ಪರ್ಧೆ ಏರ್ಪಟ್ಟಿದೆ. ಲಂಬಾಣಿ ಸ್ತ್ರೀಯರು

ಮೀನಿನ ವ್ಯಾಪಾರ, ಯುವಕರು ತರಕಾರಿ, ಹಣ್ಣು, ತೆಂಗಿನಕಾಯಿ ಹಾಗೂ ಲಂಬಾಣಿ ಉಡುಪುಗಳ ವ್ಯಾಪಾರದಲ್ಲಿ ತೊಡಗಿದ್ದಾರೆ. ಇದರ ವಿರುದ್ಧ ಸ್ಥಳಿಯರು ಪ್ರತಿಭಟಿಸುತ್ತಾರೆಂದು ಲಂಬಾಣಿಗರು ಪ್ರತಿಕ್ರಿಯೆ ನೀಡಿದ್ದಾರೆ.

**8. ಕೆಳವರ್ಗದ ಕೂಲಿಕಾರರ ಸಂಖ್ಯೆಯಲ್ಲಿ ಹೆಚ್ಚಳ:**

ಗೋವೆಯ ಉದ್ಯೋಗಾವಕಾಶಗಳಿಗೆ ಆಕರ್ಷಿತರಾಗಿ ಹೆಚ್ಚಿನ ಸಂಖ್ಯೆಯಲ್ಲಿ ಕೂಲಿಕಾರರು ವಲಸೆ ಬರುತ್ತಿದ್ದಾರೆ. ಸ್ಥಳಿಯ ಕ್ರಿಶ್ಚಿಯನ್ ಸಮುದಾಯದ ಜನರು ಚಲಿಸುವ ಜನರಾಗಿದ್ದು ಗೋವೆ ವಿಮೋಚನೆಗೊಂಡ ನಂತರದ ಅವಧಿಯಲ್ಲಿ ದೇಶ-ವಿದೇಶಗಳಿಗೆ ಉದ್ಯೋಗಕ್ಕಾಗಿ ವಲಸೆ ಹೋಗಿರುವುದರಿಂದ ಇರವ ಜನಸಂಖ್ಯೆ ಕಡಿಮೆಯಿದೆ. ಗೋವೆಯ ಜನಸಂಖ್ಯೆ ಹೆಚ್ಚಳಕ್ಕೆ ಕೆಳವರ್ಗದ ಕೂಲಿಕಾರರು ಹೆಚ್ಚಿನ ಸಂಖ್ಯೆಯಲ್ಲಿ ವಲಸೆ ಬರುವುದೇ ಕಾರಣವಾಗಿದೆ. ಹಿಂದೂ ಹಾಗೂ ಮುಸ್ಲಿಂಮರು ಹೆಚ್ಚಿನ ಸಂಖ್ಯೆಯಲ್ಲಿ ವಲಸೆ ಬರುತ್ತಿದ್ದಾರೆ. ಇವರಲ್ಲಿ ಕೆಲವರು ವ್ಯಾಪಾರ ಉದ್ಯೋಗಗಳಲ್ಲಿ ತೊಡಗಿ ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿದ್ದಾರೆ. ಕೆಲವರು ಕೂಲಿಕೆಲಸ ಹಾಗೂ ಸಣ್ಣ ಪುಟ್ಟ ವ್ಯಾಪಾರಗಳಲ್ಲಿ ತೊಡಗಿದ್ದಾರೆ. ಮುಸ್ಲಿಂಮರು ತರಕಾರಿ, ಹಣ್ಣುವ್ಯಾಪಾರ, ರಸ್ತೆಬದಿಯಲ್ಲಿ ಅಗ್ಗದರದ ವಸ್ತುಗಳ ವ್ಯಾಪಾರ, ಸೈಕಲ್ ರಿಪೇರಿಗಳಂತಹ ಉದ್ಯೋಗಗಳಲ್ಲಿ ತೊಡಗಿದ್ದಾರೆ. ಕೆಲವು ಲಂಬಾಣಿಗರು ಖಾಯಂ ಉದ್ಯೋಗ ಪಡೆದಿದ್ದಾರೆ. ಹೆಚ್ಚಿನ ಸಂಖ್ಯೆಯಲ್ಲಿ ಲಂಬಾಣಿಗರು ಕೂಲಿ ಕೆಲಸಗಳನ್ನು ಅವಲಂಬಿಸಿದ್ದಾರೆ. ಇವರ ಜೊತೆಗೆ ಅತಿಹೀನ ಉದ್ಯೋಗಗಳಲ್ಲಿ ನಿರತರಾಗಿರುವ ದೇವದಾಸಿಯರು, ಭಿಕ್ಷುಕರು ಕೂಡ ವಲಸೆ ಬರುತ್ತಿದ್ದಾರೆ. ಆದ್ದರಿಂದ ಗೋವೆಯಲ್ಲಿ ಕೆಳವರ್ಗದ ಜನಸಂಖ್ಯೆ ಹೆಚ್ಚಾಗುತ್ತಿದೆ.

**9. ಸ್ಥಳಿಯರ ಆರೋಗ್ಯದ ಮೇಲೆ ದುಃಸ್ಪರಿಣಾಮ ಬೀರುತ್ತಿದೆ:**

ಗೋವೆಯಲ್ಲಿ ವಲಸಿಗರಿಂದ ನಿರ್ಮಾಣಗೊಂಡ ಅನಧಿಕೃತ ಕೊಳಚೆ ಪ್ರದೇಶಗಳು, ರಸ್ತೆ ಹಾಗೂ ಬೀಚುಗಳ ಬದಿಗಳಲ್ಲಿ ನಿರ್ಮಿಸಿದ ಅಗ್ಗದರದ ಕೆಳದರ್ಜೆಯ ಹೋಟೇಲುಗಳು, ಡಬ್ಬಾ ಅಂಗಡಿಗಳು, ಅಗ್ಗವಾದ ಭೋಜನಾ ಗೃಹಗಳು, ಬಾರುಗಳು ಮುಂತಾದವುಗಳಿಂದ ನೈರ್ಮಲ್ಯ ಸಮಸ್ಯೆ ಉಂಟಾಗಿ ಗೋವೆಯ ವಾತಾವರಣ ಕಲುಷಿತವಾಗಿ ಸ್ಥಳಿಯರ ಆರೋಗ್ಯ ಹಾಗೂ ಸಾಮಾಜಿಕ ಜೀವನದ ಮೇಲೆ ಪರಿಣಾಮ ಬೀರುತ್ತಿದೆ. ಕೊಳಚೆ ಪ್ರದೇಶಗಳಲ್ಲಿ ವೇಶ್ಯಾವೃತ್ತಿ ನಡೆಯುತ್ತಿದ್ದು ಇದರಿಂದ ಸ್ಥಳಿಯ ಯುವಕರು ಏಡ್ಸ್‌ಕಾಯಿಲೆಗೆ ಬಲಿಯಾಗುತ್ತಿದ್ದಾರೆ. ಜನಸಂಖ್ಯೆ ಒತ್ತಡ ಹೆಚ್ಚಾಗಿದ್ದರಿಂದ ಆರೋಗ್ಯ ಸೌಲಭ್ಯಗಳನ್ನು ಒದಗಿಸುವುದು ಸರ್ಕಾರಕ್ಕೆ ತುಂಬಾ ವೆಚ್ಚದಾಯಕವಾಗಿದೆ. ಏಡ್ಸ್ ಕಾಯಿಲೆಯಿಂದ ಬಳಲುತ್ತಿರುವ ರೋಗಿಗಳಿಗೆ ಖಾಸಗಿ ಆಸ್ಪತ್ರೆಗಳಲ್ಲಿ ಉಪಚರಿಸಲು ನಿರಾಕರಿಸುತ್ತಿದ್ದಾರೆ. ಆದ್ದರಿಂದ ರೋಗಿಗಳು ಸಾರ್ವಜನಿಕ ಆಸ್ಪತ್ರೆಗಳಲ್ಲಿ ಚಿಕಿತ್ಸೆ ಪಡೆಯುತ್ತಿದ್ದಾರೆ. ಗೋವೆಗೆ ವಲಸೆ ಬಂದ ಲಂಬಾಣಿಗರು ಹಾಗೂ ಕನ್ನಡಿಗರು ಏಡ್ಸ್‌ಕಾಯಿಲೆಯಿಂದ ಕೆಲವರು ಸಾವನ್ನಪ್ಪಿದ್ದಾರೆಂಬ ವಿಷಯ ಲಂಬಾಣಿಗರನ್ನು ಸಂದರ್ಶಿಸಿದಾಗ ತಿಳಿದುಬಂದಿದೆ. ಈ ಎಲ್ಲಾ ಸಮಸ್ಯಗಳ ಮಧ್ಯೆ ವಲಸಿಗರಿಂದ ಗೋವಾ ಸಮುದಾಯಕ್ಕೆ ಕೆಲವು ಪ್ರಯೋಜನಗಳಾಗಿವೆ.

ಪ್ರಯೋಜನಗಳು:

1. ಗೋವೆ ವಿಮೋಚನೆಯ ನಂತರ ಸ್ಥಳಿಯರು ಹೆಚ್ಚಿನ ಸಂಖ್ಯೆಯಲ್ಲಿ ದೇಶ-ವಿದೇಶಗಳಿಗೆ ವಲಸೆ ಹೋಗಿದ್ದರಿಂದ, ಅವರ ಕುಟುಂಬದ ವೃದ್ಧ, ಅಸಹಾಯಕ ಸದಸ್ಯರನ್ನು ನೋಡಿಕೊಳ್ಳಲು, ಹಾಗೂ ಮನೆಕೆಲಸಗಳಿಗಾಗಿ ಕೂಲಿಕಾರರ ಅಗತ್ಯವಿದೆ. ವಲಸಿಗರು ಈ ಅಗತ್ಯವನ್ನು ತುಂಬಿದ್ದಾರೆ.
2. ಗೋವೆ ವ್ಯವಸ್ಥಿತವಾಗಿ ಬೆಳೆಯಲು ಬಹುಮಹಡಿ ಕಟ್ಟಡಗಳು, ಸೇತುವೆಗಳು, ರಸ್ತೆಅಭಿವೃದ್ಧಿ ಕೆಲಸಗಳಾಗಲು ಕೂಲಿಕಾರರು ಕಾರಣೀಭೂತರಾಗಿದ್ದಾರೆ.
3. ಮ್ಯಾಂಗನೀಸ್ ಗಣಿಗಳಲ್ಲಿ, ಫ್ಯಾಕ್ಟರಿಗಳಲ್ಲಿ, ಹಡಗುಗಳಲ್ಲಿ ವಲಸೆ ಹೋದ ಕೂಲಿಕಾರರು ಶ್ರಮಪಟ್ಟು ದುಡಿಯುತ್ತಿರುವುದರಿಂದ ಗೋವೆಯು ಆರ್ಥಿಕವಾಗಿ ಅಭಿವೃದ್ಧಿಗೊಳ್ಳುತ್ತಿದೆ. ಪ್ರವಾಸೋದ್ಯಮ ಇಲಾಖೆ ನಡೆಸುತ್ತಿರುವ ಹೋಟೇಲು, ಲಾಡ್ಜ್ ಹಾಗೂ ಹಡಗುಗಳಲ್ಲಿ ವಸ್ತುಗಳನ್ನು ಹೇರಲು, ಇಳಿಸಲು ಕೂಲಿಕಾರರ ಅಗತ್ಯವಿದೆ. ಆದ್ದರಿಂದ ಗೋವೆಯ ಆರ್ಥಿಕ ಪ್ರಗತಿಗೆ ಕೂಲಿಕಾರರು ಕಾರಣೀಭೂತರಾಗಿದ್ದಾರೆ.

## ಅಧ್ಯಾಯ ೬

# ಗೋವೆಯಲ್ಲಿ ಲಂಬಾಣಿ ವಲಸಿಗರ ಸಾಮಾಜಿಕ ಆರ್ಥಿಕ ರೂಪರೇಷೆಗಳು

**(socio-economic profiles of lambanis Migrant's in goa)**

ಆಧುನಿಕ ನಗರಗಳು ತೀವ್ರವಾಗಿ ಬೆಳವಣಿಗೆಯಾಗಲು ಔದ್ಯೋಗಿಕರಣ ಕಾರಣವಾಗಿದೆ. 18ನೇ ಶತಮಾದಲ್ಲಿ ಇಂಗ್ಲೆಂಡಿನಲ್ಲಿ ಸಂಭವಿಸಿದ ಔದ್ಯೋಗಿಕ ಕ್ರಾಂತಿಯು ಜಗತ್ತಿನಾದ್ಯಂತ ವ್ಯಾಪಿಸಿದ್ದರಿಂದ ಹೊಸ ಹೊಸ ಉದ್ದಿಮೆಗಳು ಪ್ರಾರಂಭವಾದವು, ಇದರಿಂದ ನಗರ ಪ್ರದೇಶಗಳಲ್ಲಿ ಸೃಷ್ಠಿಯಾದ ಹೊಸ-ಹೊಸ ಉದ್ಯೋಗಾವಕಾಶಗಳಿಗೆ ಪ್ರಭಾವಿತರಾಗಿ ಗ್ರಾಮೀಣ ಜನರು ನಗರಗಳಿಗೆ ವಲಸೆ ಬರುತ್ತಿರುವುದರಿಂದ ನಗರಗಳು ತೀವ್ರವಾಗಿ ಬೆಳೆಯುತ್ತಿವೆ. ಆದ್ದರಿಂದ ಜನಸಂಖ್ಯೆ ಅಧ್ಯಯನದಲ್ಲಿ ವಲಸೆಯು ಮಹತ್ವದ ಅಧ್ಯಯನ ಕ್ಷೇತ್ರವಾಗಿದೆ. ಯಾವುದೇ ಸಮುದಾಯದ ಜನಸಂಖ್ಯೆ ಹೆಚ್ಚಾಗಲು, ಆ ಸಮಾಜದ ಹೆಚ್ಚು ಜನನದರ ಅಥವಾ ಒಳವಲಸೆ (immigration) ಕಾರಣವಾಗಿದೆ. ಇದೇ ಪ್ರಕಾರವಾಗಿ ಜನಸಂಖ್ಯೆ ಕಡಿಮೆ ಆಗಲು ಹೆಚ್ಚಿನ ಮರಣದರ ಅಥವಾ ಆ ಸಮಾಜದ ಹೆಚ್ಚಿನ ಜನರ ಹೊರವಲಸೆ (outmigration) ಕಾರಣವಾಗಿದೆ. ಯಾವುದೇ ಸಮಾಜದ ಜನಸಂಖ್ಯೆ ರಚನೆ ಹಾಗೂ ಗಾತ್ರದ ಬದಲಾವಣೆಗೆ ವಲಸೆಯು ಪ್ರಮುಖ ಕಾರಣವಾಗಿದೆ. ವಲಸೆಯ ಪ್ರತಿಕ್ರಿಯೆಯು ವಲಸಿಗರು ಬಿಟ್ಟು ಹೋಗುವ ಹಾಗೂ ಹೋಗಿ ನೆಲೆಸುವ ಸಮುದಾಯಗಳ ಮೇಲೆ ಪ್ರಭಾವ ಬೀರುತ್ತದೆ. ಸಾಮಾನ್ಯವಾಗಿ ಪುರುಷರು ಹೆಚ್ಚಾಗಿ ವಲಸೆಯ ಚಲನ-ವಲನಗಳಲ್ಲಿ ತೊಡಗುವುದರಿಂದ ನಗರ ಪ್ರದೇಶಗಳಲ್ಲಿ ಪುರುಷರ ಸಂಖ್ಯೆ ಹೆಚ್ಚಾಗುತ್ತದೆ.

ಸಾಮಾನ್ಯವಾಗಿ ವಲಸಿಗರು ಸಾಮಾನ್ಯ ಜನರಿಗಿಂತ ಭಿನ್ನವಾದ ಶೈಕ್ಷಣಿಕ, ಜನಸಂಖ್ಯಾಶಾಸ್ತ್ರೀಯ ಲಕ್ಷಣಗಳನ್ನು ಹೊಂದಿರುತ್ತಾರೆ. ಜನರು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ವಲಸೆ ಹೋಗುವಲ್ಲಿ ವಲಸಿಗರ ವಯಸ್ಸು, ಲಿಂಗ, ಆದಾಯ, ಶಿಕ್ಷಣ ಮುಂತಾದವು ಮಹತ್ವದ ಪಾತ್ರ ವಹಿಸುತ್ತವೆ. ಪ್ರಸ್ತುತ ಅಧ್ಯಾಯದಲ್ಲಿ ಗೋವೆಗೆ ವಲಸೆ ಬಂದು ವಿವಿಧ ಪ್ರದೇಶಗಳಲ್ಲಿ ನೆಲೆಸಿರುವ ವಿಜಾಪುರ ಜಿಲ್ಲೆಯ ನರಸಲಗಿ ತಾಂಡಾದ ವಲಸಿಗರ ನಮೂನೆ ಕುಟಂಬಗಳ ಮುಖ್ಯಸ್ಥರ ವಯಸ್ಸು, ಲಿಂಗ, ಆದಾಯ, ಶಿಕ್ಷಣ, ಉದ್ಯೋಗ ಮುಂತಾದವುಗಳನ್ನು ಚರ್ಚಿಸಿ ವಲಸಿಗರ ಸಾಮಾಜಿಕ-ಆರ್ಥಿಕ ಲಕ್ಷಣಗಳನ್ನು ತಿಳಿಯಲು ಪ್ರಯತ್ನಿಸಲಾಗಿದೆ.

**1. ವಯಸ್ಸು (AGE):**

ಸಾಮಾನ್ಯವಾಗಿ ವಲಸೆಯು ಜನರ ಜೀವನದ ಅಂತಿಮ ಹಂತವಾಗಿದೆ. ಜನ್ಮಸ್ಥಳದಲ್ಲಿ ಜೀವನ ಸಾಗಿಸಲು ಅಸಾಧ್ಯವಾದಾಗ ಬೇರೆ ಮಾರ್ಗತೋಚದೆ ಜನರು ನಗರ ಪ್ರದೇಶಗಳಿಗೆ ವಲಸೆಬರುತ್ತಾರೆ. ವಲಸೆಯ ಚಲನ-ವಲನಗಳಲ್ಲಿ ದುಡಿಯುವ ವಯಸ್ಸಿನವರು ಹೆಚ್ಚಾಗಿ ಕಂಡುಬರುತ್ತಾರೆ. zachariahರವರು

ಪ್ರಸಿದ್ಧ ಮುಂಬಯಿ ನಗರದ ವಲಸಿಗರ ಲಕ್ಷಣಗಳನ್ನು ಅಧ್ಯಯನ ಮಾಡುವಾಗ ಅವಲೋಕಿಸಿದಂತೆ "20 ರಿಂದ 34 ವರ್ಷ ವಯಸ್ಸಿನ ಪ್ರತಿಶತ 42.00ರಷ್ಟು ವಲಸಿಗರು ಸತತ 15 ವರ್ಷಗಳವರೆಗೆ ಕೇಂದ್ರಿಕರಿಸಿದ್ದರು. ಹಾಗೂ ಪ್ರತಿಶತ 80.00ರಷ್ಟು ವಲಸಿಗರು ತಮ್ಮ ದುಡಿಯುವ 15 ರಿಂದ 59 ವರ್ಷ ವಯಸ್ಸಿನವರಾಗಿದ್ದಾರೆ.[1] ಇದೇ ಪ್ರಕಾರವಾಗಿ Bogueರವರು ಗಮನಿಸಿದಂತೆ ಸಾಮಾನ್ಯ ಜನರಿಗಿಂತ ಹೆಚ್ಚಾಗಿ ತರುಣರು ತಮ್ಮ 20 ರಿಂದ 30 ವರ್ಷದ ದುಡಿಯುವ ವಯಸ್ಸಿನ ಅವಧಿಯಲ್ಲಿ ಹೆಚ್ಚಾಗಿ ಚಲಿಸುವವರಾಗಿದ್ದಾರೆ[2] ಎಂದು ಅಭಿಪ್ರಾಯಪಟ್ಟಿದ್ದಾರೆ. ನಮ್ಮ ಅಧ್ಯಯನದ ಪ್ರಕಾರ ಗೋವೆಗೆ ವಲಸೆ ಬಂದಿರುವ ನರಸಲಗಿ ತಾಂಡಾದ ಲಂಬಾಣಿ ವಲಸಿಗರ ವಯಸ್ಸಿನ ವಿವರವನ್ನು ಈ ಮುಂದಿನ ಕೋಷ್ಟಕದ ಸಹಾಯದಿಂದ ತಿಳಿಯಬಹುದು.

**ಕೋಷ್ಟಕ 35, ವಸಲಿಸಗರ ವಯೋ ಆಧಾರಿತ ಸಂಖ್ಯೆ ಮತ್ತು ಶೇಕಡವಾರು ಹಂಚಿಕೆ**

**(Number & percentage distribution of migrants by age)**

| ವಯಸ್ಸು | ಗಂಡು | | ಹೆಣ್ಣು | | ಒಟ್ಟು | |
|---|---|---|---|---|---|---|
| | ಸಂಖ್ಯೆ | ಪ್ರತಿಶತ | ಸಂಖ್ಯೆ | ಪ್ರತಿಶತ | ಸಂಖ್ಯೆ | ಪ್ರತಿಶತ |
| 20 ಕ್ಕಿಂತ ಕಡಿಮೆ | 10 | 18.18 | 0 | 0.00 | 10 | 16.67 |
| 21 ರಿಂದ 30 | 29 | 52.73 | 2 | 40.00 | 31 | 51.67 |
| 31 ರಿಂದ 40 | 11 | 20.00 | 1 | 20.00 | 12 | 20.00 |
| 41 + ಕ್ಕಿಂತ ಹೆಚ್ಚು | 5 | 9.09 | 2 | 40.00 | 7 | 11.67 |
| ಒಟ್ಟು | **55** | **100.00** | **5** | **100.00** | **60** | **100.00** |

ಮೇಲಿನ ಕೋಷ್ಟಕದ ಪ್ರಕಾರ ಒಟ್ಟು ಪುರುಷರಲ್ಲಿ ಪ್ರತಿಶತ 18.18ರಷ್ಟು ಪುರುಷರು 20 ವರ್ಷಗಳಿಗಿಂತ ಕಡಿಮೆ ವಯಸ್ಸಿನ ಗುಂಪಿಗೆ ಸೇರಿದ್ದಾರೆ. ಪ್ರತಿಶತ 52.73ರಷ್ಟು ಪುರುಷರು ಹಾಗೂ ಪ್ರತಿಶತ 40.00ರಷ್ಟು ಸ್ತ್ರೀಯರು 21 ರಿಂದ 30 ವರ್ಷ ವಯಸ್ಸಿನ ಗುಂಪಿಗೆ ಸೇರಿದವರಾಗಿದ್ದಾರೆ. ಪ್ರತಿಶತ 20.00ರಷ್ಟು ಪುರುಷರು ಹಾಗೂ ಸ್ತ್ರೀಯರು 31 ರಿಂದ 40 ವರ್ಷ ವಯಸ್ಸಿನ ಗುಂಪಿಗೆ ಸೇರಿದ್ದಾರೆ. ಪ್ರತಿಶತ 9.09ರಷ್ಟು ಪುರುಷರು ಹಾಗೂ ಪ್ರತಿಶತ 40.00ರಷ್ಟು ಸ್ತ್ರೀಯರು 41 ವಯಸ್ಸಿಗಿಂತ ಮೇಲ್ಪಟ್ಟ ವಯೋ ಗುಂಪಿಗೆ ಸೇರಿದ್ದಾರೆ. ವಲಸೆಗೂ ಮಧ್ಯಮ ವಯಸ್ಸಿಗೂ ಅನ್ಯೂನ್ಯ ಸಂಬಂಧವಿದೆ ಎಂಬುದು ಈ ಅಂಕಿ-ಅಂಶಗಳಿಂದ ಕಂಡುಬರುತ್ತದೆ. ವಿವಿಧ ಶಾಸ್ತ್ರಜ್ಞರು ವಲಸೆ ಕುರಿತು ಕೈಕೊಂಡ ಅಧ್ಯಯನಗಳಲ್ಲಿ

1. K.C. Zachariah: (1968) Migrants in greater Bombay, Asia Publishing house, Bombay, pg.80.
2. Bogue, D.J. 'International Migration' The study of Population houser p.m and Dumean O.D. (Ed) Chicago: The University of Chicago press, (1959).

ಕಂಡುಬರುವಂತೆ ನಮ್ಮ ಅಧ್ಯಯನದಲ್ಲಿಯೂ, 15 ರಿಂದ 30 ವರ್ಷ ವಯಸ್ಸಿನ ದುಡಿಯುವ ಸಾಮರ್ಥ್ಯವುಳ್ಳವರು ಹೆಚ್ಚಾಗಿ ವಲಸೆ ಬಂದಿದ್ದಾರೆ.

**2. ವಲಸಿಗರ ಲಿಂಗರಚನೆ (Sex composition of the migratnts):**

ವಲಸೆಯು ಸಾಹಸದ ಕೆಲಸವಾಗಿರುವುದರಿಂದ ವಲಸೆಯಲ್ಲಿ ಹೆಚ್ಚಾಗಿ ಪುರುಷರು ಕಂಡುಬರುತ್ತಾರೆ. ಅಶಿಷ್‌ಬೋಸ್ ಎಂಬ ಶಾಸ್ತ್ರಜ್ಞನ ಪ್ರಕಾರ ಸಾಮಾನ್ಯವಾಗಿ ಗ್ರಾಮದಿಂದ ಗ್ರಾಮಕ್ಕೆ ನಡೆಯುವ ವಲಸೆಯಲ್ಲಿ ಪುರುಷರು ಹೆಚ್ಚಾಗಿ ಕಂಡುಬರುವಂತೆ ಗ್ರಾಮ-ನಗರ ವಲಸೆಯಲ್ಲಿಯೂ ಸಮ ಪ್ರಮಾಣದಲ್ಲಿ ಕಂಡುಬರುತ್ತಾರೆ ಎಂದು ಅಭಿಪ್ರಾಯ ಪಟ್ಟಿದ್ದಾರೆ. ಮುಂದುವರಿದು ಭಾರತದ ವಿವಿಧ ಭಾಗಗಳಲ್ಲಿ ಹೊರಗ್ರಾಮದ ವಿವಾಹ ಪದ್ಧತಿ ಜಾರಿಯಲ್ಲಿರುವುದರಿಂದ, ವೈವಾಹಿಕ ವಲಸೆಯಲ್ಲಿ ಸ್ತ್ರೀಯರು ಹೆಚ್ಚಾಗಿ ಕಂಡುಬರುತ್ತಾರೆ. ಹಾಗೂ 'ಸರಿ ಸಮದಾಂಪತ್ಯ ವಲಸೆ' (associational migration) ಅಂದರೆ ವಲಸೆ ಹೋಗುವ ತಮ್ಮ ಗಂಡಂದಿರ ಜೊತೆ ಸೇರಿ ಸ್ತ್ರೀಯರು ವಲಸೆ ಹೋಗುತ್ತಾರೆ. ಆರ್ಥಿಕ ಕಾರಣಗಳು ಮಹಿಳೆಯರ ವಲಸೆಗೆ ಅಷ್ಟೊಂದು ಮಹತ್ವವಾಗಿಲ್ಲ. ಭಾರತ ಹಾಗೂ ಇತರ ಬೃಹತ್ ನಗರ ಪ್ರದೇಶಗಳ ಒಟ್ಟು ಮಹಿಳಾ ವಲಸೆಗಾರರಲ್ಲಿ ಕೂಲಿಕಾರ ಮಹಿಳೆಯರ ಸಂಖ್ಯೆ ಬಹಳ ಕಡಿಮೆ ಇದೆ. ಹಾಗೂ ಕಡಿಮೆ ಅಂತರದ ವಲಸೆಯಲ್ಲಿ ಹೆಚ್ಚಾಗಿ ಸ್ತ್ರೀಯರು ಕಂಡುಬರುತ್ತಾರೆಂದು ಅಭಿಪ್ರಾಯ ಪಟ್ಟಿದ್ದಾರೆ.[3] ವಲಸೆಯ ಚಲನ-ವಲನಗಳಲ್ಲಿ ಹೆಚ್ಚಾಗಿ ಪುರುಷರು ಕಂಡುಬರುತ್ತಾರೆ. ನಮ್ಮ ಅಧ್ಯಯನದ ಪ್ರಕಾರ ನರಸಲಗಿ ತಾಂಡಾದ ವಲಸಿಗರ ಲಿಂಗರಚನೆಯನ್ನು ಈ ಮುಂದಿನ ಕೋಷ್ಟಕದ ಸಹಾಯದಿಂದ ತಿಳಿದುಕೊಳ್ಳಬಹುದು.

**ಕೋಷ್ಟಕ 36, ವಲಸಿಗರ ಲಿಂಗ ಆಧಾರಿತ ಸಂಖ್ಯೆ ಮತ್ತು ಶೇಕಡವಾರು ಹಂಚಿಕೆ**

**(Number & percentage distribution of migrants by sex)**

| ಲಿಂಗ | ಸಂಖ್ಯೆ | ಪ್ರತಿಶತ |
|---|---|---|
| ಗಂಡು | 55 | 91.67 |
| ಹೆಣ್ಣು | 5 | 8.33 |
| ಒಟ್ಟು | **60** | **100.00** |

ಮೇಲಿನ ಕೋಷ್ಟಕದ ಪ್ರಕಾರ ಪ್ರತಿಶತ 91.67ರಷ್ಟು ಪುರುಷರು, ಹಾಗೂ ಕೇವಲ ಪ್ರತಿಶತ 8.33ರಷ್ಟು ಸ್ತ್ರೀಯರು ಗೋವೆಗೆ ವಲಸೆ ಬಂದಿದ್ದು ಹೆಚ್ಚಾಗಿ ಪುರುಷರು ವಲಸೆ ಬಂದಿದ್ದಾರೆ. ಪ್ರತಿಶತ 8.33ರಷ್ಟು ಕುಟುಂಬಗಳಲ್ಲಿ ಪುರುಷರು ಇಲ್ಲದಿರುವುದರಿಂದ ವಿಧವೆಯರು, ವಿಚ್ಛೇದಿತ ಸ್ತ್ರೀಯರು ವಲಸೆ ಬಂದಿದ್ದಾರೆ. ಪ್ರತಿಶತ 46.67ರಷ್ಟು ಕುಟುಂಬಗಳಲ್ಲಿ ಸ್ತ್ರೀಯರು ತಮ್ಮ ಗಂಡಂದಿರ ಹಿಂದೆ ವಲಸೆ ಬಂದಿದ್ದಾರೆ. ಒಟ್ಟು

3. Ashish Bose: (1973) 'Studies in India's Urbanisation: 1901-1971, Tata Mcgraw-Hill Publishing Co. Ltd,. Bombay, Pg. 146.

ವಲಸೆ ಬಂದವರಲ್ಲಿ ಸ್ತ್ರೀಯರಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ಪುರುಷರು ವಲಸೆ ಬಂದಿದ್ದಾರೆ. ಉದಾಹರಣೆಗೆ ಸಂಗತಿ 36ರ ಕುಟುಂಬದ ಸದಸ್ಯರು ಗೋವೆಗೆ 1998 ರಿಂದ ಸತತವಾಗಿ ವಲಸೆ ಬರುತ್ತಿದ್ದು, ಇವರು ವೃದ್ಧ ತಂದೆ ತಾಯಿಯರನ್ನೂ, ತಮ್ಮ ಪತ್ನಿಯರನ್ನು, ಸ್ವ-ಸ್ಥಳಗಳಲ್ಲಿ ಬಿಟ್ಟು 4 ಜನ ಸಹೋದರರು ಮಾತ್ರ ವಲಸೆ ಬಂದು ಪಣಜಿಯಿಂದ ಸುಮಾರು 15 ಕಿ.ಮೀ. ದೂರದಲ್ಲಿರುವ ಬಾಣಸ್ತರಿ ಗ್ರಾಮದ ಹತ್ತಿರದ ಬೆಟ್ಟದ ಮೇಲೆ ಕಲ್ಲು ಅಗೆಯುವ ಕಠಿಣವಾದ ಕೂಲಿ ಕೆಲಸದಲ್ಲಿ ತೊಡಗಿದ್ದಾರೆ.

### 3. ವೈವಾಹಿಕ ಸ್ಥಿತಿಗತಿ (Marital status):

ಭಾರತದಲ್ಲಿ ಗ್ರಾಮೀಣ ಸಮುದಾಯದಿಂದ ನಗರಗಳಿಗೆ ನಡೆಯುವ ವಲಸೆಯಲ್ಲಿ ಸಾಮಾನ್ಯವಾಗಿ ಅವಿವಾಹಿತ ದುಡಿಯುವ ವಯಸ್ಸಿನ ಯುವಕರು ಕಂಡುಬರುತ್ತಾರೆ. ವಿವಾಹದ ನಂತರ ಪುರುಷರಿಗೆ ಕುಟುಂಬ ನೋಡಿಕೊಳ್ಳುವ ಜವಾಬ್ದಾರಿಯಿರುವುದರಿಂದ ಹೆಚ್ಚಾಗಿ ಅವಿವಾಹಿತ ಯುವಕರು ವಲಸೆ ಹೋಗುತ್ತಾರೆ. ನಮ್ಮ ಅಧ್ಯಯನದ ಪ್ರಕಾರ ನರಸಲಗಿ ತಾಂಡಾದ ಲಂಬಾಣಿ ವಲಸಿಗರ ವೈವಾಹಿಕ ಸ್ಥಿತಿ-ಗತಿಯನ್ನು ಮುಂದಿನ ಕೋಷ್ಟಕದಿಂದ ತಿಳಿಯಬಹುದು.

**ಕೋಷ್ಟಕ 37 ವಲಸಿಗರ ವೈವಾಹಿಕ ಸ್ಥಿತಿ-ಗತಿಗಳಿಗೆ ಅನುಗುಣವಾದ ಸಂಖ್ಯೆ ಮತ್ತು ಶೇಕಡವಾರು ಹಂಚಿಕೆ**

**(Number & percentage distribution of migrants by Marital status)**

| ವೈವಾಹಿಕ ಸ್ಥಿತಿ-ಗತಿ | ಗಂಡು | | ಹೆಣ್ಣು | | ಒಟ್ಟು | |
|---|---|---|---|---|---|---|
| | ಸಂಖ್ಯೆ | ಪ್ರತಿಶತ | ಸಂಖ್ಯೆ | ಪ್ರತಿಶತ | ಸಂಖ್ಯೆ | ಪ್ರತಿಶತ |
| ಅವಿವಾಹಿತರು | 23 | 41.81 | 1 | 20.00 | 24 | 40.00 |
| ವಿವಾಹಿತರು | 32 | 58.18 | 1 | 20.00 | 33 | 55.00 |
| ವಿಧವೆಯರು | 0 | 0.00 | 1 | 20.00 | 1 | 1.67 |
| ವಿಚ್ಛೇದಿತರು | 0 | 0.00 | 2 | 40.00 | 2 | 3.33 |
| **ಒಟ್ಟು** | **55** | **100.00** | **5** | **100.00** | **60** | **100.00** |

ಮೇಲಿನ ಕೋಷ್ಟಕದ ಪ್ರಕಾರ ಪ್ರತಿಶತ 40.00ರಷ್ಟು ಅವಿವಾಹಿತರು, ಪ್ರತಿಶತ 55.00ರಷ್ಟು ವಿವಾಹಿತರು, ಪ್ರತಿಶತ 1.67ರಷ್ಟು ವಿಧವೆಯರು ಹಾಗೂ ಪ್ರತಿಶತ 3.33ರಷ್ಟು ವಿಚ್ಛೇದಿತರು ಗೋವೆಗೆ ವಲಸೆ ಬಂದಿದ್ದಾರೆ. ಇವರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ವಿವಾಹಿತರು ವಲಸೆ ಬಂದು ಮೊದಲ ಸ್ಥಾನ ಪಡೆದಿದ್ದಾರೆ. ಎರಡನೆಯ ಸ್ಥಾನವನ್ನು ಅವಿವಾಹಿತರು ಪಡಿದಿದ್ದಾರೆ. ಮೂರನೆಯ ಸ್ಥಾನವನ್ನು ವಿಚ್ಛೇದಿತರು ಹಾಗೂ ಕೊನೆಯದಾಗಿ ನಾಲ್ಕುನೆಯ ಸ್ಥಾನವನ್ನು ವಿಧವೆಯರು ಪಡೆದಿದ್ದಾರೆ. ಮೇಲಿನ ಅಂಕಿ-ಅಂಶಗಳ ಪ್ರಕಾರ ಹೆಚ್ಚಿನ ಸಂಖ್ಯೆಯ ಲಂಬಾಣಿಗರು ತಮ್ಮ ಕುಟುಂಬ ಸಮೇತ ವಲಸೆ ಬರಲು ಆರ್ಥಿಕ ಅಂಶಗಳು ಕಾರಣವಾಗಿವೆ. ತಮ್ಮ ಹೆಂಡತಿ ಮಕ್ಕಳನ್ನು ಕೂಲಿ ಕೆಲಸಕ್ಕೆ ಹಚ್ಚಿ ಹೆಚ್ಚು ಹಣ ಸಂಪಾದಿಸಲು ಲಂಬಾಣಿಗರು ಹೆಂಡತಿ-ಮಕ್ಕಳಿಗೆ ಗೋವೆಗೆ ಕರೆದುಕೊಂಡು ಬಂದಿದ್ದಾರೆ.

4. ವಲಸಿಗರ ಶೈಕ್ಷಣಿಕ ಅರ್ಹತೆಗಳು (Educationl qualifications of the migrants):

ಆಧುನಿಕ ಕಾಲದಲ್ಲಿ ಶಿಕ್ಷಣವು ಪ್ರತಿಯೊಬ್ಬರಿಗೆ ಅತ್ಯವಶ್ಯಕವಾಗಿದೆ. ವ್ಯಕ್ತಿ ತನ್ನ ನಾಗರಿಕತ್ವದ ಹಕ್ಕುಗಳನ್ನು, ಆರ್ಥಿಕ ಅವಕಾಶಗಳನ್ನು ತಿಳಿಯಲು ಒಳ್ಳೆಯ ಉದ್ಯೋಗ ಪಡೆಯಲು, ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ವಲಸೆ ಹೋಗುವಲ್ಲಿ ಶಿಕ್ಷಣವು ಮಹತ್ವದ ಪಾತ್ರ ವಹಿಸುತ್ತದೆ. ಗ್ರಾಮಗಳಲ್ಲಿ ಶಿಕ್ಷಣ ಪಡೆದ ಪಧವೀದರರಿಗೆ ಅವರ ಅರ್ಹತೆಗೆ ತಕ್ಕ ಉದ್ಯೋಗಗಳು ಸಿಗುವುದಿಲ್ಲ ಆದ್ದರಿಂದ ಶಿಕ್ಷಣ ಪಡೆದ ಯುವಕರು ನಗರ ಪ್ರದೇಶಗಳಿಗೆ ಉದ್ಯೋಗಕ್ಕಾಗಿ ವಲಸೆ ಬರುತ್ತಾರೆ. ನಮ್ಮ ಅಧ್ಯಯನದ ಪ್ರಕಾರ ಗೋವೆಗೆ ವಲಸೆ ಬಂದಿರುವ ನರಸಲಗಿ ತಾಂಡಾದ ಲಂಬಾಣಿಗರ ಶೈಕ್ಷಣಿಕ ಅರ್ಹತೆಗಳನ್ನು ಮುಂದಿನ ಕೋಷ್ಮಕದ ಸಹಾಯದಿಂದ ನೋಡಬಹುದು.

**ಕೋಷ್ಮಕ 38, ವಲಸಿಗರ ಶೈಕ್ಷಣಿಕ ಸ್ಥಿತಿ-ಗತಿಗಳಿಗೆ ಅನುಗುಣವಾದ ಸಂಖ್ಯೆ ಮತ್ತು ಶೇಕಡವಾರು ಹಂಚಿಕೆ**

**(Number & percentage distribution of migrants by education)**

| ಶಿಕ್ಷಣ | ಗಂಡು | | ಹೆಣ್ಣು | | ಒಟ್ಟು | |
|---|---|---|---|---|---|---|
| | ಸಂಖ್ಯೆ | ಪ್ರತಿಶತ | ಸಂಖ್ಯೆ | ಪ್ರತಿಶತ | ಸಂಖ್ಯೆ | ಪ್ರತಿಶತ |
| ಅನಕ್ಷರಸ್ಥರು | 23 | 41.82 | 4 | 80.00 | 27 | 45.00 |
| ಪ್ರಾಥಮಿಕ ಶಿಕ್ಷಣ | 18 | 32.73 | 1 | 20.00 | 19 | 31.67 |
| ಮಾಧ್ಯಮಿಕ ಶಿಕ್ಷಣ | 12 | 21.82 | 0 | 0.00 | 12 | 20.00 |
| ಕಾಲೇಜು ಶಿಕ್ಷಣ | 2 | 3.64 | 0 | 0.00 | 2 | 3.33 |
| ಒಟ್ಟು | **55** | **100.00** | **5** | **100.00** | **60** | **100.00** |

ಮೇಲಿನ ಕೋಷ್ಟಕದ ಪ್ರಕಾರ ಪ್ರತಿಶತ 45.00ರಷ್ಟು ಮಾಹಿತಿದಾರರು ಅನಕ್ಷರಸ್ಥರು, ಪ್ರತಿಶತ 31.67ರಷ್ಟು ಮಾಹಿತಿದಾರರು ಪ್ರಾಥಮಿಕ ಶಿಕ್ಷಣ, ಪ್ರತಿಶತ 20.00ರಷ್ಟು ಮಾಹಿತಿದಾರರು ಮಾಧ್ಯಮಿಕ ಶಿಕ್ಷಣ ಹಾಗೂ ಪ್ರತಿಶತ 3.33ರಷ್ಟು ಮಾಹಿತಿದಾರರು ಕಾಲೇಜು ಶಿಕ್ಷಣ ಪಡೆದಿದ್ದಾರೆ. ಇವರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಅನಕ್ಷರಸ್ಥರು ಹಾಗೂ ಪ್ರಾಥಮಿಕ ಹಂತದ ಶಿಕ್ಷಣ ಪಡೆದವರು ಗೋವೆಗೆ ವಲಸೆ ಬಂದಿದ್ದಾರೆ. ಗೋವೆಯಲ್ಲಿ ಅಶಿಕ್ಷಿತ ಕೂಲಿಕಾರರಿಗೆ ಹೆಚ್ಚಿನ ಬೇಡಿಕೆ ಇರುವುದರಿಂದ ಅನಕ್ಷರಸ್ಥ ಕೂಲಿಕಾರರು ಹೆಚ್ಚಿನ ಸಂಖ್ಯೆಯಲ್ಲಿ ವಲಸೆ ಬಂದಿದ್ದಾರೆ. ಎ.ಕೆ.ಗುಪ್ತಾರವರು ಕೈಕೊಂಡ 'Migration of Agricultural Labourers from Eastern to North-western region' ಎಂಬ ಸಂಶೋಧನಾ ಅಧ್ಯಯನದಲ್ಲಿಯೂ, ಪ್ರತಿಶತ 76.6ರಷ್ಟು ವಲಸಿಗರು ಅನಕ್ಷರಸ್ಥರಾಗಿದ್ದಾರೆ.[4] ಆದ್ದರಿಂದ ವಲಸೆಯಲ್ಲಿ

4. A.K.Gupta: Migration of Agricultural Labourers from Eastern to North- Western region - 'Social Change', vol-21 No.3, Sept-3, (1991), Pg.85.

ಶಿಕ್ಷಣದ ಅವಶ್ಯಕತೆ ಅಷ್ಟೊಂದು ಕಂಡುಬರುವುದಿಲ್ಲ. ವಿವಿಧ ಅಧ್ಯಯನಗಳ ಪ್ರಕಾರ ಶಿಕ್ಷಣ, ಪರಿಣಿತಿ ಇಲ್ಲದವರಿಗೆ ಕಡಿಮೆ ಕೂಲಿ, ಉದ್ಯೋಗವಕಾಶಗಳು ಕಡಿಮೆ ಲಭಿಸುತ್ತವೆ. ಆದರೆ ಇದಕ್ಕೆ ಅಪವಾದವೆಂಬಂತೆ ಗೋವೆಯಲ್ಲಿ ಅವಿದ್ಯಾವಂತರಿಗೂ, ಹೆಚ್ಚಿನ ಉದ್ಯೋಗವಕಾಶಗಳು, ಹೆಚ್ಚಿನ ಕೂಲಿ ಸಿಗುತ್ತದೆ. ಆದ್ದರಿಂದ ಅಶಿಕ್ಷಿತ ಲಂಬಾಣಿಗರು ಹೆಚ್ಚಿನ ಸಂಖ್ಯೆಯಲ್ಲಿ ವಲಸೆ ಬಂದಿದ್ದಾರೆ.

**5. ಕುಟುಂಬದ ಗಾತ್ರ (Size of the family):**

ಕುಟುಂಬವು ಸಾರ್ವತ್ರಿಕವಾದ ಸಾಮಾಜಿಕ ಸಂಸ್ಥೆಯಾಗಿದೆ. ಎಲ್ಲಾ ಪ್ರದೇಶಗಳಲ್ಲಿ ಜನಾಂಗಗಳಲ್ಲಿ ಕಂಡು ಬರುತ್ತದೆ. ಲಂಬಾಣಿಗರಲ್ಲಿ ಅವಿಭಕ್ತ ಕುಟುಂಬಗಳು ಪ್ರಚಲಿತವಾಗಿವೆ. ಆದರೆ ಇತ್ತೀಚಿನ ದಿನಗಳಲ್ಲಿ ಅವಿಭಕ್ತ ಕುಟುಂಬ ಬದಲಾವಣೆಯಾಗಿ ಚಿಕ್ಕ ಕುಟುಂಬಗಳಾಗುತ್ತಿವೆ. ಗೋವೆಗೆ ವಲಸೆ ಬಂದು ನೆಲೆಸಿರುವ ಬಹುತೇಕ ಲಂಬಾಣಿಗರು ಚಿಕ್ಕ ಕುಟುಂಬಗಳನ್ನು ಹೊಂದಿದ್ದಾರೆ. ಹೆಚ್ಚಿನ ವಿವರವನ್ನು ಮುಂದಿನ ಕೋಷ್ಟಕದ ಸಹಾಯದಿಂದ ತಿಳಿಯಬಹುದು.

**ಕೋಷ್ಟಕ 39, ವಲಸಿಗರ ಕುಟುಂಬದ ಗಾತ್ರ, ಲಿಂಗ ಆಧಾರಿತ ಸಂಖ್ಯೆ ಮತ್ತು ಶೇಕಡವಾರು ಹಂಚಿಕೆ**

**(Number & percentage distribution of migrants by family size & sex)**

| ಕುಟುಂಬದ ಗಾತ್ರ | ಗಂಡು | | ಹೆಣ್ಣು | | ಒಟ್ಟು | |
|---|---|---|---|---|---|---|
| | ಸಂಖ್ಯೆ | ಪ್ರತಿಶತ | ಸಂಖ್ಯೆ | ಪ್ರತಿಶತ | ಸಂಖ್ಯೆ | ಪ್ರತಿಶತ |
| ಶೂನ್ಯ ಬಿಂದು | 2 | 3.33 | 27 | 45.00 | 0 | 0.00 |
| ಒಂದು | 32 | 53.33 | 8 | 13.33 | 26 | 43.33 |
| 2 ರಿಂದ 3 | 22 | 36.67 | 25 | 41.67 | 17 | 28.33 |
| 4 ರಿಂದ 5 | 4 | 6.67 | 0 | 0.00 | 12 | 20.00 |
| 6 ಕ್ಕಿಂತ ಹೆಚ್ಚು | 0 | 0.00 | 0 | 0.00 | 5 | 8.33 |
| **ಒಟ್ಟು** | **60** | **100.00** | **60** | **100.00** | **60** | **100.00** |

ಮೇಲಿನ ಕೋಷ್ಟಕದ ಪ್ರಕಾರ ಪ್ರತಿಶತ 3.33ರಷ್ಟು ಕುಟುಂಬಗಳಲ್ಲಿ ಪುರುಷರು ಕಂಡುಬರುವುದಿಲ್ಲ. ಕೇವಲ ಸ್ತ್ರೀಯರು ಮಾತ್ರ ವಾಸವಾಗಿದ್ದಾರೆ. ಹಾಗೂ ಪ್ರತಿಶತ 45.00ರಷ್ಟು ಕುಟುಬಂಗಳಲ್ಲಿ ಕೇವಲ ಪುರುಷರು ವಾಸವಾಗಿದ್ದಾರೆ. ಪ್ರತಿಶತ 53.33ರಷ್ಟು ಕುಟುಂಬಗಳಲ್ಲಿ ಒಬ್ಬ ಪುರುಷ ಹಾಗೂ ಪ್ರತಿಶತ 13.33ರಷ್ಟು ಕುಟುಂಬಗಳಲ್ಲಿ ಒಬ್ಬ ಸ್ತ್ರೀ ಇದ್ದಾರೆ. ಪ್ರತಿಶತ 36.67ರಷ್ಟು ಕುಟುಂಬಗಳಲ್ಲಿ 2 ರಿಂದ 3 ಜನರು ಪುರುಷರು ಹಾಗೂ ಪ್ರತಿಶತ 41.67ರಷ್ಟು ಕುಟುಂಬಗಳಲ್ಲಿ 2 ರಿಂದ 3 ಜನರು ಸ್ತ್ರೀಯರಿದ್ದಾರೆ. ಪ್ರತಿಶತ 6.67ರಷ್ಟು ಕುಟುಂಬಗಳಲ್ಲಿ 4 ರಿಂದ 5 ಜನರು ಪುರುಷರಿದ್ದಾರೆ. ಸ್ತ್ರೀಯರು ಕಂಡುಬರುವುದಿಲ್ಲ.

ಹಾಗೂ ಪ್ರತಿಶತ 8.33ರಷ್ಟು ಕುಟುಂಬಗಳಲ್ಲಿ 6ಕ್ಕಿಂತ ಹೆಚ್ಚು ಸದಸ್ಯರಿದ್ದಾರೆ. ಹೆಚ್ಚಿನ ಸಂಖ್ಯೆಯ ಲಂಬಾಣಿಗರು ತಮ್ಮ ಹಂಡತಿ ಮಕ್ಕಳೊಂದಿಗೆ ವಲಸೆ ಬಂದಿದ್ದು, ಕುಟುಂಬಗಳಲ್ಲಿ ಸಂಪಾದಿಸುವ ಸದಸ್ಯರ ಸಂಖ್ಯೆ ಹೆಚ್ಚಿದೆ. ಪ್ರತಿಶತ 73.33ರಷ್ಟು ಕುಟುಂಬಗಳಲ್ಲಿ ಅವಲಂಬಿತ ಸದಸ್ಯರು ಕಂಡುಬರುವುದಿಲ್ಲ. ಪ್ರತಿಶತ 13.33ರಷ್ಟು ಕುಟುಂಬಗಳಲ್ಲಿ 1 ರಿಂದ 2, ಪ್ರತಿಶತ 8.33ರಷ್ಟು ಕುಟುಂಬಗಳಲ್ಲಿ 3 ರಿಂದ 4, ಪ್ರತಿಶತ 5.00ರಷ್ಟು ಕುಟುಂಬಗಳಲ್ಲಿ 5ಕ್ಕಿಂತ ಹೆಚ್ಚು ಅವಲಂಬಿತ ಸದಸ್ಯರಿದ್ದಾರೆ.

**6. ಮಾಹಿತಿದಾರರ ಉದ್ಯೋಗ (Occupation of the respondents):**

ವಲಸೆಯಲ್ಲಿ ಉದ್ಯೋಗವು ಬಹಳ ಮಹತ್ವದ ಪಾತ್ರ ವಹಿಸುತ್ತದೆ. ತಂತ್ರಜ್ಞಾನ ಹಾಗೂ ಔದ್ಯೋಗಿಕರಣದ ಪ್ರಭಾವದಿಂದ ಉದ್ಯೋಗಗಳಲ್ಲಿ ಬದಲಾವಣೆಗಳಾಗುತ್ತಿವೆ. ನಗರ ಪ್ರದೇಶದ ಉದ್ಯೋಗಗಳಿಗೆ ಪರಿಣಿತಿ, ಶಿಕ್ಷಣ, ತರಬೇತಿ ಅವಶ್ಯವಾಗಿದೆ. ನಮ್ಮ ಅಧ್ಯಯನದ ಪ್ರಕಾರ ನರಸಲಗಿ ತಾಂಡಾದ ಲಂಬಾಣಿಗರ ಗೋವೆಯಲ್ಲಿಯ ಉದ್ಯೋಗದ ಮಾಹಿತಿಯನ್ನು ಮುಂದಿನ ಕೋಷ್ಟಕದ ಸಹಾಯದಿಂದ ತಿಳಿದುಕೊಳ್ಳಬಹುದು.

**ಕೋಷ್ಟಕ 40, ವಲಸಿಗರು ವಲಸೆ ಹೋದ ಸ್ಥಳದಲ್ಲಿಯ ಉದ್ಯೋಗ ಆಧಾರಿತ ಸಂಖ್ಯೆ ಮತ್ತು ಶೇಕಡವಾರು ಹಂಚಿಕೆ (Number & percentage distribution of migrants by occupation at destination)**

| ಉದ್ಯೋಗಗಳು | ಗಂಡು | | ಹೆಣ್ಣು | | ಒಟ್ಟು | |
|---|---|---|---|---|---|---|
| | ಸಂಖ್ಯೆ | ಪ್ರತಿಶತ | ಸಂಖ್ಯೆ | ಪ್ರತಿಶತ | ಸಂಖ್ಯೆ | ಪ್ರತಿಶತ |
| ಕೂಲಿ | 28 | 50.91 | 1 | 20.00 | 29 | 48.33 |
| ಹೊಟೇಲು ಹಾಗೂ ಬೇಕರಿ ಸಹಾಯಕರು | 9 | 16.36 | 0 | 0.00 | 9 | 15.00 |
| ಡ್ರೈವರ್ ಹಾಗೂ ಕ್ಲೀನರ್ | 8 | 14.55 | 0 | 0.00 | 8 | 13.33 |
| ವ್ಯಾಪಾರ ವಹಿವಾಟು | 4 | 7.27 | 0 | 0.00 | 4 | 6.67 |
| ಮೀನು ಹಿಡಿಯುವವರು | 5 | 9.09 | 0 | 0.00 | 5 | 8.33 |
| ಗೃಹ ಕೆಲಸಗಳು | 0 | 0.00 | 4 | 80.00 | 4 | 6.67 |
| ಇತರೆ ಉದ್ಯೋಗಗಳನ್ನು ಮಾಡುವವರು | 1 | 1.82 | 0 | 0.00 | 1 | 1.67 |
| ಒಟ್ಟು | **55** | **100.00** | **5** | **100.00** | **60** | **100.00** |

ಮೇಲಿನ ಕೋಷ್ಟಕದ ಪ್ರಕಾರ ಪ್ರತಿಶತ 48.33ರಷ್ಟು ಮಾಹಿತಿದಾರರು ಕೂಲಿ ಕೆಲಸಗಳಲ್ಲಿ ತೊಡಗಿದ್ದಾರೆ. ಪ್ರತಿಶತ 15.00ರಷ್ಟು ಮಾಹಿತಿದಾರರು ಹೋಟೇಲು ಹಾಗೂ ಬೇಕರಿಗಳಲ್ಲಿ ಸಹಾಯಕರಾಗಿ, ಪ್ರತಿಶತ 13.33ರಷ್ಟು ಮಾಹಿತಿದಾರರು ಲಾರಿ ಡ್ರೈವರ್-ಕ್ಲೀನರ್‌ರಾಗಿ, ಪ್ರತಿಶತ 6.67ರಷ್ಟು ಮಾಹಿತಿದಾರರು ಬಿಜನೆಸ್, ಪ್ರತಿಶತ 8.33ರಷ್ಟು ಮಾಹಿತಿದಾರರು ಮೀನು ಹಿಡಿಯುವುದು, ಪ್ರತಿಶತ 6.67ರಷ್ಟು

ಮಾಹಿತಿದಾರರು ಗೃಹಕೃತ್ಯದ ಕೆಲಸಗಲ್ಲಿ ಹಾಗೂ ಪ್ರತಿಶತ 1.67ರಷ್ಟು ಮಾಹಿತಿದಾರರು ಮಾದಕ ಪದಾರ್ಥಗಳನ್ನು ಮಾರಾಟ ಮಾಡುವುದು ಹಾಗೂ ಇತರೆ ಉದ್ಯೋಗಗಳಲ್ಲಿ ತೊಡಗಿದ್ದಾರೆ.

ಮೇಲಿನ ಅಂಕಿ-ಅಂಶಗಳ ಪ್ರಕಾರ ಹೆಚ್ಚಿನ ಸಂಖ್ಯೆಯಲ್ಲಿ ಲಂಬಾಣಿಗರು ಕೆಳಮಟ್ಟದ ಕೂಲಿ ಕೆಲಸಗಳಲ್ಲಿ ತೊಡಗಿದ್ದು ಕಂಡುಬರುತ್ತದೆ. ವಲಸೆ ಬರುವುದಕ್ಕಿಂತ ಮೊದಲು ಹೆಚ್ಚಿನ ಸಂಖ್ಯೆಯಲ್ಲಿ ಕೂಲಿ ಹಾಗೂ ಒಕ್ಕಲುತನದಲ್ಲಿ ತೊಡಗಿದ್ದ ಲಂಬಾಣಿಗರು ಗೋವೆಗೆ ವಲಸೆ ಬಂದು ತಮ್ಮ ಉದ್ಯೋಗದಲ್ಲಿ ಬದಲಾವಣೆ ಮಾಡಿಕೊಂಡಿದ್ದಾರೆ. ಉದಾಹರಣಗೆ: ಸಂಗತಿ, ಸಂಖ್ಯೆ 60 ರಲ್ಲಿಯ ಯುವಕ 2003 ರಿಂದ ಸ್ವಸ್ಥಳದಲ್ಲಿ ಬರಗಾಲವಿರುವುದರಿಂದ, ಕೃಷಿಕಾರ್ಯಗಳಲ್ಲಿ ಕೆಲಸಗಳು ನಿಂತು ಹೋಗಿ ಗೋವೆಗೆ ವಲಸೆ ಬಂದು ವಾಸ್ಕೋನಗರದಲ್ಲಿ ಮೀನಿನ ಬಲೆ ಎಳೆಯುವ ಉದ್ಯೋಗ ಮಾಡುತ್ತಿದ್ದಾನೆ. ಈತನು ತಾಂಡಾದಲ್ಲಿ ಕೃಷಿ ಕಾರ್ಯದಲ್ಲಿ ತೊಡಗಿದ್ದನು. ಗೋವೆಯಲ್ಲಿ ಬಂದು ತನ್ನ ಉದ್ಯೋಗ ಬದಲಾಯಿಸಿಕೊಂಡಿದ್ದನ್ನು ಗಮನಿಸಬಹುದು.

## 7. ವಲಸಿಗರ ಕುಟುಂಬದ ಮಾಸಿಕ ಆದಾಯ (Monthly household income of the migrants)

ಒಬ್ಬ ವ್ಯಕ್ತಿಯ ನಿರ್ದಿಷ್ಟ ಆದಾಯ ತಿಳಿಯುವುದು ಬಹಳ ಸೂಕ್ಷ್ಮ ವಿಷಯವಾಗಿದೆ. ಕೂಲಿಕಾರರ ಆದಾಯವು ನಿರಂತರವಾಗಿ ಬರುವುದಿಲ್ಲ. ಆದ್ದರಿಂದ ಅವರ ಆದಾಯ ಕಂಡುಹಿಡಿಯುವುದು ಬಹಳ ಕ್ಲಿಷ್ಟಕರವಾದ ಸಂಗತಿಯಾಗಿದೆ. ನಮ್ಮ ಅಧ್ಯಯನದ ನಮೂನೆ ಕುಟುಂಬಗಳಲ್ಲಿ ಹೆಚ್ಚಿನ ಸಂಖ್ಯೆಯ ಮಾಹಿತಿದಾರರು ಕೂಲಿಕೆಲಸಗಳಲ್ಲಿ ತೊಡಗಿದ್ದು ಅವರ ಕುಟುಂಬದ ಎಲ್ಲಾ ಮೂಲಗಳಿಂದ ಬರುವ ಒಟ್ಟು ಆದಾಯವನ್ನು ಮುಂದಿನ ಕೋಷ್ಟಕದ ಸಹಾಯದಿಂದ ನೋಡಬಹುದು.

**ಕೋಷ್ಟಕ 41, ವಲಸಿಗರ ಕುಟುಂಬದ ಮಾಸಿಕ ಆದಾಯ ಆಧಾರಿತ ಸಂಖ್ಯೆ ಮತ್ತು ಶೇಕಡವಾರು ಹಂಚಿಕೆ (Number & percentage distribution of migrants by monthly household income)**

| ಕುಟುಂಬದ ಮಾಸಿಕ ಆದಾಯ | ಸಂಖ್ಯೆ | ಪ್ರತಿಶತ |
|---|---|---|
| ರೂ. 3000 ಕ್ಕಿಂತ ಕಡಿಮೆ | 17 | 28.33 |
| ರೂ. 3001-5000 | 22 | 36.67 |
| ರೂ. 5001-8000 | 9 | 15.00 |
| ರೂ. 8001+ | 12 | 20.00 |
| ಒಟ್ಟು | **60** | **100.00** |

ಮೇಲಿನ ಕೋಷ್ಟಕದಿಂದ ಸ್ಪಷ್ಟವಾಗಿ ಕಂಡುಬರುವುದೇನೆಂದರೆ ಪ್ರತಿಶತ 28.33ರಷ್ಟು ಮಾಹಿತಿದಾರರು ತಿಂಗಳಿಗೆ 3,000 ರೂಪಾಯಿಗಿಂತ ಕಡಿಮೆ ಆದಾಯ ಹೊಂದಿದ್ದಾರೆ. ಪ್ರತಿಶತ 36.67ರಷ್ಟು ಮಾಹಿತಿದಾರರು

3001 ರಿಂದ 5000 ರೂಪಾಯಿಗಳವರೆಗೆ, ಪ್ರತಿಶತ 15.00ರಷ್ಟು ಮಾಹಿತಿದಾರರು 5001 ರಿಂದ 8000 ರೂಪಾಯಿಗಳವರೆಗೆ ಪ್ರತಿಶತ 20.00ರಷ್ಟು ಮಾಹಿತಿದಾರರು 8001ಕ್ಕಿಂತ ಹೆಚ್ಚು ಆದಾಯವನ್ನು ಹೊಂದಿದ್ದಾರೆ. ಮೇಲಿನ ಅಂಕಿ-ಅಂಶಗಳ ಪ್ರಕಾರ ಹೆಚ್ಚಿನ ಸಂಖ್ಯೆಯ ಮಾಹಿತಿದಾರರು ಕಡಿಮೆ ಆದಾಯ ಹೊಂದಿದ್ದಾರೆ.

**8. ಉಳಿತಾಯ ಮತ್ತು ಹಣದ ಸ್ಥಳಾಂತರ (Savings and money transfers):**

ಲಂಬಾಣಿಗರು ಆರ್ಥಿಕವಾಗಿ ಮುಂದುವರಿಯುವ ಆಸೆ-ಆಕಾಂಕ್ಷೆಗಳನಿಟ್ಟು, ಗೋವೆಗೆ ವಲಸೆ ಬಂದಿದ್ದಾರೆ. ಅವರು ಕಷ್ಟಪಟ್ಟು ಗಳಿಸುವ ಹಣವನ್ನು ಹೆಚ್ಚಾಗಿ ದುಂದುವೆಚ್ಚ ಮಾಡುವುದಿಲ್ಲ. ತಮ್ಮ ಉಳಿತಾಯದ ಹಣದಲ್ಲಿ ಪ್ರತಿಶತ 11.67ರಷ್ಟು ಲಂಬಾಣಿಗರು ಗೋವೆಯಲ್ಲಿ ಆಸ್ತಿ ಖರೀದಿಸಿದ್ದಾರೆ. ವಿವರವನ್ನು ಮುಂದಿನ ಕೋಷ್ಟಕದ ಸಹಾಯದಿಂದ ನೋಡಬಹುದು.

**ಕೋಷ್ಟಕ 42, ವಲಸಿಗರು ಗೋವೆಯಲ್ಲಿ ಖರೀದಿಸಿದ ಆಸ್ತಿಯ ವಿವರ ಆಧಾರಿತ ಸಂಖ್ಯೆ ಮತ್ತು ಶೇಕಡವಾರು ಹಂಚಿಕೆ (Number & percentage of migrants who purchased property in Goa by type of property)**

| ಆಸ್ತಿಯ ವಿವರ | ಸಂಖ್ಯೆ | ಪ್ರತಿಶತ |
|---|---|---|
| ಭೂಮಿ ಮತ್ತು ಮನೆ | 1 | 14.28 |
| ಭೂಮಿ | 3 | 42.86 |
| ಡಿಸೆಲ್ ಟ್ಯಾಂಕರ್ | 1 | 14.28 |
| ಆಟೋರಿಕ್ಷಾ | 2 | 28.58 |
| **ಒಟ್ಟು** | **7** | **100.00** |

ಮೇಲಿನ ಕೋಷ್ಟಕದ ಪ್ರಕಾರ ಪ್ರತಿಶತ 14.28ರಷ್ಟು ಮಾಹಿತಿದಾರರು ಭೂಮಿ ಹಾಗೂ ಮನೆ, ಪ್ರತಿಶತ 42.86ರಷ್ಟು ಮಾಹಿತಿದಾರರು ಭೂಮಿ, ಪ್ರತಿಶತ 14.28ರಷ್ಟು ಮಾಹಿತಿದಾರರರು ಡಿಸೇಲ್ ಟ್ಯಾಂಕರ್, ಪ್ರತಿಶತ 28.58ರಷ್ಟು ಮಾಹಿತಿದಾರರು ಆಟೋರಿಕ್ಷಾ ಖರೀದಿಸಿದ್ದಾರೆ. ಉದಾಹರಣೆಗೆ: ಸಂಗತಿ; 9ರಲ್ಲಿಯ ಮಾಹಿತಿದಾರನ ವಯಸ್ಸು 37, ಒಬ್ಬ ಶ್ರೀಮಂತರ ಮನೆಯಲ್ಲಿ 1980 ರಿಂದ ಈವರೆಗೆ ಗೃಹ ಕೆಲಸದಲ್ಲಿ ತೊಡಗಿದ್ದಾರೆ. ಮಾಲಿಕರು ಇವರನ್ನು ತಮ್ಮ ಕುಟುಂಬದ ಸದಸ್ಯರಂತೆ ನೋಡಿಕೊಳ್ಳುತ್ತಾರೆ. ಇವರು ತಿಂಗಳಿಗೆ 3000 ಸಾವಿರ ರೂಪಾಯಿ ಸಂಬಳ ಹಾಗೂ ಉಚಿತ ಊಟ, ವಸತಿ, ಸೌಕರ್ಯ ಪಡಿಯುತ್ತಿದ್ದಾರೆ. ವರ್ಷದ ಎಲ್ಲಾ ದಿನಗಳಲ್ಲಿಯೂ ಇವರು ಗೋವೆಯಲ್ಲಿಯೇ ಇರುತ್ತಿದ್ದು ಯಾವಾಗಾದರೊಮ್ಮೆ ಸ್ವಸ್ಥಳಕ್ಕೆ ಭೇಟಿ ಕೊಡುತ್ತಾರೆ. ಇವರು ಗೋವೆಯಲ್ಲಿ ತಮ್ಮ ಸಂಪಾದನೆಯಿಂದ ಎರಡು ಎಕರೆ ಭೂಮಿ ಹಾಗೂ 3 ಪ್ರತ್ಯೇಕ ಚಿಕ್ಕ ಚಿಕ್ಕ ಕೋಣೆಯ ಮನೆ ಖರೀದಿಸಿ ಬಾಡಿಗೆ ಕೊಟ್ಟಿದ್ದಾರೆ. ಸ್ವಸ್ಥಳದಲ್ಲಿಯೂ ಮನೆ ಹಾಗೂ ಭೂಮಿ ಖರೀದಿಸಿದ್ದಾರೆ. ಇವರ ಒಟ್ಟು ಆಸ್ತಿಯ ಮೌಲ್ಯ ಸುಮಾರು 8 ಲಕ್ಷ ರೂಪಾಯಿ,

ಮುಂದಿನ ದಿನಗಳಲ್ಲಿ ಗೋವೆಯಲ್ಲಿ ಶಾಸ್ವತ ಇರಲು ಅವಕಾಶಗಳು ದೊರೆಯದಿದ್ದರೆ ಮೂಲ ಸ್ಥಳಕ್ಕೆ ಹಿಂತಿರುಗಿ ಹೋಗುವ ಉದ್ದೇಶದಿಂದ ಜನ್ಮ ಸ್ಥಳದಲ್ಲಿಯೂ ಆಸ್ತಿ ಖರೀದಿಸಿದ್ದಾರೆ.

ಕೆಲವು ಲಂಬಾಣಿಗರು ತಾವು ಸಂಪಾದಿಸುವ ಹಣವನ್ನು ಬ್ಯಾಂಕುಗಳಲ್ಲಿ ಇಡಲು ಇಷ್ಟಪಡುವುದಿಲ್ಲ ಹಣವನ್ನು ಸ್ವಸ್ಥಳಗಳಲ್ಲಿರುವ ಕುಟುಂಬದ ಸದಸ್ಯರಿಗೆ ಕಳುಹಿಸಿಕೊಡುತ್ತಾರೆ. ಉದಾಹರಣಗೆ: ಸಂಗತಿ, 46ರಲ್ಲಿಯ ಕುಟುಂಬದ ಯುವಕ 1997 ರಿಂದ ತನ್ನ ಕುಟುಂಬ ಸಮೇತ ಗೋವೆಗೆ ವಲಸೆ ಬರುತ್ತಿದ್ದು ಫಣಜಿನಗರದ ಸಮೀಪವಿರುವ ಬಾಣಸ್ತರಿ ಗ್ರಾಮದಲ್ಲಿ ಕೂಲಿ ಕೆಲಸದಲ್ಲಿ ತೊಡಗಿದ್ದಾನೆ. ಈತನು ಹೆಚ್ಚು ವೇಳೆ ಕೆಲಸಮಾಡಿ ತಿಂಗಳಿಗೆ ಸುಮಾರು 6000 ರೂಪಾಯಿ ಕೂಲಿ ಪಡಿಯುತ್ತಾನೆ. ಇವನು ಹೇಳುವಂತೆ ಅವರ ಉಳಿತಾಯದ ಹಣ ಬ್ಯಾಂಕುಗಳಲ್ಲಿ ಇಟ್ಟರೆ, ಅದು ಕೆಲಸಕೊಟ್ಟ ಮಾಲಿಕರಿಗೆ ಗೊತ್ತಾಗಿ ನಮ್ಮ ಕೂಲಿ ಕಡಿಮೆ ಮಾಡಬಹುದು. ಆದ್ದರಿಂದ ಹಣವನ್ನು ಜನ್ಮಸ್ಥಳದಲ್ಲಿರುವ ಕುಟುಂಬದ ಸದಸ್ಯರಿಗೆ ಕಳುಹಿಸಿಕೊಡುತ್ತೇವೆ ಎಂದು ಪ್ರತಿಕ್ರಿಯೆ ನೀಡಿದ್ದಾನೆ.

**9. ಉದ್ಯೋಗ ಒದಗಿಸುವ ಯಜಮಾನನಿಂದ ಕೊಡಮಾಡಲ್ಪಡುವ ಸೌಕರ್ಯಗಳು (Facilities offered by the employer)**

ಸಾಮಾನ್ಯವಾಗಿ ಕೂಲಿಕಾರರು ಅವರು ಮಾಡುವ ಉದ್ಯೋಗಳಿಗೆ ಪ್ರತಿಯಾಗಿ ಕೂಲಿಯ ಜೊತೆಗೆ ಕೆಲವು ಸೌಲಭ್ಯಗಳನ್ನು ಪಡೆಯುತ್ತಾರೆ. ಉದಾಹರಣೆಗೆ ವಿಜಾಪುರ ಜಿಲ್ಲೇಯಲ್ಲಿ ಜೀತದಾಳುಗಳು ಕೂಲಿಯ ಜೊತೆಗೆ ಮಾಲಿಕರಿಂದ ವಸತಿ ಸೌಕರ್ಯ, ಊಟ, ಬೀಡಿ, ಎಲೆ-ಅಡಿಕೆ, ಹಾಸಿಗೆ-ಹೊದಿಕೆ, ತಂಬಾಕು ಮುಂತಾದ ಸೌಕರ್ಯಗಳನ್ನು ಪಡೆಯುತ್ತಾರೆ. ಇದೇ ಪ್ರಕಾರವಾಗಿ ಗೋವೆಗೆ ವಲಸೆ ಬಂದಿರುವ ಲಂಬಾಣಿಗರು ತಾವು ಮಾಡುವ ಕೆಲಸಗಳಿಗೆ ಪ್ರತಿಯಾಗಿ ಕೂಲಿ ಪಡೆಯುವುದರ ಜೊತೆಗೆ ವಸತಿ ಸೌಕರ್ಯ, ಉಪಹಾರ ಮತ್ತು ಊಟ, ವೈದ್ಯಕೀಯ ಸೌಕರ್ಯಗಳನ್ನು ಪಡಿಯುತ್ತಾರೆ.

**1. ವಸತಿ ಸೌಕರ್ಯ :**

ಲಂಬಾಣಿ ಕೂಲಿಕಾರರಿಗೆ ಕೆಲಸ ಮಾಡುವ ಹತ್ತಿರದ ಪ್ರದೇಶದಲ್ಲಿ ಬಾಡಿಗೆರಹಿತ ವಸತಿ ಸೌಯರ್ಕಗಳನ್ನು ಕೆಲಸಕೊಟ್ಟ ಮಾಲಿಕರು ನೀಡಿದ್ದಾರೆ. ಇಂತಹ ಸೌಕರ್ಯಗಳಿರುವುದರಿಂದ ಹೆಚ್ಚಿನ ಸಂಖ್ಯೆಯಲ್ಲಿ ಕೂಲಿಕಾರರು ವಲಸೆ ಬರುತ್ತಾರೆ. ವಾಸ್ಕೋನಗರದ ಆದರ್ಶ ಹೋಟೇಲು, ಗೋಮ್ಸ ಬೇಕರಿಯಲ್ಲಿ ಸಹಾಯಕರಾಗಿ ಕೆಲಸ ಮಾಡುತ್ತಿರುವ ನರಸಲಗಿ ತಾಂಡಾದ ಯುವಕರು ಹಾಗೂ ಶ್ರೀಮಂತರ ಮನೆಯಲ್ಲಿ ಗೃಹ ಕೆಲಸ-ಕಾರ್ಯ ಮಾಡುತ್ತಿರುವ ಸ್ತ್ರೀಯರು, ಕೂಲಿಕಾರರು, ಉಚಿತ ವಸತಿ ಸೌಕರ್ಯಗಳನ್ನು ಪಡೆಯುತ್ತಿದ್ದಾರೆ. ಉದಾಹರಣೆಗಾಗಿ ಫಣಜಿಪಟ್ಟಣದಿಂದ ಸುಮಾರು 15 ಕಿ.ಮೀ. ದೂರದಲ್ಲಿರುವ ಬಾಣಸ್ತರಿ ಗ್ರಾಮದ ಹತ್ತಿರ ಬೆಟ್ಟದ ಮೇಲ್ಭಾಗದಲ್ಲಿ ಕಲ್ಲು ಅಗೆಯುವ ಕೆಲಸದಲ್ಲಿ ನರಸಲಗಿ ತಾಂಡಾದ ಲಂಬಾಣಿಗರು ನಿರತರಾಗಿದ್ದಾರೆ. ಇವರಿಗೆ ಕೆಲಸ ಮಾಡುವ ಹತ್ತಿರದ ಪ್ರದೇಶದಲ್ಲಿ ಧರ್ಮಾಬೊಮಕಾರ ಎಂಬ ಕಾಂಟ್ರ್ಯಾಕ್ಟರ್ 20 ಗುಡಿಸಲುಗಳನ್ನು ನಿರ್ಮಿಸಿ ಉಚಿತ ವಸತಿ ಸೌಕರ್ಯಗಳನ್ನು ಒದಗಿಸಿದ್ದಾನೆ. ಇಲ್ಲಿ ನೀರು, ವಿದ್ಯುತ್, ವೈದ್ಯಕೀಯ, ಸೌಕರ್ಯಗಳನ್ನು ಕಲ್ಪಿಸಲಾಗಿದೆ. ಆದರೆ ಬೋಟಿನಲ್ಲಿ ಕೆಲ

ಮಾಡುವವರು, ಡ್ರೈವರ್, ಗೌಂಡಿಗಳು, ತರಕಾರಿ ವ್ಯಾಪಾರಿಗಳು ಮುಂತಾದವರು ಉಚಿತ ವಸತಿ ಸೌಕರ್ಯಗಳನ್ನು ಪಡೆಯುತ್ತಿಲ್ಲ.

**2. ಆಹಾರದ ಸೌಕರ್ಯಗಳು :**

ಉದ್ಯೋಗ ಕೊಟ್ಟ ಮಾಲಿಕರು ಲಂಬಾಣಿಗರಿಗೆ ಹೊಂದುವ ಉಚಿತ ಆಹಾರ ಒದಗಿಸುತ್ತಿದ್ದಾರೆ. ಲಂಬಾಣಿಗರು ತಮಗೆ ಹೊಂದುವ ಆಹಾರವನ್ನು ಪಡೆಯುತ್ತಿರುವುದರಿಂದ ತೃಪ್ತಿ ಹೊಂದಿದ್ದಾರೆ. ಹೋಟೇಲು ಹಾಗೂ ಬೇಕರಿಗಳಲ್ಲಿ ಸಹಾಯಕರಾಗಿ ಕೆಲಸ ಮಾಡುತ್ತಿರುವವರು, ಗೃಹ ಕೆಲಸ-ಕಾರ್ಯಗಳಲ್ಲಿ ತೊಡಗಿರುವವರು ಉಚಿತ ಆಹಾರ ಸೌಕರ್ಯಗಳನ್ನು ಪಡೆಯುತ್ತಿದ್ದಾರೆ. ಉದಾಹರಣೆಗೆ: ಸಂಗತಿ: 2ರ ಕುಟುಂಬದಲ್ಲಿಯ ಸದಸ್ಯ ವಾಸ್ಕೋನಗರದ ಆದರ್ಶ ಹೋಟೇಲಿನಲ್ಲಿ ಅಡುಗೆ ತಯಾರಿಸುವವರಿಗೆ ಸಹಾಯಕನಾಗಿ ಕೆಲಸ ಮಾಡುತ್ತಿರುವ ಗೋಕುಲ ಎಂಬ ನರಸಲಗಿ ತಾಂಡಾದ ಯುವಕ 2002ರಲ್ಲಿ ಗೋವೆಗೆ ಬಂದು ನೆಲೆಸಿದ್ದು, ಈತನು ಹೋಟೇಲಿನಲ್ಲಿ ಉಚಿತ ಬಿರಿಯಾನಿ, ಮೀನಿನ ಫ್ರೈಗಳಂತಹ ಆಹಾರ ಪಡೆಯುತ್ತಿದ್ದಾನೆ. ಮಾಲಿಕರು ಒದಗಿಸುವ ಆಹಾರ ಲಂಬಾಣಿಗರ ಆಹಾರ ಅಭ್ಯಾಸಗಳಿಗೆ ಹೋಲುತ್ತದೆ. ಆದ್ದರಿಂದ ಇಂತಹ ಸೌಕರ್ಯಗಳಿಂದ ಯುವಕ ತೃಪ್ತಿ ಹೊಂದಿದ್ದಾಗಿ ಹೇಳುತ್ತಾನೆ.

**3. ವೈದ್ಯಕೀಯ ಸೌಕರ್ಯಗಳು :**

ಮಾನವನ ಮೂಲಭೂತ ಬೇಡಿಕೆಗಳಲ್ಲಿ ವೈದ್ಯಕೀಯ ಸೌಲಭ್ಯಗಳೂ ಒಂದಾಗಿದೆ. ಜನರು ಆರೋಗ್ಯ ಕಾಪಾಡಿಕೊಳ್ಳಲು, ಆರ್ಥಿಕವಾಗಿ ಮುಂದುವರಿಯಲು ವೈದ್ಯಕೀಯ ಸೌಕರ್ಯಗಳು ಅತ್ಯವಶ್ಯಕವಾಗಿವೆ. ಅನಾರೋಗ್ಯದಿಂದ ಬಳಲುವ ವ್ಯಕ್ತಿ ಆರ್ಥಿಕವಾಗಿ ಮುಂದುವರಿಯಲು ಸಾಧ್ಯವಾಗುವುದಿಲ್ಲ. ಆಧುನಿಕ ವೈದ್ಯಕೀಯ ಸೌಕರ್ಯಗಳು ದುಬಾರಿಯಾಗಿರುವುದರಿಂದ ಸಾಮಾನ್ಯ ಜನರಿಗೆ ಇಂತಹ ಸೌಕರ್ಯಗಳನ್ನು ಪಡೆಯಲು ಸಾಧ್ಯವಾಗುವುದಿಲ್ಲ. ನಮ್ಮ ಅಧ್ಯಯನದ ಪ್ರಕಾರ ಕೂಲಿ ಕೆಲಸಕ್ಕಾಗಿ ವಲಸೆ ಬಂದಿರುವ ಲಂಬಾಣಿಗರಿಗೆ ಕೆಲಸಕೊಟ್ಟ ಮಾಲೀಕರು ಉಚಿತ ವೈದ್ಯಕೀಯ ಸೌಕರ್ಯಗಳನ್ನು ಒದಗಿಸಿದ್ದಾರೆ. ವಾರಕ್ಕೊಮ್ಮೆ ಕೂಲಿಕಾರರು ವಾಸವಾಗಿರುವ ಪ್ರದೇಶಕ್ಕೆ ಸ್ಥಳೀಯ ಸರ್ಕಾರಿ ವೈದ್ಯಾಧಿಕಾರಿಗಳು ಬಂದು ಕೂಲಿಕಾರರ ಆರೋಗ್ಯ ವಿಚಾರಿಸಿಕೊಂಡು ಹೋಗುವಂತೆ ಮಾಲಿಕರು ಕ್ರಮ ಕೈಕೊಂಡಿದ್ದಾರೆ. ಕೆಲಸದ ಸ್ಥಳಗಳಲ್ಲಿ ಏನಾದರು ಅನಾಹುತಗಳಾದರೆ ಅದರ ಖರ್ಚನ್ನು ಮಾಲಿಕರು ಭರಿಸುತ್ತಾರೆ. ಉದಾಹರಣೆಗೆ: ಸಂಗತಿ; 22ರ ಕುಟುಂಬ 2004ರಲ್ಲಿ ಗೋವೆಗೆ ಬಂದು ಬಾಣಸ್ತರಿ ಗ್ರಾಮದ ಹತ್ತಿರದ ಬೆಟ್ಟದಲ್ಲಿ ಕಲ್ಲು ಅಗೆಯುವ ಕೆಲಸದಲ್ಲಿ ತೊಡಗಿದ್ದಾರೆ. ಇವರ ಕುಟುಂಬದ ಸದಸ್ಯರಿಗೆ ಕಲ್ಲು ಒಡೆಯುವಾಗ ಸಿಡಿಮದ್ದು ಸಿಡಿಸಿದ್ದರಿಂದ ಕಲ್ಲು ಕಾಲಿಗೆ ಬಡಿದು ಕಾಲು ಮುರಿದಿದ್ದು ಆಸ್ಪತ್ರೆಯ ಖರ್ಚನ್ನು ಕೆಲಸ ಕೊಟ್ಟ ಮಾಲಿಕ ಧರ್ಮಾಬೊಮಕಾರ ಅವರು ಭರಿಸಿದ್ದಾರೆ ಹಾಗೂ ಇದಕ್ಕೆ ಪರಿಹಾರ ನೀಡಿದ್ದಾರೆ. ಇದೇ ಪ್ರಕಾರವಾಗಿ ಹೋಟೇಲುಗಳಲ್ಲಿ ಸಹಾಯಕರಾಗಿ ಕೆಲಸ ಮಾಡುವವರಿಗೆ ಮಾಲಿಕರು ಉಚಿತ ಆರೋಗ್ಯ ಸೌಕರ್ಯ ಕಲ್ಪಿಸಿದ್ದಾರೆ. ಉದಾಹರಣೆಗೆ: ಸಂಗತಿ, 9ರ ಕುಟುಂಬದ ಸದಸ್ಯ ವಾಸ್ಕೋನಗರದ ಆದರ್ಶ ಹೋಟೇಲಿನಲ್ಲಿ 1987 ರಿಂದ ಸಪ್ಲೈಯರ್ ಆಗಿ ಕೆಲಸ ಮಾಡುತ್ತಿದ್ದು, ಇವನ ಆಸ್ಪತ್ರೆಯ ಖರ್ಚುವೆಚ್ಚಗಳನ್ನು ಹೋಟೇಲು ಮಾಲಿಕರು ನೋಡಿಕೊಳ್ಳುತ್ತಾರೆ. ಈ ಯುವಕನ ರಕ್ತದ ಗುಂಪನ್ನು ಪರೀಕ್ಷಿಸಿ ಹೋಟೇಲಿನ

'ಆರೋಗ್ಯವಹಿ'ಯಲ್ಲಿ ದಾಖಲಿಸಿಕೊಂಡಿದ್ದಾರೆ. ಇಂತಹ ಸೌಕರ್ಯಯಗಳಿಂದ ಲಂಬಾಣಿಗರು ತೃಪ್ತಿ ಹೊಂದಿದ್ದಾರೆ.

**10. ಉದ್ಯೋಗ ತೃಪ್ತಿ :**

ಸಮಾಜದಲ್ಲಿ ಪ್ರತಿಯೊಬ್ಬ ವ್ಯಕ್ತಿ ತನ್ನ ಅರ್ಹತೆ ಹಾಗೂ ಸ್ಥಾನ-ಮಾನಗಳಿಗೆ ತಕ್ಕೆ ಉದ್ಯೋಗ ಮಾಡಲು ಬಯಸುತ್ತಾನೆ. ಉದ್ಯೋಗದ ಆಧಾರದ ಮೇಲೆ ವ್ಯಕ್ತಿಯ ಸ್ಥಾನಮಾನಗಳು ನಿರ್ಧರಿಸಲ್ಪಡುತ್ತವೆ. ಆದ್ದರಿಂದ ವ್ಯಕ್ತಿ ಯಾವಾಗಲೂ ಸಮಾಜದಲ್ಲಿ ಒಳ್ಳೆಯ ಉದ್ಯೋಗ ಪಡೆಯಲು ಬಯಸುತ್ತಾನೆ. ಕೆಳಮಟ್ಟದ ಉದ್ಯೋಗ ಮಾಡುವವರಲ್ಲಿ ಕೀಳರಿಮೆಯ ಹಾಗೂ ಪ್ರತ್ಯೇಕತೆಯ ಭಾವನೆ ಬೆಳಯಲು ಕಾರಣವಾಗುತ್ತದೆ. ಇದನ್ನೇ ಆಸ್ಕರ್ ಲಿವೀಸ್‌ರವರು 'ಬಡನದ ಸಂಸ್ಕೃತಿ' ಎಂದು ಕರೆದಿದ್ದಾರೆ.[5] ಕಡಿಮೆ ಕೂಲಿದರ, ಸೌಲಭ್ಯಗಳಿಲ್ಲದೇ ಇರುವುದು ಮುಂತಾದವುಗಳಿಂದ ಕೂಲಿಕಾರರು ತೃಪ್ತಿಹೊಂದುವುದಿಲ್ಲ ಹಾಗೂ ಆರ್ಥಿಕ ಸಮಸ್ಯೆಗಳಿಂದ ಮುಖ್ಯ ಸಮಾಜದಲ್ಲಿ ಭಾವಹಿಸುವುದಿಲ್ಲ ಉದ್ಯೋಗ ತೃಪ್ತಿ ಒಂದು ಬಗೆಯ ಸಕಾರಾತ್ಮಕ ಪ್ರತಿಫಲವಾಗಿದೆ. ಕೆಲವರು ಹೆಚ್ಚು ಕೂಲಿ, ಮಾಲಿಕರು ಒದಗಿಸುವ ಸೌಕರ್ಯಗಳಿಂದ ಉದ್ಯೋಗ ತೃಪ್ತಿಪಟ್ಟರೆ ಮತ್ತೆ ಕೆಲವರು ಅವರ ಶೈಕ್ಷಣಿಕ ಅರ್ಹತೆಗೆ ತಕ್ಕ ಉದ್ಯೋಗ ದೊರೆಯುವುದರಿಂದ ಉದ್ಯೋಗ ತೃಪ್ತಿ ಪಡೆಯುತ್ತಾರೆ. ವ್ಯಕ್ತಿಯ ಉದ್ಯೋಗ ಅವನ ಸಾಮಾಜಿಕ ಜೀವನದ ಮೇಲೆ ಪರಿಣಾಮ ಬೀರುತ್ತದೆ. ಉನ್ನತ ಮಟ್ಟದ ಉದ್ಯೋಗಗಳಲ್ಲಿ ತೊಡಗಿದವರಿಗೆ ಸಮಾಜದಲ್ಲಿ ಉನ್ನತ ಸ್ಥಾನಮಾನಗಳು ದೊರೆತರೆ, ಕೆಳಮಟ್ಟದ ಉದ್ಯೋಗ ಮಾಡುವವರಿಗೆ ಕೆಳಮಟ್ಟದ ಸ್ಥಾನ-ಮಾನಗಳು ದೊರೆಯುತ್ತವೆ. ಉನ್ನತ ಶಿಕ್ಷಣ ಪಡೆದವರು ಕಡಿಮೆ ದರ್ಜೆಯ ಉದ್ಯೋಗ ಪಡೆದರೆ ಉದ್ಯೋಗ ತೃಪ್ತಿ ಹೊಂದುವುದಿಲ್ಲ. ಶೈಕ್ಷಣಿಕ ಅರ್ಹತೆಗೆ ತಕ್ಕ ಉದ್ಯೋಗ ದೊರೆತರೆ ಮಾತ್ರ ಉದ್ಯೋಗದಲ್ಲಿ ತೃಪ್ತಿ ಪಡೆಯುತ್ತಾರೆ. ಕೆಲವರು ಮಾಲಿಕರಿಂದ ಮುಂಗಡ ಹಣ ಪಡೆಯುವುದರಿಂದ, ಉತ್ತಮ ದುಡಿಯುವ ಸ್ಥಿತಿಗತಿಗಳು, ಜವಾಬ್ದಾರಿಗಳು ಮುಂತಾದವುಗಳಿಂದಲೂ ಉದ್ಯೋಗ ತೃಪ್ತಿ ಹೊಂದುತ್ತಾರೆ.

ನಮ್ಮ ಅಧ್ಯಯನದ ಪ್ರಕಾರ ನರಸಲಗಿ ತಾಂಡಾದ ಪ್ರತಿಶತ 58.33ರಷ್ಟು ಮಾಹಿತಿದಾರರು ತಾವು ಮಾಡುವ ಉದ್ಯೋಗಗಳಿಂದ ತೃಪ್ತಿ ಹೊಂದಿದ್ದಾರೆ. ಆದರೆ ಪ್ರತಿಶತ 41.67ರಷ್ಟು ಮಾಹಿತಿದಾರರು ತಾವು ಮಾಡುತ್ತಿರುವ ಉದ್ಯೋಗದಿಂದ ತೃಪ್ತಿ ಹೊಂದಿಲ್ಲ. ಬಹುಶಃ ಇದಕ್ಕೆ ಉದ್ಯೋಗಗಳಲ್ಲಿ ಮಾಡಿಕೊಂಡ ಬದಲಾವಣೆ ಕಾರಣವಾಗಿದೆ. ಉದ್ಯೋಗ ತೃಪ್ತಿ ಹೊಂದದವರಿಗೆ ಯಾರಾರು ಎಂತಹ ಉದ್ಯೋಗ ಮಾಡಲು ಬಯಸುವಿರಿ? ಎಂದು ಕೇಳಿದ ಪ್ರಶ್ನೆಗೆ ಪ್ರತಿಶತ 20.00ರಷ್ಟು ಮಾಹಿತಿದಾರರು ಸರ್ಕಾರಿ ಸೇವೆ ಮಾಡುವ, ಪ್ರತಿಶತ 36.00ರಷ್ಟು ಮಾಹಿತಿದಾರರು ನೀರಾವರಿ ಸೌಲಭ್ಯ ಕಲ್ಪಿಸಿಕೊಟ್ಟರೆ ಒಕ್ಕಲುತನ ಮಾಡುವ, ಪ್ರತಿಶತ 44.00ರಷ್ಟು ಮಾಹಿತಿದಾರರು ವ್ಯಾಪಾರ ವಹಿವಾಟು ಮಾಡುವ ಆಸೆ-ಆಕಾಂಕ್ಷೆಗಳನ್ನು ಹೊಂದಿದ್ದಾರೆ. ಉದಾಹರಣೆಗೆ: ಸಂಗತಿ 1ರ ಕುಟುಂಬದ ತಾರಾಸಿಂಗ ರಾಠೋಡ ಎಂಬ ಯುವಕ 2002 ರಿಂದ ಗೋವೆಗೆ ವಲೆಸೆ ಬರುತ್ತಿದ್ದು, ಈತನು ಸ್ವಸ್ಥಳದಲ್ಲಿ ಕೃಷಿ ಕಾರ್ಯಗಳಲ್ಲಿ ತೊಡಗಿದ್ದನು.

5. Oscar Lewis, 'The Culture of Poverty' in the understanding Poverty-Daniel P.Moynihan (Ed) Basic Books (New york: 1969) Pg.187.

ಬರಗಾಲದಿಂದ ನೀರಾವರಿ ಸೌಲಭ್ಯಗಳು ದೊರೆಯುತ್ತಿಲ್ಲವಾದ್ದರಿಂದ ಗೋವೆಗೆ ಬಂದು ತನ್ನ ಇಚ್ಛೇಗೆ ವಿರುದ್ಧವಾದ, ಸಮುದ್ರದಲ್ಲಿ ಮೀನಿನ ಬಲೆ ಎಳೆಯುವ ಕೆಲಸ ಮಾಡುತ್ತಿದ್ದಾನೆ. ನೀರಾವರಿಯ ಸೌಲಭ್ಯ ದೊರಕಿಸಿ ಕೊಟ್ಟರೆ ಒಕ್ಕಲುತನ ಮಾಡುವುದಾಗಿ ಹೇಳಿದ್ದಾನೆ.

**11. ಗೋವೆಯಲ್ಲಿ ನೆಲೆಸಿದ ಕಾಲಾವಧಿ (Duration of stay in goa)**

ಔದ್ಯೋಗಿಕರಣ, ತೀವ್ರನಗರೀಕರಣ, ರವಾನಿಸುವಿಕೆಯ ಸೌಕರ್ಯಗಳು ಮುಂತಾದವುಗಳಿಂದ ಹೆಚ್ಚಿನ ಸಂಖ್ಯೆಯಲ್ಲಿ ಹಳ್ಳಿಯ ಜನರು ಪಟ್ಟಣಗಳಿಗೆ ವಲಸೆ ಬರುವಂತೆ ಮಾಡಿವೆ. ಆರ್ಥಿಕವಾಗಿ ಹಿಂದುಳಿದ ಲಂಬಾಣಿ ಸಮುದಾಯದ ಜನರು ಗೋವೆ ವಿಮೋಚನೆಗೊಂಡ ನಂತರದ ಅವಧಿಯಲ್ಲಿ ಸೃಷ್ಠಿಯಾದ ಉದ್ಯೋಗಾವಕಾಶಗಳಿಗೆ ಆಕರ್ಶಿತರಾಗಿ ಸತತವಾಗಿ ವಲಸೆ ಬಂದು ಹೆಚ್ಚು ಅವಧಿಯವರೆಗೆ ನೆಲೆಸಿರುವುದರಿಂದ ಒಳ್ಳೆಯ ಔದ್ಯೋಗಿಕ ಕೌಶಲ್ಯಗಳನ್ನು ಹೊಂದಿದ್ದಾರೆ. ಉದಾಹರಣೆಗೆ ಬೆಟ್ಟಗಳಿಂದ ಕಲ್ಲು ಅಗೆಯುವ, ಸಮುದ್ರದಲ್ಲಿ ಮೀನಿನ ಬಲೆ ಎಳೆಯುವಂತಹ, ಕಠಿಣ ಉದ್ಯೋಗಗಳಲ್ಲಿ ಹೆಚ್ಚಾಗಿ ಲಂಬಾಣಿಗರು ತೊಡಗಿದ್ದಾರೆ. ಇಂತಹ ಉದ್ಯೋಗಗಳಲ್ಲಿ ಕೌಶಲ್ಯತೆ ಪಡೆದಿದ್ದರಿಂದ ಲಂಬಾಣಿ ಕೂಲಿಕಾರರಿಗೆ ಗೋವೆಯಲ್ಲಿ ಹೆಚ್ಚಿನ ಬೇಡಿಕೆ ಇದೆ. ಆದ್ದರಿಂದ ಇವರು ಸತತವಾಗಿ ಗೋವೆಗೆ ವಲಸೆ ಬರುತ್ತಿದ್ದಾರೆ. ನಮ್ಮ ಅಧ್ಯಯನದ ಪ್ರಕಾರ ನರಸಲಗಿ ತಾಂಡಾದ ಲಂಬಾಣಿಗರು ಗೋವೆಯಲ್ಲಿ ನೆಲೆಸಿದ ಕಾಲಾವಧಿಯನ್ನು ಮುಂದಿನ ಕೋಷ್ಠಕದಿಂದ ತಿಳಿಯಬಹುದು.

**ಕೋಷ್ಠಕ 43, ವಲಸಿಗರು ಗೋವೆಯಲ್ಲಿ ನೆಲೆಸಿರುವ ಕಾಲಾವಧಿ ಆಧಾರಿತ ಸಂಖ್ಯೆ ಮತ್ತು ಶೇಕಡವಾರು ಹಂಚಿಕೆ (Number & percentage distribution of migrants by duration of stay)**

| ನೆಲೆಸಿರುವ ಕಾಲಾವಧಿ ವಿವರ | ಸಂಖ್ಯೆ | ಪ್ರತಿಶತ |
|---|---|---|
| 1 ರಿಂದ 5 ವರ್ಷ | 31 | 51.67 |
| 5 ರಿಂದ 10 ವರ್ಷ | 12 | 20.00 |
| 10 ರಿಂದ 20 ವರ್ಷ | 10 | 16.67 |
| 21 ವರ್ಷಕ್ಕಿಂತ ಹೆಚ್ಚು | 7 | 11.66 |
| ಒಟ್ಟು | **60** | **100.00** |

ಮೇಲಿನ ಕೋಷ್ಠಕದ ಪ್ರಕಾರ ಪ್ರತಿಶತ 51.67ರಷ್ಟು ಮಾಹಿತಿದಾರರು 1 ರಿಂದ 5 ವರ್ಷಗಳವರೆಗೆ, ಪ್ರತಿಶತ 20.00ರಷ್ಟು ಮಾಹಿತಿದಾರರು 5 ರಿಂದ 10 ವರ್ಷಗಳವರೆಗೆ, ಪ್ರತಿಶತ 16.67ರಷ್ಟು ಮಾಹಿತಿದಾರರು 10 ರಿಂದ 20 ವರ್ಷಗಳವರೆಗೆ, ಪ್ರತಿಶತ 11.66ರಷ್ಟು ಮಾಹಿತಿದಾರರು 21 ವರ್ಷಗಳಿಗಿಂತ ಹೆಚ್ಚು ಕಾಲಾವಧಿಯವರೆಗೆ ಗೋವೆಯಲ್ಲಿ ನೆಲೆಸಿದ್ದಾರೆ. ಮೇಲಿನ ಅಂಕಿ-ಅಂಶಗಳ ಪ್ರಕಾರ ಹೆಚ್ಚಿನ ಸಂಖ್ಯೆಯ ಲಂಬಾಣಿಗರು 1 ರಿಂದ 10 ವರ್ಷಗಳ ಅವಧಿಯವರೆಗೆ ಗೋವೆಯಲ್ಲಿ ನೆಲೆಸಿದ್ದಾರೆ. ಗೋವೆಯ ವಾತಾವರಣಕ್ಕೆ ಲಂಬಾಣಿಗರು ಹೊಂದಿಕೊಂಡಿದ್ದಾರೆ. ಆದ್ದರಿಂದ ಇವರು ಯಾವಾಗಾದರೊಮ್ಮೆ

ಜನ್ಮಸ್ಥಳದಲ್ಲಿರುವ ಕುಟುಂಬದ ಸದಸ್ಯರನ್ನು ಗೆಳೆಯರನ್ನು, ಸಂಬಮಧಿಕರನ್ನು ಭೇಟಿಯಾಗಲು ಬಂದು ಸ್ವಲ್ಪ ದಿನಗಳವರೆಗೆ ತಾಂಡಾಗಳಲ್ಲಿದ್ದು ಮತ್ತೆ ಮರಳಿ ಗೋವೆಗೆ ಬರುತ್ತಾರೆ. ಇವರು ಹೆಚ್ಚು ದಿನಗಳವರೆಗೆ ತಾಂಡಾಗಳಲ್ಲಿ ಇರಲು ಬಯಸುವುದಿಲ್ಲ. ಏಕೆಂದರೆ ಅವರು ಗೋವೆಯ ವಾತಾವರಣಕ್ಕೆ, ಆಹಾರ ಅಭ್ಯಾಸಗಳಿಗೆ ಹೊಂದಿಕೊಂಡಿರುವುದು ಇದಕ್ಕೆ ಕಾರಣವಾಗಿದೆ.

## 12. ವಲಸಿಗರಿಗೆ ಪರಿಚಯವಿರುವ ಭಾಷೆಗಳು (LANGUAGE KNOWN TO THE MIGRANTS):

ಭಾಷೆಯು ಜನರನ್ನು ಸಂಪರ್ಕಿಸಲು ಬಳಸುವ ಅತ್ಯವಶ್ಯಕವಾದ ಸಾಧನವಾಗಿದೆ. ಆದ್ದರಿಂದ ಇತರರನ್ನು ಸಂಪರ್ಕಿಸುವ ಹಂಬಲ ಹಾಗೂ ಒತ್ತಡದಿಂದ ಮಾನವ ಭಾಷೆಯನ್ನು ಸೃಷ್ಟಿಸಿಕೊಂಡಿದ್ದಾನೆ. ಆದ್ದರಿಂದ ಅನೇಕ ಶತಮಾನಗಳಿಂದ ಭಾಷೆಯು ಮುಂದುವರಿದುಕೊಂಡು ಬಂದಿದೆ. ಪ್ರತಿಯೊಂದು ದೇಶ, ಪ್ರದೇಶಕ್ಕೆ ತನ್ನದೇ ಆದ ಸ್ಥಾನಿಕ ಭಾಷೆ ಇದೆ. ಉದಾಹರಣೆಗೆ ಕರ್ನಾಟಕದಲ್ಲಿ ಕನ್ನಡ, ಮಹಾರಾಷ್ಟ್ರದಲ್ಲಿ ಮರಾಠಿ, ಪಂಜಾಬದಲ್ಲಿ ಪಂಜಾಬಿ, ತಮಿಳುನಾಡಿನಲ್ಲಿ ತಮಿಳು ಹೀಗೆ ಪ್ರತಿಯೊಂದು ಪ್ರದೇಶಕ್ಕೆ ಅವರದೇ ಆದ ಭಾಷೆ ಇದೆ. ಲಂಬಾಣಿಗರು ಲಿಪಿ ಇಲ್ಲದ 'ಗೋರಬೋಲಿ' ಹಾಗೂ ಕನ್ನಡ ಭಾಷೆ ಬಲ್ಲವರಾಗಿದ್ದು ಗೋವೆಗೆ ವಲಸೆ ಬಂದು ಕೊಂಕಣಿ, ಇಂಗ್ಲಿಷ್ ಹಾಗೂ ಹಿಂದಿ ಭಾಷೆಗಳನ್ನು ಕಲಿತುಕೊಂಡಿದ್ದಾರೆ. ನಮ್ಮ ಅಧ್ಯಯನದ ಪ್ರಕಾರ ಗೋವೆಗೆ ವಲಸೆ ಬಂದಿರುವ ನರಸಲಗಿ ತಾಂಡಾದ ಲಂಬಾಣಿಗರಿಗೆ ಪರಿಚಯವಿರುವ ಭಾಷೆಗಳನ್ನು ಮುಂದಿನ ಕೋಷ್ಟಕದ ಸಹಾಯದಿಂದ ತಿಳಿದುಕೊಳ್ಳಬಹುದು

**ಕೋಷ್ಟಕ 44, ವಲಸಿಗರಿಗೆ ಓದಲು, ಬರೆಯಲು ಹಾಗೂ ಮಾತನಾಡಲು ಬರುವ ಭಾಷೆಗಳ ಆಧಾರಿತ ಸಂಖ್ಯೆ ಮತ್ತು ಶೇಕಡವಾರು ಹಂಚಿಕೆ (Number and percentage distribution of migrants by language known for reading, writing and talking)**

| ಭಾಷೆಗಳು | ಓದಲು | | ಬರೆಯಲು | | ಮಾತನಾಡಲು | |
|---|---|---|---|---|---|---|
| | ಸಂಖ್ಯೆ | ಪ್ರತಿಶತ | ಸಂಖ್ಯೆ | ಪ್ರತಿಶತ | ಸಂಖ್ಯೆ | ಪ್ರತಿಶತ |
| ಕನ್ನಡ | | | | | | |
| ಹೌದು | 30 | 50.00 | 30 | 50.00 | 60 | 100.00 |
| ಇಲ್ಲ | 30 | 50.00 | 30 | 50.00 | 0 | 0.00 |
| ಇಂಗ್ಲಿಷ್ | | | | | | |
| ಹೌದು | 14 | 23.33 | 15 | 25.00 | 2 | 3.33 |
| ಇಲ್ಲ | 46 | 76.67 | 45 | 75.00 | 58 | 96.67 |
| ಹಿಂದಿ | | | | | | |
| ಹೌದು | 14 | 23.33 | 14 | 23.33 | 58 | 96.67 |
| ಇಲ್ಲ | 46 | 76.67 | 46 | 76.67 | 2 | 3.33 |
| ಕೊಂಕಣಿ | | | | | | |
| ಹೌದು | 1 | 1.67 | 1 | 1.67 | 58 | 96.67 |
| ಇಲ್ಲ | 59 | 98.33 | 59 | 98.33 | 2 | 3.33 |

ಮೇಲಿನ ಕೋಷ್ಟಕದ ಪ್ರಕಾರ ಪ್ರತಿಶತ 50.00ರಷ್ಟು ಮಾಹಿತಿದಾರರಿಗೆ ಕನ್ನಡ ಓದಲು ಹಾಗೂ ಬರೆಯಲು, ಪ್ರತಿಶತ 100.00ರಷ್ಟು ಮಾಹಿತಿದಾರರಿಗೆ ಮಾತನಾಡಲು ಬರುತ್ತದೆ, ಪ್ರತಿಶತ 23.33ರಷ್ಟು ಮಾಹಿತಿದಾರರಿಗೆ ಇಂಗ್ಲಿಷ್ ಓದಲು, ಪ್ರತಿಶತ 25.00ರಷ್ಟು ಮಾಹಿತಿದಾರರಿಗೆ ಬರೆಯಲು ಹಾಗೂ ಪ್ರತಿಶತ 3.33ರಷ್ಟು ಮಾಹಿತಿದಾರರಿಗೆ ಮಾತನಾಡಲು ಬರುತ್ತದೆ, ಪ್ರತಿಶತ 23.33ರಷ್ಟು ಮಾಹಿತಿದಾರರಿಗೆ ಹಿಂದಿ ಭಾಷೆ ಓದಲು, ಪ್ರತಿಶತ 23.33ರಷ್ಟು ಮಾಹಿತಿದಾರರಿಗೆ ಬರೆಯಲು ಹಾಗೂ ಪ್ರತಿಶತ 96.67ರಷ್ಟು ಮಾಹಿತಿದಾರರಿಗೆ ಮಾತನಾಡಲು ಬರುತ್ತದೆ. ಪ್ರತಿಶತ 1.67ರಷ್ಟು ಮಾಹಿತಿದಾರರಿಗೆ ಕೊಂಕಣಿ ಭಾಷೆ ಓದಲು, ಬರೆಯಲು ಹಾಗೂ ಪ್ರತಿಶತ 96.67ರಷ್ಟು ಮಾಹಿತಿದಾರರಿಗೆ ಮಾತನಾಡಲು ಬರುತ್ತದೆ. ಲಂಬಾಣಿಗರು ಗೋವೆಯಲ್ಲಿ ವ್ಯವಹರಿಸಲು, ಕೊಂಕಣಿ, ಇಂಗ್ಲಿಷ್ ಹಾಗೂ ಹಿಂದಿ ಭಾಷೆಗಳನ್ನು ಕಲಿತಿದ್ದಾರೆ.

**13. ವಲಸಿಗರ ಆಹಾರ ಅಭ್ಯಾಸಗಳು (Food habits of the migrants):**

ಆಹಾರದ ವಿಷಯಕ್ಕೆ ಸಂಬಂಧಿಸಿದಂತೆ ಲಂಬಾಣಿಗರು ಹೆಚ್ಚಿನ ಬದಲಾವಣೆ ಮಾಡಿಕೊಂಡಿಲ್ಲ ಕಾರಣ, ಮೂಲತಃ ಲಂಬಾಣಿಗರು ಮಾಂಸಾಹಾರಿಗಳಾಗಿದ್ದು, ಗೋವೆಯಲ್ಲಿಯೂ, ಹೆಚ್ಚಿನವರು ಮಾಂಸಾಹಾರ ಬಳಸುವುದರಿಂದ ಲಂಬಾಣಿಗರು ಇಂತಹ ಆಹಾರ ಪದ್ಧತಿಗಳಿಗೆ ಹೊಂದಿಕೊಂಡಿದ್ದಾರೆ. ನನ್ನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಲಂಬಾಣಿಗರಿಗೆ ನೀವು ಅನುಸರಿಸುವ ಆಹಾರ ಅಭ್ಯಾಸಗಳಾವವು? ಎಂದು ಕೇಳಿದ ಪ್ರಶ್ನೆಗೆ ಮಾಹಿತಿದಾರರು ನೀಡಿರುವ ಪ್ರತಿಕ್ರಿಯೆಯನ್ನು ಮುಂದಿನ ಕೋಷ್ಟಕದ ಸಹಾಯದಿಂದ ನೋಡಬಹುದು.

**ಕೋಷ್ಟಕ 45, ವಲಸಿಗರು ಅನುಸರಿಸುವ ಆಹಾರ ಅಭ್ಯಾಸಗಳ ಆಧಾರಿತ ಸಂಖ್ಯೆ ಮತ್ತು ಶೇಕಡವಾರು ಹಂಚಿಕೆ (Number & percentage of migrants by type of food practices)**

| ಆಹಾರ ಅಭ್ಯಾಸಗಳು | ಸಂಖ್ಯೆ | ಪ್ರತಿಶತ |
|---|---|---|
| ಕರ್ನಾಟಕದ ಮಾದರಿಯದು | 25 | 41.67 |
| ಸಂಪೂರ್ಣ ಗೋವಾ ಮಾದರಿಯದು | 22 | 36.67 |
| ಕೆಲವೊಂದು ಸಲ ಕರ್ನಾಟಕ ಮಾದರಿಯದು ಮತ್ತು ಕೆಲವೊಂದು ಸಲ ಗೋವಾ ಮಾದರಿಯದು | 13 | 21.67 |
| ಒಟ್ಟು | **60** | **100.00** |

ಮೇಲಿನ ಕೋಷ್ಟಕದ ಪ್ರಕಾರ ಪ್ರತಿಶತ 41.67ರಷ್ಟು ಮಾಹಿತಿದಾರರು ಕರ್ನಾಟಕದ ಮಾದರಿಯ ಆಹಾರ, ಪ್ರತಿಶತ 36.67ರಷ್ಟು ಮಾಹಿತಿದಾರರು ಸಂಪೂರ್ಣ ಗೋವಾ ಮಾದರಿಯ ಆಹಾರ ಹಾಗೂ ಪ್ರತಿಶತ 21.67ರಷ್ಟು ಮಾಹಿತಿದಾರರು ಕರ್ನಾಟಕ ಮಾದರಿಯದ್ದು, ಕೆಲವೊಂದು ಸಲ ಗೋವಾ ಮಾದರಿಯ ಆಹಾರ ಅಭ್ಯಾಸಗಳನ್ನು ರೂಢಿಸಿಕೊಂಡಿದ್ದಾರೆ. ಮೇಲಿನ ಅಂಕಿ-ಅಂಶಗಳ ಪ್ರಕಾರ ಹೆಚ್ಚಿನ ಸಂಖ್ಯೆಯ ಲಂಬಾಣಿಗರು ಗೋವಾ ಮಾದರಿಯ ಆಹಾರ ಅಭ್ಯಾಸಗಳನ್ನು ಅನುಸರಿಸುತ್ತಿದ್ದಾರೆ.

ಸ್ಥಳೀಯ ಗೋವೆಯ ಜನರ ಹಾಗೂ ಲಂಬಾಣಿಗರ ಆಹಾರ ಅಭ್ಯಾಸಗಳು ಒಂದೇ ಬಗೆಯದಾಗಿದ್ದರೂ, ಸ್ಥಳಿಯರು ಲಂಬಾಣಿಗರಿಗೆ ಮನೆಯ ಊಟಕ್ಕೆ ಹೆಚ್ಚಾಗಿ ಆಹ್ವಾನಿಸುವುದಿಲ್ಲ. ಲಂಬಾಣಿಗರಿಗೆ ನಿಮಗೆ ಸ್ಥಳಿಯರು ಊಟಕೆ ಆಹ್ವಾನಿಸುತ್ತಾರೆಯೆ? ಎಂದು ಕೇಳಿದ ಪ್ರಶ್ನೆಗೆ ಪ್ರತಿಶತ 30.00ರಷ್ಟು ಮಾಹಿತಿದಾರರು ಹೌದು ಎಂದು ಇನ್ನೂಳಿದ ಪ್ರತಿಶತ 70.00ರಷ್ಟು ಮಾಹಿತಿದಾರರು ಇಲ್ಲಾ ಎಂದು ಪ್ರತಿಕ್ರಿಯೆ ನೀಡಿದ್ದಾರೆ. ಲಂಬಾಣಿಗರು ಕೂಲಿಕಾರರಾಗಿದ್ದರಿಂದ ಸ್ವಚ್ಛತೆ ಇಲ್ಲದಿರುವುದರಿಂದ, ಸ್ಥಳಿಯರು ಮನೆಯ ಊಟಕ್ಕೆ ಆಹ್ವಾನಿಸುವುದಿಲ್ಲ. ಇದಕ್ಕೆ ಪ್ರತಿಯಾಗಿ ಲಂಬಾಣಿಗರ ಹಬ್ಬ-ಹರಿದಿನಗಳ ಸಂದರ್ಭಗಳಲ್ಲಿ ಸ್ಥಳಿಯರಿಗೆ ಪ್ರತಿಶತ 13.33ರಷ್ಟು ಮಾಹಿತಿದಾರರು ಮಾತ್ರ ಮನೆಯ ಊಟಕ್ಕೆ ಆಹ್ವಾನಿಸುತ್ತಾರೆ. ಪ್ರತಿಶತ 86.67ರಷ್ಟು ಮಾಹಿತಿದಾರರು ಸ್ಥಳಿಯರಿಗೆ ಮನೆಯ ಊಟಕ್ಕೆ ಆಹ್ವಾನಿಸುತ್ತಿಲ್ಲ. ಇದಕ್ಕೆ ಅವರು ಬೆಳೆಸಿಕೊಂಡಿರುವ ಕೀಳರಿಮೆಯ ಭಾವನೆಯೇ ಪ್ರಮುಖ ಕಾರಣವಾಗಿದೆ.

**ಗೋವೆಯಲ್ಲಿ ಲಂಬಾಣಿ ವಲಸಿಗರ ಸಾಮಾಜಿಕ ಜೀವನ (Social life of lambanis migratans in goa)**

**ಗೋವೆಯಲ್ಲಿ ಲಂಬಾಣಿಗರ ನೆಲೆ (LAMBANIS LOCALITY IN GOA)**

ಲಂಬಾಣಿಗರು ಮೊದಲಿನಿಂದಲೂ ನಾಗರಿಕ ಸಮಾಜದಿಂದ ಪ್ರತ್ಯೇಕವಾದ ಸ್ಥಳದಲ್ಲಿ ತಾಂಡಾಗಳನ್ನು ನಿರ್ಮಿಸಿಕೊಂಡು ಅವರದೇ ಆದ ಸಾಂಸ್ಕೃತಿಕ ಪರಿಸರದಲ್ಲಿ ತಮ್ಮ ಕುಲಬಾಂಧವರ ಜೊತೆಯಲ್ಲಿ ವಾಸವಾಗುವ ಪ್ರವೃತ್ತಿವುಳ್ಳವರಾಗಿದ್ದಾರೆ. "ಲಂಬಾಣಿಗರು ಸಾಮಾನ್ಯವಾಗಿ ಇತರ ಜನರೊಡನೆ ಬೆರೆಯುವುದಿಲ್ಲ. ಇತರ ಜನರೊಡನೆ ಕೂಡಿ ಕೆಲಸ ಮಾಡುತ್ತಾರೆ. ಊರು, ಪೇಟೆ, ಸಂತೆಗಳಿಗೆ ಹೋಗುತ್ತಾರೆ. ಆದರೆ ಬೇರೆ ಜನರಿರುವ ಊರಿನ ಒಳಗೆ ಇತರರ ಜೊತೆಗೆ ವಾಸಿಸಲು ಇಷ್ಟ ಪಡುವುದಿಲ್ಲ".[6] ಈಗಲೂ ಇವರು ಪ್ರತ್ಯೇಕವಾದ ತಾಂಡಗಳಲ್ಲಿ ವಾಸವಾಗಿದ್ದಾರೆ. ಗೋವೆಗೆ ಕೂಲಿ ಕೆಲಸ ಮಾಡಲು ವಲಸೆ ಬಂದಿರುವ ಲಂಬಾಣಿಗರು ವಾಸ್ಕೋನಗರದ 'ಕೆಂಪುದೀಪ ಪ್ರದೇಶ' ಎಂದು ಹೆಸರುವಾಸಿಯಾಗಿರುವ ಬಯನಾ ಕೊಳಚೆ ಪ್ರದೇಶದಲ್ಲಿ ಸುಮಾರು 170 ಲಂಬಾಣಿ ಕುಟುಂಬಗಳು ಹಾಗೂ ಮಂಗೂರ ಹಿಲ್ ಕೊಳಚೆ ಪ್ರದೇಶದಲ್ಲಿ 100 ಕುಟುಂಬಗಳು ಒಂದೇ ಕಡೆ ಪ್ರತ್ಯೇಕವಾಗಿ ನೆಲೆಗೊಂಡಿವೆ. ನಮ್ಮ ಅಧ್ಯಯನದ ನಮೂನೆ ಕುಟುಂಬದ ಸಂಗತಿ 40ರಲ್ಲಿ ಬರುವ ಕುಟಂಬದ ಸದಸ್ಯ ಸುಬ್ಬಪ್ಪ ಲಮಾಣಿ 1980ರಲ್ಲಿ ಗೋವೆಗೆ ಕುಟುಂಬ ಸಮೇತ ವಲಸೆ ಬಂದು ಬಯನಾ ಕೊಳಚೆ ಪ್ರದೇಶದಲ್ಲಿ ಶಾಸ್ವತ ನೆಲೆಗೊಂಡಿದ್ದಾನೆ. ಈತನು ಕೂಲಿ ಕೆಲಸದಲ್ಲಿ ತೊಡಗಿದ್ದಾನೆ. ಇವನ ಮಕ್ಕಳು ಆಟೋ ಓಡಿಸುತ್ತಿದ್ದಾರೆ. ಕುಟುಂಬದಲ್ಲಿ ಒಟ್ಟು 5 ಜನ ಸದಸ್ಯರಿದ್ದು ಸಣ್ಣ ಮನೆಯಲ್ಲಿ ವಾಸವಾಗಿದ್ದಾರೆ. ಗೋವಾ ಸರ್ಕಾರ ಈ ಪ್ರದೇಶದ ಲೈಂಗಿಕ ಕಾರ್ಯಕರ್ತೆಯರನ್ನು ಸ್ಥಳಾಂತರಿಸಿದ್ದರಿಂದ ಮುಂದಿನ ದಿನಗಳಲ್ಲಿ ತಮಗೂ ತೊಂದರೆ ಆಗಬಹುದು ಎಂದು ಇಲ್ಲಿ ವಾಸವಾಗಿರುವ ಜನರು ಭಯಭೀತಿಯಿಂದ ಜೀವನ ಸಾಗಿಸುತ್ತಿದ್ದಾರೆ.

---

6. ಚಿದಾನಂದಮೂರ್ತಿ ಎಂ.; 1970, 'ಸಂಶೋಧನಾ ತಂರಗ,' ಸಂಪುಟ-2, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ಪುಟ-2

## ಮಿಶ್ರ ವಾಸಸ್ಥಾನ (MIXED SETTLEMENT)

ಲಂಬಾಣಿಗರು ತಾವು ವಾಸಿಸುವ ಪ್ರದೇಶವನ್ನು ತಾಂಡಾ ಎಂದು ಕರೆಯುತ್ತಾರೆ. ಆದರೆ ಲಂಬಾಣಿಗರು ವಾಸವಾಗಿರುವ ಪ್ರದೇಶದಲ್ಲಿ ಕೆಲವು ಮುಸ್ಲಿಂಮರು ವಾಸವಾಗಿದ್ದಾರೆ ಆದ್ದರಿಂದ ಇದನ್ನು ತಾಂಡಾ ಎಂದು ಸಂಬೋಧಿಸಲು ಬರುವುದಿಲ್ಲ. ಈ ಕೊಳಚೆ ಪ್ರದೇಶದಲ್ಲಿ ಲಂಬಾಣಿಗರ ಮತ್ತು ಮುಸ್ಲಿಂಮರ ಮಧ್ಯೆ ವೈವಾಹಿಕ ಸಂಬಂಧಗಳು ಏರ್ಪಟ್ಟಿವೆ. ಲಂಬಾಣಿ ಪುರುಷರು ವಿವಾಹವಾದ ಮುಸ್ಲಿಂ ಸ್ತ್ರೀಯರು ಲಂಬಾಣಿ ಧರ್ಮಕ್ಕೆ, ಮುಸ್ಲಿಂ ಪುರುಷರನ್ನು ವಿವಾಹವಾಗಿರುವ ಲಂಬಾಣಿ ಸ್ತ್ರೀಯರು ಇಸ್ಲಾಂ ಧರ್ಮಕ್ಕೆ ಸೇರಿದ್ದಾರೆ. ಇದರಿಂದ ಮೊಗಲ ಅರಸರ ಆಳ್ವಿಕೆಯ ಕಾಲದಲ್ಲಿದ್ದ ಮುಸ್ಲಿಂ ಹಾಗೂ ಲಂಬಾಣಿಗರ ಸಾಂಸ್ಕೃತಿಕ ಸಂಬಂಧ, ಅನ್ಯೂನ್ಯತೆ ಈಗಲೂ ಮುಂದುವರಿದಿರುವುದು ಗೊತ್ತಾಗುತ್ತದೆ. ಕ್ರೈಸ್ತ, ಕೊಂಕಣಿ, ಹಿಂದುಗಳ ಮಧ್ಯೆಯೊ, ವೈವಾಹಿಕ ಸಂಬಂಧಗಳು ಏರ್ಪಟ್ಟಿದ್ದು ಈ ಸಂಖ್ಯೆ ಬಹಳ ಕಡಿಮೆ ಇದೆ. ಮುಸ್ಲಿಂ ಜನಾಂಗದವರು ಲಂಬಾಣಿಗರ ಜೊತೆ ವಾಸವಾಗಲು ಕಾರಣಗಳೆಂದರೆ.

1. ಲಂಬಾಣಿಗರು ಹಾಗೂ ಮುಸಲ್ಮಾನರ ಆಹಾರ ಅಭ್ಯಾಸಗಳು ಒಂದೆ ಮಾದರಿಯಲ್ಲಿರುವುದರಿಂದ, ಎರಡೂ ಸಮುದಾಯಗಳ ಜನರು ಮಾಂಸಾಹಾರಿಗಳಾಗಿದ್ದರಿಂದ ಒಂದೇ ಪ್ರದೇಶದಲ್ಲಿ ವಾಸವಾಗಿದ್ದಾರೆ.
2. ಮೊಗಲರ ಕಾಲದಿಂದಲೂ ಲಂಬಾಣಿಗರಿಗೂ ಹಾಗೂ ಮುಸಲ್ಮಾನರ ಮಧ್ಯೆ ಸಾಂಸ್ಕೃತಿಕ ಸಂಬಂಧ ಇರುವುದರಿಂದ ಒಂದೇ ಪ್ರದೇಶದಲ್ಲಿ ಸಹಕಾರ ಭಾವನೆಯಿಂದ ಕೂಡಿ ವಾಸವಾಗಿದ್ದಾರೆ.
3. ವಲಸೆ ಬಂದಿರುವ ಲಿಂಬಾಣಿಗರಿಗೆ ಪ್ರತ್ಯೇಕ ವಾಸಿಸುವ ಬಯಕೆ ಇದ್ದರೂ, ಆ ಬಯಕೆ ಈಡೇರದ ಪರಿಸ್ಥಿತಿಯಲ್ಲಿ ಮುಸ್ಲಿಂಮರ ಜೊತೆ ವಾಸವಾಗಿದ್ದಾರೆ.

ನರಸಲಗಿ ಗ್ರಾಮದಿಂದ ಬಂದಿರುವ ಕೆಲವು ಉನ್ನತ ಜಾತಿಯ ಜನರು ಲಂಬಾಣಿಗರನ್ನು ಕೀಳರಿಮೆಯ ಮನೋಭಾವನೆಯಿಂದ ಕಾಣುವುದರಿಂದ ಇವರು ಲಂಬಾಣಿಗರು ವಾಸವಾಗಿರುವ ಪ್ರದೇಶದಲ್ಲಿ ವಾಸವಾಗಿಲ್ಲ ಹಾಗೂ ಇವರ ಮಧ್ಯೆ ವೈವಾಹಿಕ ಸಂಬಂಧಗಳು ಏರ್ಪಟ್ಟಿಲ್ಲ. ನರಸಲಗಿ ತಾಂಡಾದ ಕೆಲವು ಲಂಬಾಣಿಗರು ತಾವು ಕೆಲಸ ಮಾಡುವ ಸಮೀಪದ ಪ್ರದೇಶಗಳಾದ ವಾಸ್ಕೋನಗರದಿಂದ 10 ಕಿ.ಮೀ. ದೂರದಲ್ಲಿರುವ ಪಿಲಾರ ಹಾಗೂ ಫಣಜಿನಗರದಿಂದ ಸುಮಾರು 15 ಕಿ.ಮೀ. ದೂರದಲ್ಲಿರುವ ಬಾಣಸ್ತರಿ, ಸಿಕೇರಿ ಒಡ್ಡಾ ಗ್ರಾಮಗಳ ಅರಣ್ಯ ಪ್ರದೇಶಗಳಲ್ಲಿ ಕೆಲಸಕೊಟ್ಟ ಮಾಲಿಕರು ಒದಗಿಸಿರುವ ಚಿಕ್ಕ ಚಿಕ್ಕ ಗುಡಿಸಲುಗಳಲ್ಲಿ ವಾಸವಾಗಿದ್ದಾರೆ. ಇವು ಶಾಸ್ವತ ನೆಲೆಗಳಲ್ಲ ಏಕೆಂದರೆ ಲಂಬಾಣಿಗರು ಕೆಲಸ ಸಿಗುವ ಕಡೆ ಮೇಲಿಂದ-ಮೇಲೆ ತಮ್ಮ ವಾಸಸ್ಥಾನಗಳನ್ನು ಸ್ಥಳಾಂತರಿಸುತ್ತಾರೆ. ಈ ವಾಸಸ್ಥಾನಗಳು ಶಾಸ್ವತವಲ್ಲವಾದ್ದರಿಂದ ಲಂಬಾಣಿಗರು ತಮ್ಮ ಕುಲದೇವತೆಗಳ ದೇವಾಲಯಗಳನ್ನು ನಿರ್ಮಿಸಿಲ್ಲ. ಹೋಟೇಲು, ಬೇಕರಿಗಳಲ್ಲಿ ಶ್ರೀಮಂತರ ಮನೆಗಳಲ್ಲಿ ಕೆಲಸ ಮಾಡುತ್ತಿರುವ ಯುವಕ ಯುವತಿಯರು ಮಾಲಿಕರು ನೀಡುವ ಚಿಕ್ಕ-ಚಿಕ್ಕ ಕೋಣೆಗಳಲ್ಲಿ ವಾಸವಾಗಿದ್ದಾರೆ ಹಾಗೂ ಅವರು ನೀಡುವ ಗೋವಾ ಮಾದರಿಯ ಆಹಾರ ಸೇವಿಸುವುದು ಅನಿವಾರ್ಯವಾಗಿದೆ. ಗೋವೆಯಲ್ಲಿ ನರಸಲಗಿ ತಾಂಡಾದ ಲಂಬಾಣಿಗರು ನೆಲೆಸಿರುವ ಪ್ರದೇಶಗಳನ್ನು ಈ ಮುಂದಿನ ನಕ್ಷೆಯಿಂದ ತಿಳಿಯಬಹುದು

## ಗೋವೆಯಲ್ಲಿ ಲಂಬಾಣಿಗರು ವಾಸವಾಗಿರುವ ನೆಲೆಗಳನ್ನು ಸೂಚಿಸುವ ನಕಾಶೆ

ಮಾಪುಸಾ
ಬಿಚೋಲಿಯಂ
ಅಂಜುನಾಬೀಚ್
ಬಾಗಾಬೀಚ್
ಸಿಕೇರಿಒಡ್ಯಾ
ಬಾಣಸ್ತರಿ
ಫಣಜಿ
ಮಾಯಣಾ
ಪಿಲಾರ್
ಮಾರ್ಮಗೋವಾಖಾರಿ
ಫೊಂಡಾ
ವಾಸ್ಕೋಡಿಗಾಮಾ
ಜುವಾರಿನಗರ
(ಬಿರ್ಲಾ)
ಮಡಗಾಂವ
ಕೆಫೆ

ಉತ್ತರ ಗೋವಾ 

ದಕ್ಷಿಣ ಗೋವಾ 

**ಜಾತಿ ಪಂಚಾಯತಿ (Caste panchayat)**

ಲಂಬಾಣಿಗರು ತಮ್ಮದೇ ಆದ ಜಾತಿ ಪಂಚಾಯಿತಿ ಹೊಂದಿದ್ದಾರೆ. ತಾಂಡಾಗಳಲ್ಲಿ ನಡೆಯುವ ಪ್ರತಿಯೊಂದು ಘಟನೆಗಳು ಹಬ್ಬ-ಹರಿದಿನಗಳು ತಾಂಡಾದ ಪಂಚಾಯಿತಿ ಮುಖ್ಯಸ್ಥನಾದ ನಾಯಕನ ಪರವಾನಿಗೆಯಿಂದ ನಡೆಯುತ್ತವೆ. ಗೋವೆಗೆ ವಲಸೆ ಬಂದ ಲಂಬಾಣಿಗರ ವಾಸಸ್ಥಾನದಲ್ಲಿಯೂ ತಾಂಡಾಗಳಲ್ಲಿ ಇರುವಂತೆ ಪಂಚಾಯಿತಿ ರಚಿಸಿಕೊಂಡಿದ್ದಾರೆ. ಪಂಚಾಯಿತಿಗೆ ಒಬ್ಬ ನಾಯಕ ಹಾಗೂ ಕಾರಭಾರಿ (ಕಾರ್ಯದರ್ಶಿ) ಹಾಗೂ ಐದು ಜನರು ಪಂಚರು (ಮುಖಂಡರು) ಸದಸ್ಯರಿದ್ದಾರೆ. ಮೂಲತಾಂಡಾಗಳಲ್ಲಿ ನಾಯಕ ಹಾಗೂ ಕಾರಭಾರಿ ಹುದ್ದೆಗಳು ವಂಶಪಾರಂಪರರ್ಯದಿಂದ ಬಂದವುಗಳಾಗಿವೆ. ಆದರೆ ಗೋವೆಯಲ್ಲಿ ಸಮಾಜ ಕಾರ್ಯಗಳಲ್ಲಿ ತೊಡಗಿರುವ ಮುಖಂಡರು ಈ ಹುದ್ದೆಗಳನ್ನು ಹೊಂದಿದ್ದಾರೆ. ವಿವಾಹ, ಧಾರ್ಮಿಕ ಆಚರಣೆಗಳು, ಸಸಿಹಬ್ಬ (ತೀಜ್) ಮುಂತಾದ ಆಚರಣೆಗಳು ಈ ಮುಖಂಡರ ಅನುಮತಿಯ ಮೇರೆಗೆ ಆಚರಿಸಲ್ಪಡುತ್ತವೆ. ಇಲ್ಲಿ ನಡೆಯುವ ಜಗಳಗಳು, ವಿಚ್ಛೇದನೆ ಮುಂತಾದ ಸಮಸ್ಯೆಗಳು ಪಂಚಾಯಿತಿ ಮುಖ್ಯಸ್ಥರ ಮುಂದೆ ಇತ್ಯರ್ಥವಾಗುತ್ತವೆ. ನ್ಯಾಯ ನಿರ್ಣಯವಾಗದಿದ್ದರೆ ಬೇರೆ ತಾಂಡಾಗಳ ನಾಯಕರುಗಳನ್ನು ಆಹ್ವಾನಿಸಿ ನ್ಯಾಯ ನಿರ್ಣಯಿಸುವ ಪದ್ಧತಿ ಮೂಲ ತಾಂಡಾಗಳಲ್ಲಿವೆ. ಆದರೆ ಗೋವೆಯಲ್ಲಿ ಲಂಬಾಣಿ ತಾಂಡಾಗಳು ಇಲ್ಲದ್ದರಿಂದ ಇದು ಸಾಧ್ಯವಾಗುತ್ತಿಲ್ಲ.

**ಧಾರ್ಮಿಕ ಜೀವನ (Religious life):**

ಪ್ರತಿಯೊಂದು ಜನಾಂಗಗಳಲ್ಲಿ ಕಂಡುಬರುವಂತೆ ಲಂಬಾಣಿಗರು ತಮ್ಮದೇ ಆದ ಧಾರ್ಮಿಕ ಆಚರಣೆಗಳನ್ನು ಹೊಂದಿದ್ದಾರೆ. ಮೊದಲಿನಿಂದಲೂ ಲಂಬಾಣಿಗರು ಧಾರ್ಮಿಕ ಆಚರಣೆಗಳಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡುತ್ತ ಬಂದಿದ್ದಾರೆ. ಆರ್ಥಿಕವಾಗಿ ಹಿಂದುಳಿದವರಾಗಿದ್ದರೂ ವರ್ಷಕ್ಕೊಮ್ಮೆ ಕುಲದೇವತೆಗಳಾದ ದುರ್ಗಾದೇವಿ, ತುಳಜಾಭವಾನಿ ದೇವತೆಗಳನ್ನು ಬಲಿಕೊಟ್ಟು ಆರಾಧಿಸುತ್ತಾರೆ. ಕೆಲವರು ವರ್ಷಕ್ಕೊಮ್ಮೆ ಮಹಾರಾಷ್ಟ್ರದ ಸೋಲ್ಲಾಪುರ ಜಿಲ್ಲೆಯಲ್ಲಿ ಇರುವ ತುಳಜಾಪುರಕ್ಕೆ ಹೋಗಿ ತುಳಜಾಭವಾನಿ ದೇವತೆಗೆ ಪೂಜೆ ಸಲ್ಲಿಸಿಬರುತ್ತಾರೆ. ಪ್ರಸ್ತುತ ಉದ್ಯೋಗಕ್ಕಾಗಿ ಗೋವೆಗೆ ವಲಸೆ ಬಂದಿರುವ ಲಂಬಾಣಿಗರು ತಮ್ಮ ಸಾಂಪ್ರದಾಯಿಕ ಆಚರಣೆಗಳನ್ನು ಮುಂದುವರಿಸಿದ್ದಾರೆ. ಮೂಲತಾಂಡಾಗಳಲ್ಲಿ ದೇವತೆಗಳಿಗೆ ಪ್ರಾಣಿ ಬಲಿಕೊಡುವ ಪದ್ಧತಿ ಗೋವೆಯಲ್ಲಿ ಮುಂದುವರಿಸಿದ್ದಾರೆ. ಹೋಳಿಹಬ್ಬ, ಸಸಿಹಬ್ಬ, ದೀಪಾವಳಿ ಮುಂತಾದ ಹಬ್ಬ-ಹರಿದನಗಳನ್ನು ತಾಂಡಾಗಳಲ್ಲಿ ಆಚರಿಸಲ್ಪಡುವಂತೆ ಬಯನಾ ಕೊಳಚೆ ಪ್ರದೇಶದಲ್ಲಿ ನಾಯಕ ಹಾಗೂ ಕಾರ್ಯದರ್ಶಿಯ ಮುಖಂಡತ್ವದಲ್ಲಿ ಆಚರಿಸಲ್ಪಡುತ್ತವೆ. ಆದರೆ ಕೆಲಸದ ಸ್ಥಳಗಳಲ್ಲಿ ವಾಸವಾಗಿರುವ ಕೆಲವು ಲಂಬಾಣಿಗರು ಹಬ್ಬ-ಹರಿದಿನಗಳನ್ನು ವ್ಯವಸ್ಥಿತವಾಗಿ ಆಚರಿಸಲು ಸಾಧ್ಯವಾಗುತ್ತಿಲ್ಲ. ಈ ಕೊಳಚೆ ಪ್ರದೇಶದಲ್ಲಿ ಲಂಬಾಣಿ ಧಾರ್ಮಿಕ ಗುರು ಸೇವಾಲಾಲ್ ಹಾಗೂ ಕುಲದೇವತೆ ದುರ್ಗಾದೇವಿಯ ದೇವಾಲಯಗಳನ್ನು ಅನಧಿಕೃತ ಜಾಗದಲ್ಲಿ ನಿರ್ಮಿಸಿಕೊಂಡು ಆರಾಧಿಸುತ್ತಿದ್ದಾರೆ. ಈ ದೇವಾಲಯಗಳನ್ನು ನೋಡಿಕೊಳ್ಳಲು ಪೂಜಾರಿಗಳನ್ನು ನೇಮಿಸಿದ್ದು ಸಾಂಪ್ರದಾಯಿಕವಾಗಿ ಪೂಜಾರಿ ಹುದ್ದೆಯಲ್ಲಿ ಇರದ ಲಂಬಾಣಿಗರು ಪೂಜಾರಿಗಳಾಗಿದ್ದಾರೆ. ಈ ಪ್ರದೇಶದಲ್ಲಿ ಮುಸ್ಲಿಂರ ಮಸ್ಜಿದ್‌ಗಳು ಕಂಡುಬರುತ್ತವೆ. ಬಿಲಿವರ್ಸ್ ಚರ್ಚ್ ಇಂಡಿಯಾ ಸಂಸ್ಥೆಯ ಕಾರ್ಯಕರ್ತರು ಈ ಕೊಳಚೆ ಪ್ರದೇಶದ ಸಮುದಾಯ ಭವನದಲ್ಲಿ ಪ್ರತಿ ರವಿವಾರ ಸಾಮೂಹಿಕ ಪ್ರಾರ್ಥನೆ

ನಡಸುತ್ತಿದ್ದು, ಇದರಲ್ಲಿ ಲಂಬಾಣಿಗರು ಭಾಗವಹಿಸುತ್ತಿದ್ದಾರೆ. ನರಸಲಗಿ ತಾಂಡಾಡ ಲಂಬಾಣಿಗರಿಗೆ ನೀವು ಧಾರ್ಮಿಕ ಸ್ಥಳಗಳಿಗೆ ಭೇಟಿ ನೀಡುವಿರಾ? ಎಂದು ಕೇಳಿದ ಪ್ರಶ್ನೆಗೆ ಪ್ರತಿಯಾಗಿ ಪ್ರತಿಶತ 15.00ರಷ್ಟು ಮಾಹಿತಿದಾರರು ಮೇಲಿಂದ ಮೇಲೆ ಭೇಟಿ ನೀಡುತ್ತೇವೆ ಎಂದು ಪ್ರತಿಶತ 78.33ರಷ್ಟು ಮಾಹಿತಿದಾರರು ಯಾವಾಗದರೊಂದು ಸಲ ಭೇಟಿ ನೀಡುತ್ತೇವೆ ಎಂದೂ ಹಾಗೂ ಪ್ರತಿಶತ 6.67ರಷ್ಟು ಮಾಹಿತಿದುರರು ಭೇಟಿ ನೀಡುವುದಿಲ್ಲ ಎಂದು ಪ್ರತಿಕ್ರಿಯೆ ನೀಡಿದ್ದಾರೆ. ಹಬ್ಬ-ಹರಿದಿನಗಳ ಸಂದರ್ಭಗಳಲ್ಲಿ ಲಂಬಾಣಿಗರು ಭೇಟಿ ನೀಡುವ ದೇವಾಲಯಗಳನ್ನು ಮುಂದಿನ ಕೋಷ್ಟಕದ ಸಹಾಯದಿಂದ ತಿಳಿಯಬಹುದು.

**ಕೋಷ್ಟಕ 46 ವಲಸಿಗರು ಹಬ್ಬ-ಹರಿದಿನಗಳ ಸಂದರ್ಭದಲ್ಲಿ ಭೇಟಿ ನೀಡುವ ದೇವಾಲಯಗಳ ಆಧಾರಿತ ಸಂಖ್ಯೆ ಮತ್ತು ಶೇಕಡವಾರು ಹಂಚಿಕೆ (Number & percentage of migrants by visit to religious place during festivals)**

| ಧಾರ್ಮಿಕ ಸ್ಥಳಗಳು | ಸಂಖ್ಯೆ | ಪ್ರತಿಶತ |
|---|---|---|
| ಹಿಂದೂ ದೇವಾಲಯ | 44 | 73.33 |
| ಹಿಂದೂ ಹಾಗೂ ಕ್ರಿಶ್ಚಿಯನ್ ಸ್ಥಳಗಳು | 9 | 15.00 |
| ಕ್ರಿಶ್ಚಿಯನ್ ಧರ್ಮಸ್ಥಳಗಳು | 3 | 5.00 |
| ಭೇಟಿ ನೀಡುವುದಿಲ್ಲ | 4 | 6.67 |
| **ಒಟ್ಟು** | **60** | **100.00** |

ಮೇಲಿನ ಕೋಷ್ಟಕದ ಪ್ರಕಾರ ಪ್ರತಿಶತ 73.33ರಷ್ಟು ಮಾಹಿತಿದಾರರು ಹಿಂದೂ ದೇವಾಲಯಗಳಿಗೆ, ಪ್ರತಿಶತ 15.00ರಷ್ಟು ಮಾಹಿತಿದಾರರು ಹಿಂದೂ ದೇವಾಲಯ ಹಾಗೂ ಚರ್ಚುಗಳಿಗೆ, ಪ್ರತಿಶತ 5.00ರಷ್ಟು ಮಾಹಿತಿದಾರರು ಕೇವಲ ಚರ್ಚುಗಳಿಗೆ ಭೇಟಿ ನೀಡುತ್ತಿದ್ದಾರೆ, ಪ್ರತಿಶತ 6.67ರಷ್ಟು ಮಾಹಿತಿದಾರರು ಯಾವುದೇ ದೇವಲಾಯಗಳಿಗೆ ಭೇಟಿ ನೀಡುತ್ತಿಲ್ಲ. ಮೇಲಿನ ಅಂಕಿ-ಅಂಶಗಳ ಪ್ರಕಾರ ಲಂಬಾಣಿಗರು ಧಾರ್ಮಿಕ ವಿಷಯದಲ್ಲಿ ಅಷ್ಟೊಂದು ಬದಲಾವಣೆ ಆಗಿಲ್ಲ ಎಂಬುವುದು ಸ್ಪಷ್ಟವಾಗುತ್ತದೆ.

ಗೋವೆಯಲ್ಲಿ ಲಂಬಾಣಿಗರು ತಮ್ಮ ಸಂಸ್ಕೃತಿ ಮುಂದುವರಿಸಲು ಪ್ರಯತ್ನಸುತ್ತಿದ್ದಾರೆ. ತಾಂಡಾಗಳಲ್ಲಿ ಆಚರಿಸಲ್ಪಡುವ ಎಲ್ಲಾ ಆಚರಣೆಗಳನ್ನು ಗೋವೆಯಲ್ಲಿ ಆಚರಿಸುತ್ತಿದ್ದಾರೆ. ಮುಂದಿನ ಕೋಷ್ಟಕದ ಸಹಾಯದಿಂದ ಲಂಬಾಣಿಗರು ಗೋವೆಯಲ್ಲಿ ಆಚರಿಸುತ್ತಿರುವ ಹಬ್ಬ-ಹರಿದಿನಗಳನ್ನು ತಿಳಿದುಕೊಳ್ಳಬಹುದು.

**ಕೋಷ್ಟಕ 47, ವಲಸಿಗರು ಆಚರಿಸುತ್ತಿರುವ ಹಬ್ಬಗಳ ಆಚರಣೆಯ ಆಧಾರಿತ ಸಂಖ್ಯೆ ಮತ್ತು ಶೇಕಡವಾರು ಹಂಚಿಕೆ (Number & percentage of migrants by celebration of festival)**

| ಹಬ್ಬಗಳು | ಸಂಖ್ಯೆ | ಪ್ರತಿಶತ |
|---|---|---|
| ಲಂಬಾಣಿ ಸಮುದಾಯದ ಹಬ್ಬಗಳು | 19 | 31.67 |
| ಇತರೆ ಸಾರ್ವತ್ರಿಕ ಹಬ್ಬಗಳು | 37 | 61.67 |
| ರಾಷ್ಟ್ರೀಯ ಹಬ್ಬಗಳು | 1 | 1.67 |
| ಇತರೆ ಧಾರ್ಮಿಕ ಹಬ್ಬಗಳು | 3 | 5.00 |
| ಒಟ್ಟು | **60** | **100.00** |

ಮೇಲಿನ ಕೋಷ್ಟಕದ ಪ್ರಕಾರ ಪ್ರತಿಶತ 31.67ರಷ್ಟು ಮಾಹಿತಿದಾರರು ಕೇವಲ ಲಂಬಾಣಿ ಹಬ್ಬಗಳನ್ನು, ಪ್ರತಿಶತ 61.67ರಷ್ಟು ಮಾಹಿತಿದಾರರು ಲಂಬಾಣಿಗರ ಹಾಗೂ ಕರ್ನಾಟಕದ ಹಬ್ಬಗಳನ್ನು, ಪ್ರತಿಶತ 1.67ರಷ್ಟು ಮಾಹಿತಿದಾರರು ಎಲ್ಲಾ ರಾಷ್ಟ್ರೀಯ ಹಬ್ಬಗಳನ್ನು ಹಾಗೂ ಪ್ರತಿಶತ 5.00ರಷ್ಟು ಮಾಹಿತಿದಾರರು ಇತರೆ ಧಾರ್ಮಿಕ ಹಬ್ಬಗಳನ್ನು ಆಚರಿಸುತ್ತಿದ್ದಾರೆ. ಹಬ್ಬಹರಿದಿನಗಳ ಸಂದರ್ಭಗಳಲ್ಲಿ ಹೆಚ್ಚಿನ ಲಂಬಾಣಿಗರು, ಪ್ರತಿಶತ 78.33ರಷ್ಟು ತಮ್ಮ ಜಾತಿಯ ಜನರನ್ನು, ಪ್ರತಶತ 6.67ರಷ್ಟು ಮಾಹಿತಿದಾರರು ಸ್ಥಳಿಯ ಗೋವೆಯ ಜನರನ್ನು ಆಹ್ವಾನಿಸುತ್ತಾರೆ, ಪ್ರತಿಶತ 15.00ರಷ್ಟು ಮಾಹಿತಿದಾರರು ಯಾರನ್ನೂ ಆಹ್ವಾನಿಸುವುದಿಲ್ಲ. ಈ ಮೇಲಿನ ಅಂಕಿ-ಅಂಶಗಳ ಪ್ರಕಾರ ಗೋವೆಯಲ್ಲಿ ಲಂಬಾಣಿಗರು ಹೆಚ್ಚಾಗಿ ಸ್ಥಳಿಯರೊಂದಿಗೆ ಸಾಮಾಜಿಕ ಸಂಬಂಧ ಹೊಂದಿರುವುದು ಕಂಡುಬರುತ್ತದೆ.

**ಗೋವೆಯಲ್ಲಿ ಲಂಬಾಣಿಗರ ಸಾಮಾಜಿಕ ಸ್ಥಾನ-ಮಾನಗಳು:**

ಸಮಾಜದಲ್ಲಿ ಒಬ್ಬ ವ್ಯಕ್ತಿಯ ಸ್ಥಾನಮಾನಗಳು ಆತ ಹೊಂದಿರುವ ಉದ್ಯೋಗ, ಜಾತಿ, ಆರ್ಥಿಕತೆ, ಅಧಿಕಾರ ಮುಂತಾದವುಗಳನ್ನು ಆಧರಿಸಿರುತ್ತದೆ. ಉನ್ನತಮಟ್ಟದ ಉದ್ಯೋಗಗಳಲ್ಲಿರುವವರು ಸಮಾಜದಲ್ಲಿ ಉನ್ನತ ಸ್ಥಾನಮಾನ, ಗೌರವ ಪಡೆದರೆ, ಕೆಳಮಟ್ಟದ ಉದ್ಯೋಗ ಮಾಡುವವರು ಕೆಳಮಟ್ಟದ ಸ್ಥಾನ-ಮಾನಗಳನ್ನು ಪಡೆಯುತ್ತಾರೆ. ಲಂಬಾಣಿಗರು ಹೆಚ್ಚಾಗಿ ಕೂಲಿ ಕೆಲಸಗಳನ್ನು ಅವಲಂಬಿಸಿದ್ದರಿಂದ ಗೋವೆಯಂತಹ ಶ್ರೀಮಂತ ಸಮೃದ್ಧ ಸಮಾಜದಲ್ಲಿ ಇವರ ಸ್ಥಾನ-ಮಾನಗಳು ಕೆಳಮಟ್ಟದಲ್ಲಿವೆ. ಲಂಬಾಣಿಗರ ಸ್ಥಾನ-ಮಾನಗಳನ್ನು ತಿಳಿದುಕೊಳ್ಳಲು ನನ್ನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಲಂಬಾಣಿಗರಿಗೆ ಗೋವೆಯಲ್ಲಿ ಒಳ್ಳೆಯ ಸ್ಥಾನ-ಮಾನ ದೊರೆಯುತ್ತಿದೆಯೆ? ಎಂದು ಕೇಳಿದ ಪ್ರಶ್ನೆಗೆ ಪ್ರತಿಶತ 25.00ರಷ್ಟು ಮಾಹಿತಿದಾರರು ಹೌದು ಎಂದು ಹಾಗೂ ಪ್ರತಿಶತ 75.00ರಷ್ಟು ಮಾಹಿತಿದಾರರು ಸ್ಥಾನಮಾನಗಳು ದೊರೆಯುತ್ತಿಲ್ಲ ಎಂದು ಪ್ರತಿಕ್ರಿಯೆ ನೀಡಿದ್ದಾರೆ. ಬಹುಶಃ ಕೂಲಿ ಕೆಲಸ ಮಾಡುವುದರಿಂದ ಸ್ವಚ್ಛತೆ ಕಾಪಾಡಿಕೊಳ್ಳದಿರುವುದರಿಂದ, ಬೇರೆ ಪ್ರದೇಶಗಳಿಂದ ವಲಸೆ ಬಂದಿರುವುದರಿಂದ, ಕೊಳಚೆ ಪ್ರದಶಗಳಲ್ಲಿ ವಾಸವಾಗಿರುವುದರಿಂದ, ಅವಿದ್ಯಾವಂತರಾಗಿದ್ದರಿಂದ ಸಾಮಾಜಿಕ ಸ್ಥಾನ-ಮಾನಗಳು ದೊರೆಯುತ್ತಿಲ್ಲ. ಕೆಲವರು ಪ್ರಾಮಾಣಿಕವಾಗಿ ಕೆಲಸ ಮಾಡುವುದರಿಂದ, ಶ್ರಮಜೀವಿಗಳಾಗಿದ್ದರಿಂದ, ದೂರದಿಂದ ವಲಸೆ ಬಂದಿರುವುದಿಂದ ಸಾಮಾಜಿಕ ಸ್ಥಾನಮಾನಗಳನ್ನು ಗಳಿಸಿಕೊಂಡಿದ್ದಾಗಿ ಅಭಿಪ್ರಾಯಪಟ್ಟಿದ್ದಾರೆ. ಲಂಬಾಣಿಗರಿಗೆ ಗೋವೆಯಲ್ಲಿ ಕಷ್ಟ-ಕಾರ್ಪಣ್ಯಗಳು ಬಂದಾಗ ವಿವಿಧ ಜನರಿಂದ ಸಹಾಯ ಪಡೆಯುತ್ತಿರುವುದನ್ನು ಮುಂದಿನ ಕೋಷ್ಟಕದ ಸಹಾಯಿದಿಂದ ನೋಡಬಹುದು.

**ಕೋಷ್ಟಕ 48, ವಲಸಿಗರಿಗೆ ಕಷ್ಟ-ಕಾರ್ಪಣ್ಯ ಬಂದಾಗ ಸಹಾಯ ಪಡೆಯುವ ಸಮುದಾಯದ ಜನರ ಆಧಾರಿತ ಸಂಖ್ಯೆ ಮತ್ತು ಶೇಕಡವಾರು ಹಂಚಿಕೆ (Number & percentage distribution of migrants by from whom they want help in difficulty)**

| ಜನರು | ಸಂಖ್ಯೆ | ಪ್ರತಿಶತ |
|---|---|---|
| ನಮ್ಮ ಜಾತಿಯ ಜನರಿಂದ | 37 | 61.67 |
| ಸ್ಥಳೀಯ ಗೋವೆಯ ಜನರಿಂದ | 23 | 38.33 |
| ಒಟ್ಟು | **60** | **100.00** |

ಮೇಲಿನ ಕೋಷ್ಟಕದ ಪ್ರಕಾರ ಪ್ರತಿಶತ 61.67ರಷ್ಟು ಮಾಹಿತಿದಾರರು ತಮ್ಮ ಜಾತಿಯ ಜನರಿಂದ ಹಾಗೂ ಪ್ರತಿಶತ 38.33ರಷ್ಟು ಮಾಹಿತಿದಾರರು ಸ್ಥಳಿಯ ಸಮುದಾಯಗಳಿಂದ ತಮಗೆ ಕಷ್ಟ-ಕಾರ್ಪಣ್ಯಗಳು ಬಂದಾಗ ಸಹಾಯ ಪಡೆಯುತ್ತಿದ್ದಾರೆ. ಸ್ಥಳಿಯ ಗೋವೆಯ ಜನರು ಲಂಬಾಣಿಗರಿಗೆ ಕಷ್ಟದ ಸಮಯದಲ್ಲಿ ಆರ್ಥಿಕ ಸಹಾಯಮಾಡುತ್ತಿದ್ದಾರೆ. ಉದಾರಣೆಗೆ: ಸಂಗತಿ; 17ರ ಕುಟುಂಬದಲ್ಲಿಯ ಸೇವಪ್ಪ ಚವ್ಹಾಣ ಎಂಬ ವ್ಯಕ್ತಿ 1975ರಲ್ಲಿ ಗೋವೆಗೆ ವಲಸೆ ಬಂದು ವಾಸ್ಕೋನಗರದಿಂದ ಸುಮಾರು 15 ಕಿ.ಮೀ. ದೂರದಲ್ಲಿರುವ ಪಿಲಾರ ಪಟ್ಟಣದ ಹೊರವಲಯದಲ್ಲಿ ನರಸಲಗಿ ತಾಂಡಾದ ಲಂಬಾಣಿಗರೊಂದಿಗೆ ವಾಸವಾಗಿದ್ದಾನೆ. ಇವನ ಕುಟುಂಬದಲ್ಲಿ ಒಟ್ಟು 8 ಜನ ಸದಸ್ಯರಿದ್ದಾರೆ.ಇವರಲ್ಲಿ 4 ಜನರು ಕೂಲಿ ಕೆಲಸದಲ್ಲಿ ತೊಡಗಿದ್ದಾರೆ. ಈತನು ಅನಾರೋಗ್ಯದಿಂದ ಬಳಲುತಿದ್ದು ದುಡಿದ ಹಣ ಜೀವನ ಸಾಗಿಸಲು ಹಾಗೂ ಆಸ್ಪತ್ರೆಯ ಖರ್ಚಿಗೆ ಸಾಕಾಗುವುದಿಲ್ಲ ಆರ್ಥಿಕ ಸಂಕಷ್ಟ ಬಂದಾಗ ಸ್ಥಳಿಯ ಕ್ರೈಸ್ತ ಸಮುದಾಯದ ಶ್ರೀಮಂತ ವ್ಯಕ್ತಿ ಪಿ.ಓ.ರವರಿಂದ ಇವರು ಮೇಲಿಂದ ಮೇಲೆ ಬಡ್ಡಿ ರಹಿತ ಆರ್ಥಿಕ ಸಹಾಯ ಪಡೆಯುತ್ತಿದ್ದಾರೆ. ಇದರಿಂದ ಕೆಲವು ಲಂಬಾಣಿಗರು ಸ್ಥಳಿಯರೊಂದಿಗೆ ಒಳ್ಳೆಯ ಸಾಮಾಜಿಕ ಸಂಬಂಧ ಹೊಂದಿರುವುದು ಕಂಡುಬರುತ್ತದೆ.

**ಮತಾಂತರ (Conversion)**

ನಗರಪ್ರದೇಶದಲ್ಲಿಯ ಉದ್ಯೋಗವಕಾಶಗಳಿಗೆ ಆಕರ್ಶಿತರಾಗಿ ಆರ್ಥಿಕವಾಗಿ ಸುಧಾರಿಸುವ ಆಸೆ-ಆಕಾಂಕ್ಷೆಗಳನಿಟ್ಟುಕೊಂಡು ವಲಸೆ ಬರುವ ಕೂಲಿಕಾರರು ಒಂದು ಕಡೆ ಆರ್ಥಿಕವಾಗ ಚೇತರಿಸಿಕೊಳ್ಳುತ್ತಿದ್ದರೆ. ಇನ್ನೊಂದು ಕಡೆ ಸಂಸ್ಕೃತಿ, ಆಚಾರ-ವಿಚಾರಗಳಲ್ಲಿ ಬದಲಾವಣೆ ತಂದುಕಳ್ಳಬೇಕಾದ ಅನಿವಾರ್ಯತೆ ಉಂಟಾಗುತ್ತದೆ. ನಗರಪ್ರದೇಶಗಳಲ್ಲಿ ವಸತಿ ಸಮಸ್ಯೆಯಿರುವುದರಿಂದ ವಿವಿಧ-ಸಾಮಾಜಿಕ ಸಾಂಸ್ಕೃತಿಕ ಹಿನ್ನೆಲೆಯ ಜನರು ಕೊಳಚೆ ಪ್ರದೇಶಗಳಲ್ಲಿ ನೆಲೆಸುವುದು ಅನಿವಾರ್ಯವಾಗುತ್ತದೆ. ಆದ್ದರಿಂದ ನಗರಗಳನ್ನು 'melting pot of cultures' 'ಸಂಸ್ಕೃತಿ ಕರಗುವ ಪಾತ್ರೆ' ಎಂದು ವಿವರಿಸಲಾಗಿದೆ. ನಗರಗಳಲ್ಲಿ ಲಂಬಾಣಿಗಳಂತಹ ಆರ್ಥಿಕವಾಗಿ ದುರ್ಬಲವಿರುವ ಸಮುದಾಯದ ಜನರು ತಮ್ಮ ಆರ್ಥಿಕತೆ ಸುಧಾರಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ಆದ್ದರಿಂದ ಆರ್ಥಿಕ ಹಾಗೂ ಉದ್ಯೋಗಾವಕಾಶಗಳನ್ನು ಪಡೆಯಲು ಲಂಬಾಣಿಗರು ಕ್ರೈಸ್ತ ಧರ್ಮಕ್ಕೆ ಮತಾಂತರ ಹೊಂದಲು ಪ್ರಯತ್ನಿಸುತ್ತಿದ್ದಾರೆ. ನನ್ನ ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ನರಸಲಗಿ ತಾಂಡಾದ ಮಾಹಿತಿದಾರರಿಗೆ ಲಂಬಾಣಿಗರು ಕ್ರೈಸ್ತ ಧರ್ಮಕ್ಕೆ ಮತಾಂತರ ಹೊಂದುತ್ತಿದ್ದಾರೆಯೆ? ಎಂದು ಕೇಳಿದ ಪ್ರಶ್ನೆಗೆ ಪ್ರತಿಶತ 23.33ರಷ್ಟು ಮಾಹಿತಿದಾರರು ಹೌದು ಎಂದು, ಪ್ರತಿಶತ 13.33ರಷ್ಟು ಮಾಹಿತಿದಾರರು ಇಲ್ಲಾ ಎಂದು ಹಾಗೂ ಪ್ರತಿಶತ 63.33ರಷ್ಟು ಮಾಹಿತಿದಾರರು ಗೊತ್ತಿಲ್ಲ ಎಂದು ಪ್ರತಿಕ್ರಿಯೆ ನೀಡಿದ್ದಾರೆ. ನಮ್ಮ ನಮೂನೆ ಅಧ್ಯಯನದ ಕುಟುಂಬಗಳಲ್ಲಿ ಪ್ರತಿಶತ 5.00ರಷ್ಟು ಮಾಹಿತಿದಾರರು ಕ್ರೈಸ್ತ ಧರ್ಮಕ್ಕೆ ಮತಾಂತರ ಹೊಂದಲು ಸಿದ್ಧತೆ ನಡೆಸಿದ್ದಾರೆ. ಉದಾಹರಣೆಗೆ: ಸಂಗತಿ: 10ರಲ್ಲಿ ಬರುವ ಕುಟುಂಬದ ಸದಸ್ಯರು 1965ರಲ್ಲಿ ಭೀಕರ ಬಡತನ ಅನುಭವಿಸಿ ಗೋವೆಗೆ ಬರಲು ಪ್ರಯಾಣ ಮಾಡಲು ಹಣವಿಲ್ಲದೆ ಜಾನುವಾರು ಮಾರಿ ಗೋವೆಗೆ ಕುಟುಂಬ ಸಮೇತ ವಲಸೆ ಬಂದು ವಾಸ್ಕೋನಗರದ ಮಂಗೂರಹಿಲ್. ಕೊಳಚೆ ಪ್ರದೇಶದಲ್ಲಿ ನೆಲೆಸಿದ್ದಾರೆ. ಇವರು ಅನಧಿಕೃತ ಜಾಗದಲ್ಲಿ ಮನೆ ನಿರ್ಮಿಸಿದ್ದಾರೆ.

ಈ ಕುಟುಂಬದಲ್ಲಿ 8 ಜನರು ವಾಸವಾಗಿದ್ದು, ಇಡೀ ಕುಟುಂಬ ಬಲಿವರ್ಸ್ ಚರ್ಚ್ ಇಂಡಿಯಾದ ಕಾರ್ಯಕರ್ತರ ಮೂಲಕ ಸ್ವಇಚ್ಛೆಯಿಂದ ಕ್ರೈಸ್ತ ಧರ್ಮಕ್ಕೆ ಮತಾಂತರ ಹೊಂದಲು ಸಿದ್ಧತೆ ನಡೆಸಿದ್ದಾರೆ. ಇವರು ಪ್ರತಿ ಬುಧವಾರ ಹಾಗೂ ರವಿವಾರ ಚರ್ಚುಗಳಿಗೆ ಪ್ರಾರ್ಥಿಸಲು ಹೋಗುತ್ತಾರೆ. ಈ ಕುಟುಂಬದ ಸದಸ್ಯರು ಲಂಬಾಣಿ ದೇವತೆಗಳನ್ನು ಆರಾಧಿಸುವುದನ್ನು, ಸ್ತ್ರೀಯರು ಮಾಂಗಲ್ಯ ಹಾಗೂ ಕುಂಕುಮ ಹಚ್ಚುವುದನ್ನು ತ್ಯಜಿಸಿದ್ದಾರೆ. ಮತಾಂತರಕ್ಕೆ ಸಿದ್ಧತೆ ನಡೆಸುತ್ತಿರುವ ನಂತರದ ಅವಧಿಯಲ್ಲಿ ಈ ಕುಟುಂಬದ ಸಾಮಾಜಿಕ-ಆರ್ಥಿಕ ಜೀವನದಲ್ಲಿ ಪರಿವರ್ತನೆಗಳಾಗಿವೆ. ಇಬ್ಬರು ವಿದ್ಯಾವಂತ ಸದಸ್ಯರಿಗೆ ಬ್ಯಾಂಕ್ ಹಾಗೂ ಏರ್‌ಪೋರ್ಟಿನಲ್ಲಿ ಖಾಸಗಿ ಉದ್ಯೋಗ ದೊರೆತಿದೆ. ಈ ಕುಟುಂಬದ ಸದಸ್ಯರು ತಮಗೆ ಗೋವೆಯಲ್ಲಿ ಯಾವುದೇ ತೊಂದರೆಯಾಗುವುದಿಲ್ಲವೆಂದು ಹೇಳುತ್ತಾರೆ.

ಲಂಬಾಣಿಗರನ್ನು ಮತಾಂತರಗೊಳಿಸಲು ಗೋವೆಯಲ್ಲಿ ಕೆಲವು ಪ್ರಯತ್ನಗಳು ನಡೆದಿವೆ. ಸಿಕೇರಿಒಡ್ಡಾ ಹಾಗೂ ಬಾಣಸ್ತರಿ ಗ್ರಾಮಗಳ ಹತ್ತಿರದ ಪ್ರದೇಶಗಳಲ್ಲಿ ವಾಸವಾಗಿರುವ ಲಂಬಾಣಿಗರಿಗೆ (ಬಿ.ಸಿ.ಐ.) ಬಿಲಿವರ್ಸ್ ಚರ್ಚ್ ಆಫ್ ಇಂಡಿಯಾ ಸಂಸ್ಥೆಯ ಕಾರ್ಯಕರ್ತರು ಹಾಗೂ ಈಗಾಗಲೇ ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರಗೊಂಡ ಲಂಬಾಣಿಗರು ಕೂಲಿಕಾರರ ವಾಸಸ್ಥಳಗಳಿಗೆ ಬಂದು ಆಹಾರ ಪದಾರ್ಥಗಳನ್ನು ಹಂಚುವುದು, ಉದ್ಯೋಗ, ಮನೆ ಒದಗಿಸುವ ಆಸೆ-ಆಕಾಂಕ್ಷೆ ಒಡ್ಡಿ ಮತಾಂತರ ಹೊಂದುವಂತೆ ಲಂಬಾಣಿಗರ ಮನಹೊಲಿಸಲು ಪ್ರಯತ್ನಿಸುತ್ತಿದ್ದಾರೆ. ಮತಾಂತರ ಹೊಂದಿದ ಲಂಬಾಣಿ ಜನರಿಂದ ಲಂಬಾಣಿ ಭಾಷೆಯಲ್ಲಿ ಮತಾಂತರಕ್ಕೆ ಸಂಬಂಧಿಸಿದ ರೇಡಿಯೋ ಕಾರ್ಯಕ್ರಮಗಳನ್ನು ಭಿತ್ತರಿಸುತ್ತಿದ್ದಾರೆ.

ವಾಸ್ಕೋನಗರದ ಮಂಗೂರ್‌ಹಿಲ್ ಕೊಳಚೆ ಪ್ರದೇಶದ ಸಮುದಾಯಭವನದಲ್ಲಿ ಕರ್ನಾಟಕದ ಶಿರಸಿಯ ಮತಾಂತರಗೊಂಡ ಯುವಕ, ವಾರಕ್ಕೊಮ್ಮೆ ಪ್ರಾರ್ಥನೆ ನಡೆಸುತ್ತಿದ್ದು, ಇದರಲ್ಲಿ ಲಂಬಾಣಿಗರು ಭಾಗವಹಿಸುತ್ತಿದ್ದಾರೆ. ಪ್ರಾರ್ಥನೆ ಮಾಡುವಾಗ ಜನರು ಮೈಯ್ಯಲ್ಲಿ ದೇವರು ಬಂದವರಂತೆ ನಟಿಸುತ್ತಾರೆ. ಪ್ರಾರ್ಥನೆಯಲ್ಲಿ ಪಾಲ್ಗೊಳ್ಳುವುದರಿಂದ ಅನೇಕ ರೋಗ ರುಜಿನುಗಳು ದೂರವಾಗಿವೆ ಎಂದು ಲಂಬಾಣಿಗರು ಪ್ರತಿಕ್ರಿಯೆ ನೀಡಿದ್ದಾರೆ. ಬಿ.ಸಿ.ಐ. ಕಾರ್ಯಕರ್ತ ಗಣೇಶನನ್ನು ಸಂದರ್ಶಿಸಿ, ಲಂಬಾಣಿಗರಿಗೆ ಮತಾಂತರಗೊಳಿಸಲು ಪ್ರಯತ್ನಿಸುತ್ತಿರುವಿರಾ? ಎಂದು ಕೇಳಿದ ಪ್ರಶ್ನೆಗೆ ಉತ್ತರಿಸುತ್ತಾ ನಾವು ಯಾರನ್ನು ಬಲವಂತವಾಗಿ ಮತಾಂತರಗೊಳಿಸಲು ಪ್ರಯತ್ನಿಸುವುದಿಲ್ಲ. ಎಲ್ಲಾ ದೇವರ ಕೈಯ್ಯಲ್ಲಿದೆ. ತಾವಾಗಿ ಜನರು ನಮ್ಮ ಧರ್ಮಕ್ಕೆ ಬರಬಹುದು ಅಥವಾ ಬಿಡಬಹುದು ಎಂದು ಉತ್ತರಿಸಿದ್ದಾನೆ. ಕೆಲವು ಲಂಬಾಣಿಗರು ಹಣ, ಉದ್ಯೋಗ ಹಾಗೂ ಇನ್ನಿತರ ಸೌಲಭ್ಯಗಳ ಆಸೆಯಿಂದ ಮತಾಂತರಗೊಳ್ಳುತ್ತಿದ್ದಾರೆ. ಇನ್ನು ಕೆಲವರು ಗೋವೆಯಲ್ಲಿ ಮುಂದಿನ ದಿನಗಳಲ್ಲಿ ಬದುಕಿ ಬಾಳಲು ತೊಂದರೆ ಬರಬಾರದು ಎಂಬ ಕಾರಣಕ್ಕಾಗಿ ಮತಾಂತರ ಹೊಂದುತ್ತಿದ್ದಾರೆ.

**ಮತಾಂತರ ಹೊಂದಲು ಸಿದ್ಧತೆ ನಡೆಸಿರುವ ಕುಟುಂಬಗಳಲ್ಲಿ ಕೆಲವೊಂದು ಪರಿವರ್ತನೆಗಳಾಗಿವೆ. ಅವುಗಳು;**

1. ಕುಟುಂಬದ ಸದಸ್ಯರು ಮಧ್ಯಪಾನ, ಮಾದಕ ಪದಾರ್ಥ, ಸೇವಿಸುವುದನ್ನು ನಿಲ್ಲಿಸಿದಿದ್ದಾರೆ.
2. ತಮ್ಮ ಮಕ್ಕಳಿಗೆ ಇಂಗ್ಲಿಷ್ ಮಾಧ್ಯಮದ ವಸತಿ ಶಾಲೆಗಳಲ್ಲಿ ಪ್ರವೇಶ ದೊರಕಿಸಿ ಕೊಟ್ಟಿದ್ದಾರೆ.

3. ಹೋಟೇಲ್, ಕಾರ್ಖಾನೆ, ಬ್ಯಾಂಕ್ ಮುಂತಾದವುಗಳಲ್ಲಿ ಉದ್ಯೋಗ ಪಡೆಯುತ್ತಿದ್ದಾರೆ.

4. ವಾಸಿಸಲು ಮನೆಗಳನ್ನು ಪಡೆದಿದ್ದಾರೆ.

5. ಗೋವೆಯಲ್ಲಿ ಧೈರ್ಯದಿಂದ ಜೀವನ ಸಾಗಿಸುತ್ತಿದ್ದೇವೆಂದು ಪ್ರತಿಕ್ರಿಯೆ ನೀಡಿದ್ದಾರೆ.

6. ಮತಾಂತರಕ್ಕೆ ಸಿದ್ಧತೆ ನಡೆಸಿರುವ ಕುಟುಂಬಗಳು ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿರುವುದು ಕಂಡುಬರುತ್ತದೆ.

**ಅಪಮಾರ್ಗೀ ಉಪಸಂಸ್ಕೃತಿ (Deviant Sub-Culture):**

ಕೊಳಚೆ ಪ್ರದೇಶಗಳಲ್ಲಿ ವಿವಿಧ ಉದ್ಯೋಗಗಳನ್ನಾಧರಿಸಿದ ಕಡಿಮೆ ಆದಾಯ ಹೊಂದಿದ ಜನರು ವಾಸವಾಗಿರುತ್ತಾರೆ. ಉದಾಹರಣೆಗೆ ಭಾರತದ ಪ್ರಮುಖ ನಗರಗಳಲ್ಲಿ ಒಂದಾದ ಮದ್ರಾಸ್‌ನಲ್ಲಿ ಚನ್ನಾಗರವೆಂಬ ಕೊಳಚೆ ಪ್ರದೇಶವಿದ್ದು, 1970ನೇ ಸಾಲಿನಲ್ಲಿ ಈ ಕೆಳಚೆ ಪ್ರದೇಶದಲ್ಲಿ ವಾಸವಾಗಿದ್ದ ಕಡುಬಡವರ ಸಂಖ್ಯೆ 1,850 ಇತ್ತು ಮತ್ತು ಅಲ್ಲಿಯ ಕುಟುಂಬಗಳ ಸಂಖ್ಯೆ 376 ಈ ಪ್ರದೇಶದಲ್ಲಿ ವಾಸವಾಗಿದ್ದ ಜನಸಾಮಾನ್ಯರು ವಿವಿಧ ಪ್ರಕಾರದ ಉದ್ಯೋಗಗಳಾದ ಪ್ರತಿಶತ 9.00ರಷ್ಟು ಸೇಲ್ಸಮನ್ನರು, ಪ್ರತಿಶತ 14.00ರಷ್ಟು ಪರಿಣಿತ ಹಾಗೂ ಅರೆ ಪರಿಣಿತ ಕೆಲಸಗಾರರು, ಪ್ರತಿಶತ 4.00ರಷ್ಟು ಕಾರ್ಖಾನೆ ಕಾರ್ಮಿಕರು, ಪ್ರತಿಶತ 46.00ರಷ್ಟು ಸಾಮಾನ್ಯ ಕೂಲಿಕಾರರು ಹೀಗೆ ಹೆಚ್ಚಿನ ಸಂಖ್ಯೆಯಲ್ಲಿ ಕೂಲಿಕಾರರು ವಾಸವಾಗಿದ್ದಾರೆ.[7] ಇದೇ ಪ್ರಕಾರವಾಗಿ ಗೋವೆಯ ಕೊಳಚೆ ಪ್ರದೇಶದಲ್ಲಿಯೂ, ವಿವಿಧ ಸಾಮಾಜಿಕ ಆರ್ಥಿಕ ಹಿನ್ನಲೆಯ ಜನರು ವಾಸವಾಗಿದ್ದಾರೆ. ಇದರಲ್ಲಿ ಹೆಚ್ಚಿನವರು ಕೂಲಿಕೆಲಸವನ್ನು ಅವಲಂಬಿಸಿದ್ದಾರೆ. ಬಯನಾ ಹಾಗೂ ಮಂಗೂರಹಿಲ್ ಕೊಳಚೆ ಪ್ರದೇಶಗಳಲ್ಲಿ ಲಂಬಾಣಿಗರು ತಮ್ಮ ಹತ್ತಿರದ ಸಂಬಂಧಿಕರ ಜೊತೆ ವಾಸವಾಗಿದ್ದಾರೆ. ಇವರಿಂದ ಕಾನೂನು ಉಲ್ಲಂಘನೆಯ ಕ್ರಿಯೆಗಳು ನಡೆಯುತ್ತಿವೆ. ವಲಸಿಗರು ಸಾಂಸ್ಕೃತಿಕ ಕಟ್ಟಪ್ಪಣೆಗಳಿಂದ ಮುಕ್ತವಾಗಿರುವುದರಿಂದ, ನಗರದಲ್ಲಿ ತಲೆ ಮರೆಸಿಕೊಳ್ಳಲು ಅವಕಾಶಗಳಿರುವುದರಿಂದ. ಅಪರಾಧಿ ಮನೋಭಾವನೆ ಬೆಳೆಸಿಕೊಳ್ಳುತ್ತಾರೆ. ಗೋವೆಯ ಕೊಳಚೆ ಪ್ರದೇಶಗಳಲ್ಲಿ ಜನರು ಇಸ್ಪೀಟು ಆಡುವುದು, ಜೂಜಾಟ, ಮಟಕಾ ಆಡುವರು, ಮಾದಕ ಪದಾರ್ಥಗಳ ವ್ಯಾಪಾರ ಹಾಗೂ ಸೇವನೆ, ವೇಶ್ಯಾಟಿಕೆ ಮುಂತಾದ ಅಪಕೃತ್ಯಗಳಲ್ಲಿ ತೊಡಗಿದ್ದಾರೆ. ಇಲ್ಲಿ ಗೌರವದಿಂದ ಬದುಕುವವರ ಸಂಖ್ಯೆ ಕಡಿಮೆ. ಗೌರವದಿಂದ ಬದುಕಿದರೂ ಈ ಸ್ಥಳದಲ್ಲಿ ನಡೆಯುವ ಘಟನೆಗಳ ಸಾಮಾಜಿಕ ಕಳಂಕವನ್ನು ಹೊರಬೇಕಾಗುತ್ತದೆ. ಕೆಲವು ಲಂಬಾಣಿಗರು ಅಪಕೃತ್ಯಗಳಲ್ಲಿ ತೊಡಗಿರುವ ವಿಷಯ ಲಂಬಾಣೇತರರನ್ನು ಸಂದರ್ಶಿಸಿದಾಗ ತಿಳಿದುಬಂದಿದೆ.

**ಮಧ್ಯವ್ಯಸನ (Alcoholism)**

ಲಂಬಾಣಿಗರು ಮೊದಲಿನಿಂದಲೂ ಧಾರ್ಮಿಕ ಸಮಾರಂಭಗಳ ಸಂದರ್ಭಗಳಲ್ಲಿ, ಮಧ್ಯ ಬಳಸುತ್ತಾ ಬಂದಿದ್ದಾರೆ. ಪೂಜೆ ಪುನಸ್ಕಾರ, ನಿಶ್ಚಯಕಾರ್ಯ, ಮರಣಹೊಂದಿದ್ದಾಗ, ಮದ್ಯಪಾನ ಮಾಡುವುದು ಸಾಮಾನ್ಯ ಸಂಗತಿಯಾಗಿದೆ. ಗೋವೆಗೆ ವಲಸೆ ಬಂದಿರುವ ಲಂಬಾಣಿಗರು ಅತೀಯಾಗಿ ಮಧ್ಯಪಾನ

---

7. Paul.D.Weibe 'Social Life in an Indian Slum' (Vikas: 1975)

ಮಾಡುತ್ತಿದ್ದಾರೆ. ನನ್ನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಮದ್ಯಪಾನ ಮಾಡಿ ಕೆಲಸದಲ್ಲಿ ನಿರತರಾಗಿದ್ದ ಲಂಬಾಣಿಗರು ಕಂಡುಬಂದಿದ್ದಾರೆ. ಬಾಣಸ್ತರಿ ಗ್ರಾಮದ ಹತ್ತಿರದ ಪ್ರದೇಶದಲ್ಲಿ ವಾಸವಾಗಿರುವ ನರಸಲಗಿ ತಾಂಡಾದ ಲಂಬಾಣಿಗರು. ರಾತ್ರಿ ವೇಳೆಯಲ್ಲಿ ಮದ್ಯಪಾನ ಮಾಡಿ ಕದನ ಮಾಡುತ್ತಾರೆಂದು ಸ್ತ್ರೀಯರು ದೂರಿದ್ದಾರೆ. ಹಾಗೂ ಸ್ಥಳಿಯ ಗೋವೆಯ ಜನರನ್ನು ಸಂದರ್ಶಿಸಿದಾಗ ಲಂಬಾಣಿಗರು ಅತಿಯಾಗಿ ಮಧ್ಯಪಾನ ಮಾಡುತ್ತಾರೆಂದು ಪ್ರತಿಕ್ರಿಯೆ ನೀಡಿದ್ದಾರೆ. ಮಧ್ಯಪಾನ ಮಾಡಲು ಗೋವೆಯಲ್ಲಿ ಮಧ್ಯ ಅಗ್ಗದರಲ್ಲಿ ಹೇರಳವಾಗಿ ಸಿಗುವುದೇ ಕಾರಣವಾಗಿದೆ.

**ಶೈಕ್ಷಣಿಕ ಸ್ಥಿತಿ-ಗತಿಗಳು :**

ವಲಸಿಗರು ಅವರ ಮಕ್ಕಳಿಗೆ ಕನ್ನಡ ಭಾಷೆಯಲ್ಲಿ ಶಿಕ್ಷಣ ಕೊಡಿಸಲು ಪ್ರಯತ್ನಿಸಿದ್ದರಿಂದ ಗೋವೆಯಲ್ಲಿ ಕನ್ನಡ ಶಾಲೆಗಳು ಪ್ರಾರಂಭವಾಗಿವೆ. ಗೋವೆಯಲ್ಲಿ ಹೆಚ್ಚಾಗಿ ಇಂಗ್ಲಿಷ್, ಮರಾಠಿ, ಕೊಂಕಣಿ ಶಾಲೆಗಳು ಹೆಚ್ಚಾಗಿ ಕಂಡುಬರುತ್ತಿದ್ದು ಕನ್ನಡ ಮಾಧ್ಯಮದ ಶಾಲೆಗಳು ಬಹಳ ಕಡಿಮೆ ಒಟ್ಟು 22 ಕನ್ನಡ ಮಾಧ್ಯಮ ಶಾಲೆಗಳಿವೆ. ಇವುಗಳಲ್ಲಿ, 7 ಹಿರಿಯ ಪ್ರಾಥಮಿಕ ಶಾಲೆಗಳು, ಕಾಳಿದಾಸ ಅಸೋಸಿಯೇಶನ್ಸ್‌ರವರು ನಡೆಸುತ್ತಿರುವ ಎರಡು ಪ್ರೌಢಶಾಲೆಗಳಿವೆ. ವಾಸ್ಕೋನಗರದಲ್ಲಿ 2, ಪೊಂಡಾ ಭಾಗದಲ್ಲಿ 4, ಮಡಗಾಂವನಲ್ಲಿ 1, ಹಿರಿಯ ಪ್ರಾಥಮಿಕ ಶಾಲೆಗಳಿವೆ. ಇವುಗಳಲ್ಲಿ ಸುಮಾರು 350ಕ್ಕೂ ಹೆಚ್ಚು ಕನ್ನಡ ಮಾಧ್ಯಮದ ವಿದ್ಯಾರ್ಥಿಗಳು ಅಭ್ಯಸಿಸುತ್ತಿದ್ದಾರೆ. ವಾಸ್ಕೋದ ಝುವಾರಿನಗರದಲ್ಲಿ 1, ಬೈನಾದಲ್ಲಿ 1 ಪ್ರೌಢಶಾಲೆಗಳಿವೆ. ಪ್ರಾಥಮಿಕ ಶಾಲೆಗಳಲ್ಲಿ 3ನೇ ತರಗತಿಯಿಂದ ಇಂಗ್ಲಿಷ್ ಭಾಷೆ, ನಾಲ್ಕನೆಯ ತರಗತಿಯಿಂದ ಹಿಂದಿ ಭಾಷೆ ಬೋಧಿಸಲಾಗುತ್ತಿದೆ. ವಿದ್ಯಾರ್ಥಿಗಳು ಪುಣೆಯ ಪಠ್ಯಪುಸ್ತಕ ರಚನಾ ಸಮಿತಿ ರಚಿಸಿರುವ ಪಠ್ಯಪುಸ್ತಕಗಳನ್ನು ಅಧ್ಯಯನ ಮಾಡುತ್ತಿದ್ದಾರೆ.

ನನ್ನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಶ್ರೀ ಕಾಳಿದಾಸ ಅಸೋಸಿಯೇಶನ್ಸ್‌ರವರ ಎಲ್ಲಾರಲಿಂಗೇಶ್ವರ ಶಾರದಾ ಮಂದಿರ ಪ್ರೌಢಶಾಲೆ ಜುವಾರಿನಗರ ಗೋವಾ, ಇಲ್ಲಿ ಭೇಟಿ ನೀಡಿದಾಗ 2004-2005ನೇ ಸಾಲಿನಲ್ಲಿ ಒಟ್ಟು 251 ವಿದ್ಯಾರ್ಥಿಗಳು ದಾಖಲಾಗಿದ್ದರು. ಇವರಲ್ಲಿ 53 ಲಂಬಾಣಿ ವಿದ್ಯಾರ್ಥಿಗಳು ಅಧ್ಯಯನ ಮಾಡುತ್ತಿದ್ದಾರೆ. ನರಸಲಗಿ ತಾಂಡಾದ ಕೇವಲ 2 ವಿದ್ಯಾರ್ಥಿಗಳು 5ನೇ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿದ್ದಾರೆ. ನರಸಲಗಿ ತಾಂಡಾದ ಬಹುತೇಕ ಕೂಲಿಕಾರರು ಅವರ ಕೆಲಸದ ಸ್ಥಳಗಳಲ್ಲಿ ನಗರ ಪ್ರದೇಶಗಳ ಹೊರಗೆ ವಾಸವಾಗಿರುವುದರಿಂದ ಅವರ ಮಕ್ಕಳಿಗೆ ಶಿಕ್ಷಣ ಕೊಡಿಸಲು ಸಾಧ್ಯವಾಗುತ್ತಿಲ್ಲ ಹಾಗೂ ಕೆಲವರಿಗೆ ಗೋವೆಯಲ್ಲಿ ಕನ್ನಡ ಶಾಲೆಗಳಿರುವ ವಿಷಯ ತಿಳಿದಿಲ್ಲ.

ಕನ್ನಡ ಮಾಧ್ಯಮದಲ್ಲಿ ಓದಿ ಎಸ್.ಎಸ್.ಎಲ್.ಸಿ ಮುಗಿಸಿರುವ ವಿದ್ಯಾರ್ಥಿಗಳಿಗೆ ಗೋವಾ ಸರ್ಕಾರ ಯಾವುದೇ ಮಾನ್ಯತೆ ನೀಡುತ್ತಿಲ್ಲ.ಇವರಿಗೆ ನಿಗದಿತ ಪಠ್ಯಕ್ರಮ ನೀಡಿಲ್ಲವಾದ್ದರಿಂದ ಪ್ರಸ್ತುತ ಕರ್ನಾಟಕದ ಪಠ್ಯಕ್ರಮವನ್ನು ಅನುಸರಿಸುತ್ತಿದ್ದಾರೆ. ಗೋವೆಯಲ್ಲಿ ಎಸ್.ಎಸ್.ಎಲ್.ಸಿ ಪರೀಕ್ಷಾ ಕೇಂದ್ರ ಇಲ್ಲದ್ದರಿಂದ ವಿದ್ಯಾರ್ಥಿಗಳು ಕಾರವಾರ ತಾಲ್ಲೂಕಿನ ಉಳಗಾದ ಪರೀಕ್ಷಾ ಕೇಂದ್ರಕ್ಕೆ ಬಂದು ಪರೀಕ್ಷೆಗೆ ಕುಳಿತುಕೊಳ್ಳುವ ವ್ಯವಸ್ಥೆಯನ್ನು ಕರ್ನಾಟಕ ಸರ್ಕಾರದ ಶಿಕ್ಷಣ ಇಲಾಖೆ ಕಲ್ಪಿಸಿಕೊಟ್ಟಿದೆ. ಕನ್ನಡ ಶಾಲೆಗಳಿಗೆ ಕಾಡುತ್ತಿರುವ

ಇನ್ನೊಂದು ಸಮಸ್ಯೆ ಏನೆಂದರೆ ಗೋವಾ ಸರ್ಕಾರ ಸ್ಕೂಲ್ ಕೋಡ್. ಸಂಖ್ಯೆ ಕೊಡದಿರುವುದು, ಪ್ರಸ್ತುತ ಕಾರವಾರ ತಾಲ್ಲೂಕಿನ ಉಳಗಾ ಸ್ಕೂಲ್ ಕೋಡ್ ಬಳಸಿಕೊಂಡು ವಿದ್ಯಾರ್ಥಿಗಳಿಗೆ ಪರೀಕ್ಷೆಗೆ ಹಾಜರು ಪಡಿಸುತ್ತಿದ್ದಾರೆ.

ಗೋವಾ ಸರ್ಕಾರ ಉರ್ದು, ಮರಾಠಿ ಹಾಗೂ ಇತರ ಅನ್ಯಭಾಷಾ ಮಾಧ್ಯಮದ ಶಾಲೆಗಳಲ್ಲಿ ನೀಡುವಂತೆ ಕನ್ನಡ ಮಾಧ್ಯಮದ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ನೀಡಿತ್ತಿಲ್ಲ. ಕನ್ನಡ ಶಾಲೆಗಳಲ್ಲಿ ಓದುತ್ತಿರುವ ವಿದ್ಯಾರ್ಥಿಗಳಲ್ಲಿ ಹೆಚ್ಚಿನವರು ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳಿಗೆ ಸೇರಿದ್ದಾರೆ. ಇವರಿಗೆ ಗೋವೆಯಲ್ಲಿ ಜಾತಿ ಪ್ರಮಾಣ ಪತ್ರದಲ್ಲಿ ಜಾತಿ ನಮೂದಿಸದಿರುವುದರಿಂದ ವಿದ್ಯಾರ್ಥಿಗಳು ಸರ್ಕಾರ ಕೊಡಮಾಡಲ್ಪಡುವ ಸೌಲಭ್ಯಗಳಿಂದ ವಂಚಿತರಾಗುತ್ತಿದ್ದಾರೆ. ಉದಾಹರಣೆಗೆ ಕರ್ನಾಟಕದಲ್ಲಿ ಲಂಬಾಣಿಗರಿಗೆ ಪರಿಶಿಷ್ಟ ಜಾತಿಯ ಪಟ್ಟಿಗೆ ಸೇರಿಸಿ ಶೈಕ್ಷಣಿಕ ಹಾಗೂ ಇನ್ನೀತರ ಕ್ಷೇತ್ರಗಳಲ್ಲಿ ಮೀಸಲಾತಿ ಸೌಲಭ್ಯ ಕಲ್ಪಿಸಿದರೆ, ಗೋವೆಯಲ್ಲಿ ಲಂಬಾಣಿಗರನ್ನು ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡದ ಪಟ್ಟಿಗೆ ಸೇರಿಸಿಲ್ಲ. ಸಾಮಾನ್ಯ ಜನರೆಂದು ಪರಿಗಣಿಸಿದ್ದಾರೆ. ಆದ್ದರಿಂದ ಲಂಬಾಣಿಗರು ಸರ್ಕಾರ ಕೊಡಮಾಡಲ್ಪಡುವ ಸೌಲಭ್ಯಗಳಿಂದ ವಂಚಿತರಾಗುತ್ತಿದ್ದಾರೆ.

ಗೋವೆಯಲ್ಲಿ ಪ್ರಸ್ತುತ ಸುಮಾರು 350 ವಿದ್ಯಾರ್ಥಿಗಳು ಕನ್ನಡ ಮಧ್ಯಮದಲ್ಲಿ ಎಸ್.ಎಸ್.ಎಲ್.ಸಿ ಮುಗಿಸಿದ್ದಾರೆ. ಇವರಿಗೆ ಗೋವೆಯ ಕಾಲೇಜುಗಳಲ್ಲಿ ಪ್ರವೇಶ ನಿರಾಕರಿಸುತ್ತಿದ್ದಾರೆ. ಆದರೆ ಮರಾಠಿ ಹಾಗೂ ಉರ್ದು ಮಾಧ್ಯಮಗಳಲ್ಲಿ ಓದಿದ ವಿದ್ಯಾರ್ಥಿಗಳಿಗೆ ಕಾಲೇಜುಗಳಲ್ಲಿ ಪ್ರವೇಶ ನೀಡುತ್ತಿದ್ದಾರೆ. ಇದರಿಂದ ಕನ್ನಡ ಮಾಧ್ಯಮದ ವಿದ್ಯಾರ್ಥಿಗಳಿಗೆ ಪ್ರೌಢಶಿಕ್ಷಣ ಮುಗಿಸಿದ ನಂತರ ಮುಂದೇನು ಮಾಡಬೇಕು ಎಂಬ ಪ್ರಶ್ನೆ ಕಾಡುತ್ತಿದೆ. ವಿದ್ಯಾರ್ಥಿಗಳ ಭವಿಷ್ಯ ತ್ರಿಶಂಕು ಸ್ಥಿತಿಯಲ್ಲಿದೆ ಈ ಸಮಸ್ಯೆ ಬಗೆಹರಿಸಲು ಕಾಳಿದಾಸ ಅಸೋಸಿಯೇಶನ್ಸ್‌ರವರು ಗೋವೆಯಲ್ಲಿಯ ಕನ್ನಡ ಶೈಕ್ಷಣಿಕ ಸಮಸ್ಯೆಗಳ ಬಗ್ಗೆ ಕರ್ನಾಟಕ ಸರ್ಕಾರಕ್ಕೆ ಮನವಿ ಪತ್ರ ಸಲ್ಲಿಸುತ್ತಲೇ ಬಂದಿದ್ದಾರೆ. 1995 ಏಪ್ರಿಲ್ 28ರಂದು ಕರ್ನಾಟಕದ ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ಸಚಿವರಿಗೆ, ಶಿಕ್ಷಣ ಇಲಾಖೆಯ ಮುಖ್ಯ ಕಾರ್ಯದರ್ಶಿಗಳಿಗೆ, ಆಯುಕ್ತರಿಗೆ ಲಿಖಿತ ರೂಪದಲ್ಲಿ ಮನವಿ ಪತ್ರ ಸಲ್ಲಿಸಿದ್ದರೂ ಸಮಸ್ಯೆ ಬಗೆಹರಿದಿಲ್ಲ ಒಟ್ಟಿನಲ್ಲಿ ಗೋವಾ ಕನ್ನಡ ವಿದ್ಯಾರ್ಥಿಗಳ ಸಮಸ್ಯೆಗಳಿಗೆ ಗೋವಾ ಸರ್ಕಾರವಂತೂ ಸ್ಪಂದಿಸುತ್ತಿಲ್ಲ. ಈ ನಿಟ್ಟಿನಲ್ಲಿ ವಿದ್ಯಾರ್ಥಿಗಳ ಸಮಸ್ಯೆಗಳನ್ನು ಬಗೆಹರಿಸುವುದು ಕರ್ನಾಟಕ ಸರ್ಕಾರದ ಕರ್ತವ್ಯವಾಗಿದೆ. ಕನ್ನಡ ಪರ ಚಳುವಳಿ ಮಾಡುವ ಸಂಘ, ಸಂಸ್ಥೆಗಳು ಕರ್ನಾಟಕದಲ್ಲೇ ಕನ್ನಡದ ಪತಾಕಿ ಹಾರಿಸುವ ಬದಲು ಹೊರರಾಜ್ಯದ ಕನ್ನಡಿಗರ ಗೋಳು ಅರಿತು ಅರವ ಸಮಸ್ಯೆಗಳಿಗೆ ಸ್ಪಂದಿಸಲು ಮುಂದಾಗಬೇಕೆಂದು ಗೋವೆಯಲ್ಲಿ ವಾಸವಾಗಿರುವ ಕನ್ನಡಿಗರು, ಲಂಬಾಣಿಗರು, ಕಳಕಳಿಯಿಂದ ವಿನಂತಿಸಿಕೊಂಡಿದ್ದಾರೆ.

**ವಲಸಿಗರ ಸುಧಾರಣೆಯ ಮೌಲ್ಯಮಾಪನ (Evaluation of migrants improvement):**

ಲಂಬಾಣಿಗರು ಗೋವೆಯಲ್ಲಿಯ ಉದ್ಯೋಗಾವಕಾಶಗಳು, ಹೆಚ್ಚಿನ ಕೂಲಿದರವಿರುವುದರಿಂದ ಆರ್ಥಿಕವಾಗಿ ಸುಧಾರಿಸುವ ಕನಸುಗಳನ್ನು ಕಂಡು ಗೋವೆಗೆ ವಲೆಸಬಂದಿದ್ದಾರೆ. ನನ್ನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ

ಲಂಬಾಣಿಗರಿಗೆ ಎಂತಹ ಆಶೆ-ಆಕಾಂಕ್ಷೆಗಳನಿಟ್ಟುಕೊಂಡು ಗೋವೆಗೆ ವಲಸೆ ಬಂದಿರುವಿರಿ? ಎಂದು ಕೇಳಲಾದ ಪ್ರಶ್ನೆಗೆ ಪ್ರತಿಶತ 56.67ರಷ್ಟು ಮಾಹಿತಿದಾರರು ಆರ್ಥಿಕ ಸ್ಥಿತಿ-ಗತಿ ಸುಧಾರಿಸಿಕೊಳ್ಳಲು, ಪ್ರತಿಶತ 31.67ರಷ್ಟು ಮಾಹಿತಿದಾರರು ಹಣ ಸಂಪಾದಿಸಲು, ಪ್ರತಿಶತ 11.67ರಷ್ಟು ಮಾಹಿತಿದಾರರು ಹೊಟ್ಟೆ ತುಂಬಿಸಿಕೊಳ್ಳಲು ವಲಸೆ ಬಂದಿರುವುದಾಗಿ ಪ್ರತಿಕ್ರಿಯೆ ನೀಡಿದ್ದಾರೆ. ಇಂತಹ ಕನಸುಗಳನ್ನು ತಮ್ಮೊಂದಿಗೆ ಹೊತ್ತುಕೊಂಡು ಬಂದ ಲಂಬಾಣಿಗರ ಕನಸುಗಳು ನನಸಾಗಿವೆಯೆ? ಅಥವಾ ಇಲ್ಲವೆ? ಎಂಬುದನ್ನು ತಿಳಿಯುವುದು ತುಂಬಾ ಅತ್ಯವಶ್ಯಕವಾಗಿದೆ. ನನ್ನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ವಲಸಿಗರ ಆರ್ಥಿಕ ಸುಧಾರಣೆಯನ್ನು ತಿಳಿದುಕೊಳ್ಳಲು ನಿಮ್ಮ ಆಶೆ-ಆಕಾಂಕ್ಷೆಗಳು ಈಡೇರಿವೆಯೆ? ಎಂದು ಕೇಳಿದ ಪ್ರಶ್ನೆಗೆ ಈ ಮುಂದಿನಂತೆ ಉತ್ತರಿಸಿದ್ದಾರೆ.

**ಕೋಷ್ಟಕ 49, ವಲಸಿಗರ ಆಶೆ ಆಕಾಂಕ್ಷೆ ಈಡೇರಿಕೆಯ ಆಧಾರಿತ ಸಂಖ್ಯೆ ಮತ್ತು ಶೇಕಡವಾರು ಹಂಚಿಕೆ. (Number & percentage distribution of migrants by fulfillment of abition & sex)**

| ಸುಧಾರಿಸಿದ ಹಂತಗಳು | ಗಂಡು | | ಹೆಣ್ಣು | | ಒಟ್ಟು | |
|---|---|---|---|---|---|---|
| | ಸಂಖ್ಯೆ | ಪ್ರತಿಶತ | ಸಂಖ್ಯೆ | ಪ್ರತಿಶತ | ಸಂಖ್ಯೆ | ಪ್ರತಿಶತ |
| ಪೂರ್ಣವಾಗಿ ಸುಧಾರಿಸಿದ್ದೇವೆ | 8 | 14.55 | 3 | 60 | 11 | 18.33 |
| ಸುಧಾರಿಸಿಲ್ಲ | 3 | 5.45 | 0 | 0.00 | 3 | 5.00 |
| ಸ್ವಲ್ಪ ಸುಧಾರಿಸಿದ್ದೇವೆ | 44 | 80.00 | 2 | 40.00 | 46 | 76.67 |
| **ಒಟ್ಟು** | **55** | **100.00** | **5** | **100.00** | **60** | **100.00** |

ಮೇಲಿನ ಕೋಷ್ಟಕದ ಪ್ರಕಾರ ತಿಳಿದು ಬರುವುದೇನೆಂದರೆ ಪ್ರತಿಶತ 18.33ರಷ್ಟು ಮಾಹಿತಿದಾರರು ಸಂಪೂರ್ಣ ಸುಧಾರಸಿದ್ದೇವೆ ಎಂದು, ಪ್ರತಿಶತ 5.00ರಷ್ಟು ಮಾಹಿತಿದಾರರು ಸುಧಾರಸಿಲ್ಲವೆಂದು ಹಾಗೂ ಪ್ರತಿಶತ 76.67ರಷ್ಟು ಮಾಹಿತಿದಾರರು ಸ್ವಲ್ಪ ಸುಧಾರಿಸಿದ್ದೇವೆ ಎಂದು ಪ್ರತಿಕ್ರಿಯೆ ನೀಡಿದ್ದಾರೆ. ಮೇಲಿನ ಅಂಕಿ-ಅಂಶಗಳಿಂದ ವಲಸೆ ಬಂದ ನಂತರ ಲಂಬಾಣಿಗರ ಆರ್ಥಿಕ ಸ್ಥಿತಿ-ಗತಿಗಳು ಹಂತ-ಹಂತವಾಗಿ ಸುಧಾರಿಸುತ್ತಾ ಸಾಗಿದ್ದು ಕಂಡುಬರುತ್ತದೆ. ಉದಾಹರಣೆಗೆ: ಸಂಗತಿ: 37ರಲ್ಲಿಯ ಕುಟುಂಬದ ಶಂಕರ ಬಡ ಕೂಲಿಕಾರರ ಕುಟುಂಬಕ್ಕೆ ಸೇರಿದ್ದನು. 1987 ರಿಂದ ಕೂಲಿಕೆಲಸಕ್ಕಾಗಿ ಸತತ ಗೋವೆಗೆ ವಲಸೆ ಬರುತ್ತಿದ್ದಾನೆ. ಈತನು ಫಣಜಿಯಿಂದ 15 ಕಿ.ಮೀ. ದೂರದಲ್ಲಿರುವ ಬಾಣಸ್ತರಿ ಗ್ರಾಮದ ಹತ್ತಿರದ ಅರಣ್ಯ ಪ್ರದೇಶದಲ್ಲಿ ಕಲ್ಲು ಅಗೆಯುವ ಕೂಲಿ ಕೆಲಸ ಮಾಡುತ್ತಿದ್ದಾನೆ. ಮಳೆಗಾಲದಲ್ಲಿಯೂ ಈ ಕೆಲಸ ನಿಲ್ಲುವುದಿಲ್ಲ ದಿನಕ್ಕೆ 300 ರಿಂದ 400 ರೂಪಾಯಿ, ಕೂಲಿ ಪಡೆಯುತ್ತಾನೆ. ಮೊದಲು ಈತನು ಕುಟುಂಬದ ಸಮೇತ ವಲಸೆ ಬರುತ್ತಿದ್ದ ಈಗ ಆರ್ಥಿಕ ಪರಿಸ್ಥಿತಿ ಸುಧಾರಿಸಿದ್ದರಿಂದ ಹೆಂಡತಿ ಮಕ್ಕಳನ್ನು ಸ್ವ-ಸ್ಥಳದಲ್ಲಿ ಬಿಟ್ಟು

ಒಬ್ಬಂಟಿಗನಾಗಿ ಗೋವೆಗೆ ವಲಸೆ ಬರುತ್ತಿದ್ದಾನೆ. ಹಾಗೂ ಕೆಲವು ಕೂಲಿಕಾರರನ್ನೂ ಕರೆದುಕೊಂಡು ಬಂದು ಅವರಿಗೆ ಕೆಲಸಕ್ಕೆ ಹಚ್ಚಿ ಕಮಿಷನ್ ಪಡೆಯುತ್ತಾನೆ. ಇವನು ಆರ್ಥಿಕವಾಗಿ ಸುಧಾರಿಸಿದ್ದು ಜನ್ಮಸ್ಥಳದಲ್ಲಿ 12 ಎಕರೆ ಭೂಮಿ ಖರೀದಿಸಿದ್ದಾನೆ. ಹಾಗೂ ಮನೆ ನಿರ್ಮಿಸಿಕೊಂಡಿದ್ದಾನೆ. ಮಕ್ಕಳಿಗೆ ಶಿಕ್ಷಣ ಕೊಡಿಸುತ್ತಿದ್ದಾನೆ. ಹೀಗೆ ಗೋವೆಗೆ ವಲಸೆ ಬರುತ್ತಿರುವುದರಿಂದ ಲಂಬಾಣಿಗರ ಆಶೆ-ಆಕಾಂಕ್ಷೆಗಳು ಹಂತ-ಹಂತವಾಗಿ ಈಡೇರುತ್ತಿವೆ. ಆದರೆ ಕೆಲವರು ತಮ್ಮ ಅಮೂಲ್ಯವಾದ ಆದಾಯವನ್ನು ಕುಡಿತ ಹಾಗೂ ಮಾದಕ ಪದಾರ್ಥಗಳನ್ನು ಸೇವಿಸಲು ಬಳಸುತ್ತಿರುವುದರಿಂದ ಅಥವರಿಗೆ ಬಡತನ ಸಮಸ್ಯೆಯಿಂದ ಮೇಲೆ ಬರಲು ಸಾಧ್ಯವಾಗುತ್ತಿಲ್ಲ.

**ಪ್ರಭಾವ ಮತ್ತು ಭವಿಷತ್ತಿನ ಯೋಚನೆಗಳು (Impression and future plan's)**

ಕೂಲಿಕೆಲಸ ಮಾಡಲು ಗೋವೆಗೆ ವಲಸೆ ಬಂದಿರುವ ಲಂಬಾಣಿಗರು ಸ್ಥಳಿಯ ಜನರಿಂದ ದೂರದ ಪ್ರದೇಶಗಳಲ್ಲಿ ಪ್ರತ್ಯೇಕವಾಗಿ ವಾಸವಾಗಿದ್ದಾರೆ. ಆದ್ದರಿಂದ ಕೆಲಸ ಕೊಟ್ಟ ಮಾಲಿಕರು ಮಾತ್ರ ಹೆಚ್ಚಾಗಿ ಲಂಬಾಣಿಗರಿಗೆ ಆರ್ಥಿಕ ಸಹಾಯ ಮಾಡುತ್ತಾರೆ. ನನ್ನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗೋವೆಯ ಜನರು ಲಂಬಾಣಿಗರ ಮೇಲೆ ಎಂತಹ ಪ್ರಭಾವ ಬೀರಿದ್ದಾರೆ? ಎಂದು ಕೇಳಿದ ಪ್ರಶ್ನೆಗೆ ಪ್ರತಿಶತ 81.67ರಷ್ಟು ಮಾಹಿತಿದಾರರು ಉದಾರ ಭಾವನೆ ಹೊಂದಿದ್ದಾರೆ ಎಂದು, ಪ್ರತಿಶತ 18.33ರಷ್ಟು ಮಾಹಿತಿದಾರುರು ಉದಾರ ಭಾವನೆ ಹೊಂದಿಲ್ಲವೆಂದು ಪ್ರತಿಕ್ರಿಯೆ ನೀಡಿದ್ದಾರೆ. ಗೋವೆಯಲ್ಲಿ ಲಂಬಾಣಿಗರ ಸಾಮಾಜಿಕ ಜೀವನಕ್ಕೆ ಹೆಚ್ಚಿನ ಅಡೆ-ತಡೆಗಳು ಕಂಡುಬರುವುದಿಲ್ಲ. ಸ್ಥಳಿಯ ಗೋವೆಯ ಜನರಿಗೆ ಲಂಬಾಣಿಗರು ಆರ್ಥಿಕವಾಗಿ ಮುಂದುವರಿಯುತ್ತಿರುವುದು ಸ್ಥಳಯರಿಗೆ ಸಹಿಸಲಿಕ್ಕಾಗದೆ ಬಯನಾದಲ್ಲಿ ಮೀನಿನ ವ್ಯಾಪಾರ ಮಾಡುತ್ತಿರುವ ಲಂಬಾಣಿ ಮಹಿಳೆಯರಿಗೆ ಸ್ಥಳಿಯರು ತಡೆಒಡ್ಡುತ್ತಿದ್ದಾರೆ ಎಂದು ಲಂಬಾಣಿಗರು ದೂರಿದ್ದಾರೆ. ಇದೆ ಪ್ರಕಾರವಾಗಿ ಬಯನಾ ಪ್ರದೇಶದಿಂದ ವಲಸಿಗರನ್ನು ತೆರವುಗೊಳಿಸಿದ್ದರಿಂದ ಲಂಬಾಣಿಗರು ಭಯ-ಭೀತಿಯಿಂದ ಜೀವನ ಸಾಗಿಸುತ್ತಿದ್ದಾರೆ. ಗೋವೆಯಲ್ಲಿ ಇನ್ನು ಮುಂದೆ ಬದುಕುವುದು ತುಂಬಾ ಕಷ್ಟದಾಯಕವಾಗುತ್ತಿದೆ ಎಂದು ಅಭಿಪ್ರಾಯ ವ್ಯಕ್ತ ಪಡಿಸಿದ್ದಾರೆ. ಪಿಲಾರ ಗ್ರಾಮದ ಹತ್ತಿರ ವಾಸವಾಗಿರುವ ಲಂಬಾಣಿಗರಿಗೆ ಬಯನಾ ಕೊಳಚೆ ಪ್ರದೇಶದಿಂದ ವಲಸಿಗರನ್ನು ತೆರವುಗೊಳಿಸಿದ್ದಾಗಿನಿಂದ ಇವರಿಗೆ ಸ್ಥಳಿಯ ಪೊಲೀಸರು ತೊಂದರೆ ಕೊಡುತ್ತಿದ್ದಾರೆ. ಯಾರೋ ಮಾಡುವ ಕಳ್ಳತನದ ಆಪಾದನೆಗಳನ್ನು ಇವರ ಮೇಲೆ ಹಾಕುವುದು, ಮೇಲಿಂದ ಮೇಲೆ, ಇವರು ವಾಸವಾಗಿರುವ ಸ್ಥಳಗಳಿಗೆ ಭೇಟಿ ನೀಡುವುದು, ಇವರ ಭಾವಚಿತ್ರಗಳನ್ನು ತೆಗೆಯುವುದು ಇವರನ್ನು ಒಂದೇ ಕಡೆ ವಾಸಿಸದಂತೆ ಪ್ರತಿಬಂಧಿಸಿದ್ದಾರೆ. ಇಲ್ಲಿ ವಾಸವಾಗಿರುವ ಲಂಬಾಣಿಗರು ಪೊಲೀಸರು ಕೊಡುತ್ತಿರುವ ಕಿರುಕುಳದಿಂದ ಬೇರೆ ಕಡೆ ಹೋಗಲು ಬಯಸಿದ್ದು ಗೋವೆಯಲ್ಲಿ ಹೊಸ ಜಾಗಗಳಲ್ಲಿ ಉಳಿದುಕೊಳ್ಳಲು ಪ್ರತಿಬಂಧವಿದೆ ಆದ್ದರಿಂದ ಅನಿವಾರ್ಯವಾಗಿ ಇಲ್ಲಿ ವಾಸಿಸಬೇಕಾಗಿದೆ. ಹೆಚ್ಚು ವರ್ಷಗಳಿಂದ ವಾಸಿಸುತ್ತಿರುವ ಲಂಬಾಣಿಗರು ಇಂತಹ ಸಂಮಸ್ಯಗಳನ್ನು ಎದುರಿಸುತ್ತಿಲ್ಲಾ ಕೆಲವರು ಗೋವೆಯಲ್ಲಿ ಯಾವುದೇ ತೊಂದರೆಯಿಲ್ಲವೆಂದು ಅಭಿಪ್ರಾಯಪಟ್ಟಿದ್ದಾರೆ.

**ಲಂಬಾಣಿಗರ ತಿರುವಲಸೆಯನ್ನು ಪ್ರಚೋದಿಸುವ ಅಂಶಗಳು (Motivation factors of lambanis return migration)**

ವಲಸೆಯ ದಿಕ್ಕುಗಳು ಯಾವಾಗಲೂ ಏಕರೂಪದಲ್ಲಿ ಕಂಡುಬರುವುದಿಲ್ಲ. ಒಂದು ಪ್ರದೇಶಕ್ಕೆ ವಲಸೆ ಬರುವ ಜನರು ಆ ಪ್ರದೇಶದಲ್ಲಿ ಆರ್ಥಿಕ ಅವಕಾಶಗಳು ಇರದಿದ್ದರೆ ಸ್ವಸ್ಥಳಕ್ಕೆ ಅಥವಾ ಬೇರೆ ನಗರಗಳಿಗೆ ವಲಸೆ ಹೋಗುತ್ತಾರೆ. ಆಶಿಸ್ ಬೋಸ್‌ರವರು ಭಾರತೀಯ ನಗರೀಕರಣವನ್ನು ಸವಿಸ್ತಾರವಾಗಿ ಅಧ್ಯಯನ ಮಾಡಿ ವಲಸೆಯನ್ನು ವಿಶ್ಲೇಷಿಸಿದ್ದಾರೆ ಸೆಳೆದುಕೊಳ್ಳುವ ಹಾಗೂ ತಳ್ಳುವ ಅಂಶಗಳು ಎಲ್ಲಾ ಜನಸಂಖ್ಯಾ ಶಾಸ್ತ್ರೀಯ ಸನ್ನಿವೇಶಗಳಲ್ಲಿ ಕಂಡುಬರುತ್ತವೆ. ತಳ್ಳುವ ಅಂಶಗಳು ಕೇವಲ ಗ್ರಾಮೀಣ ಪ್ರದೇಶಗಳಲ್ಲಿ ಮಾತ್ರ ಕಂಡುಬರದೇ ನಗರ ಪ್ರದೇಶಗಳಲ್ಲಿಯೂ ಕಾರ್ಯರೂಪದಲ್ಲಿರುತ್ತವೆ ಎಂದು ವಾದಿಸಿದ್ದಾರೆ.[8] ಆದ್ದರಿಂದ ವಲಸೆ ಹೋಗುವ ಪ್ರದೇಶದಲ್ಲಿ ಆರ್ಥಿಕ ಅವಕಾಶಗಳು ದೊರೆಯದಿದ್ದರೆ ವಲಸಿಗರು ಬೇರೆ ನಗರ ಪ್ರದೇಶಗಳಿಗೆ ಅಥವಾ ಸ್ವಸ್ಥಳಗಳಿಗೆ ಮರಳಿ ಬರುತ್ತಾರೆ. ಕೆಲವರು ವಲಸೆ ಬಂದ ಪ್ರದೇಶದ ಸಾಮಾಜಿಕ ಜೀವನಕ್ಕೆ ಹೊಂದಿಕೊಂಡು ಶಾಸ್ವತ ನೆಲೆಸುತ್ತಾರೆ. ಮತ್ತೆ ಕೆಲವರು ಮರಳಿ ಜನ್ಮಸ್ಥಳಗಳಿಗೆ ಹೋಗುವ ಆಶೆ-ಆಕಾಂಕ್ಷೆಗಳನ್ನು ಹೊಂದಿರುತ್ತಾರೆ. ಈ ಕೆಳಗಿನ ಕಾರಣಗಳಿಗಾಗಿ ವಲಸಿಗರು ಮರಳಿ ಸ್ವಸ್ಥಳಕ್ಕೆ ಹೋಗುತ್ತಾರೆ.

1. ವಲಸೆ ಬಂದ ಪ್ರದೇಶದಲ್ಲಿಯ ಪರಿಸರ ಜನ್ಮಸ್ಥಳಕ್ಕಿಂತ ಭಿನ್ನವಾಗಿರುವುದರಿಂದ ಹೊಸ ಪರಿಸರಕ್ಕೆ ಹೊಂದಿಕೊಳ್ಳಲು ಸಾಧ್ಯವಾಗದೆ ಸ್ವಸ್ಥಳಗಳಿಗೆ ಮರಳಿ ಹೋಗುತ್ತಾರೆ.
2. ಜನ್ಮಸ್ಥಳದಲ್ಲಿರುವ ಕುಟುಂಬದ ಸದಸ್ಯರು, ಗೆಳೆಯರು, ಸಮುದಾಯದ ಬಗ್ಗೆ ವಲಸಿಗರು ಹೊಂದಿರುವ ಪ್ರೀತಿ ವಾತ್ಸಲ್ಯಗಳು.
3. ರೋಗ ರುಜಿನುಗಳಿಂದ ಬಳಲುತ್ತಿರುವವರು, ವೃದ್ಧರು ಸಾವಿನ ಹಾಸಿಗೆಯಲ್ಲಿರುವವರು ಸ್ವ-ಸ್ಥಳದಲ್ಲಿ ತಮ್ಮ ಸಮಾಧಿ ಕ್ರೀಯೆ ನಡೆಯಬೇಕೆಂಬ ಆಶೆ-ಆಕಾಂಕ್ಷೆ ಹೊಂದುವುದು.
4. ವಲಸೆ ಹೋಗುವ ಪ್ರದೇಶದಲ್ಲಿ ವಲಸಿಗರ ಆಶೆ-ಆಕಾಂಕ್ಷೆಗಳು ಈಡೇರದ ಪರಿಸ್ಥಿತಿಯಲ್ಲಿ ಕೆಲವರು ಸ್ವಸ್ಥಳಗಳಿಗೆ ಮರಳಿ ಬರುತ್ತಾರೆ.
5. ವಲಸಿಗರು ವಲಸೆ ಬಂದ ಪ್ರದೇಶದಲ್ಲಿ ಗಳಿಸಿದ ಪರಿಣತಿ, ವಿಶೇಷಜ್ಞಾನದಿಂದ ಸ್ವಸ್ಥಳದಲ್ಲಿ ಸಮಾಜ ಕಾರ್ಯ ಮಾಡಬೇಕೆಂಬ ಆಶೆ-ಆಕಾಂಕ್ಷೆಗಳನ್ನು ಹೊಂದಿರುವವರು ಜನ್ಮಸ್ಥಳಗಳಿಗೆ ಮರಳಿ ಬರುತ್ತಾರೆ.
6. ಸ್ವ ಸ್ಥಳಗಳಲ್ಲಿ ಭೂಮಿ, ಮನೆ, ಮುಂತಾದ ಆಸ್ತಿಗಳು ಹಾಗೂ ವೃದ್ಧ ತಂದೆ ತಾಯಿಗಳಿರುವುದರಿಂದ ಮರಳಿ ವಲಸೆ ಬರುತ್ತಾರೆ.
7. ಕೆಲವರು ತಾವು ಹಿಡಿದ ಗುತ್ತಿಗೆ ಕಲಸಗಳು ಮುಕ್ತಾಯವಾದ ನಂತರ ಬೇರೆ ಗುತ್ತಿಗೆ ಕೆಲಸಗಳು ಸಿಗುವುದಿಲ್ಲವಾದ್ದರಿಂದ ಮರಳಿ ಬರುತ್ತಾರೆ.

---

8. Ashish Bose: 1975: 'Studies in India's Urbanisation: 1901 - 1971, Tata Mcgraw-Hill Publishing Co-Ltd. NewDelhi.

ನಮ್ಮ ಅಧ್ಯಯನದ ಪ್ರಕಾರ ಗೋವೆಗೆ ವಲಸೆ ಬಂದು ವಾಸವಾಗಿರುವ ನರಸಲಿಗಿ ತಾಂಡಾದ ಲಂಬಾಣಿಗರಿಗೆ ನೀವು ತಿರುಗಿ ನಿಮ್ಮ ಮೂಲಸ್ಥಳಕ್ಕೆ ಹೋಗಲು ಇಚ್ಛಿಸುವಿರಾ? ಎಂದು ಕೇಳಿದ ಪ್ರಶ್ನೆಗೆ ಪ್ರತಿಶತ 86.67ರಷ್ಟು ಮಾಹಿತಿದಾರರು ಹೌದು ಎಂದು, ಪ್ರತಿಶತ 11.67ರಷ್ಟು ಮಾಹಿತಿದಾರರು ಇಲ್ಲಾ ಎಂದು ಹಾಗೂ ಪ್ರತಿಶತ 1.67ರಷ್ಟು ಮಾಹಿತಿದಾರರು ಗೊತ್ತಿಲ್ಲ ಎಂದು ಪ್ರತಿಕ್ರಿಯೆ ನೀಡಿದ್ದಾರೆ. ಇವರಲ್ಲಿ ಹೆಚ್ಚಿನ ಮಾಹಿತಿದಾರರು ತಮ್ಮ ಮೂಲಸ್ಥಳಕ್ಕೆ ಮರಳಿ ಬರುವ ಆಶೆ-ಆಕಾಂಕ್ಷೆಗಳನ್ನು ವ್ಯಕ್ತಪಡಿಸಿದ್ದಾರೆ. ಲಂಬಾಣಿಗರ ತಿರುವಲಸೆಗೆ ಕಾರಣವಾದ ಅಂಶಗಳನ್ನು ಮುಂದಿನ ಕೋಷ್ಟಕದ ಸಹಾಯದಿಂದ ಕಂಡುಕೊಳ್ಳಬಹುದು.

**ಕೋಷ್ಟಕ 50, ವಲಸಿಗರು ಜನ್ಮಸ್ಥಳಕ್ಕೆ ಮರಳಿ ಹೋಗಲು ಕಾರಣವಾದ ಅಂಶಗಳ ಆಧಾರಿತ ಸಂಖ್ಯೆ ಮತ್ತು ಶೇಕಡವಾರು ಹಂಚಿಕೆ (Number & percent of migrants desire to return to their native place by reason)**

| ಕಾರಣಗಳು | ಸಂಖ್ಯೆ | ಪ್ರತಿಶತ |
|---|---|---|
| ಆಸ್ತಿ ಇರುವುದರಿಂದ | 16 | 30.77 |
| ವೃದ್ಧ ತಂದೆ-ತಾಯಿಗಳನ್ನು ನೋಡಿಕೊಳ್ಳಲು | 29 | 55.77 |
| ಸ್ವ-ಸ್ಥಳದ ಬಗ್ಗೆ ಹೊಂದಿರುವ ಮೋಹ-ವಾತ್ಸಲ್ಯಗಳು | 7 | 13.46 |
| **ಒಟ್ಟು** | **52** | **100.00** |

ಮೇಲಿನ ಕೋಷ್ಟಕದ ಪ್ರಕಾರ ಮರಳಿ ಸ್ವ ಸ್ಥಳಗಳಿಗೆ ಬರುವವರಲ್ಲಿ ಪ್ರತಿಶತ 30.77ರಷ್ಟು ಮಾಹಿತಿದಾರರು ಸ್ವ ಸ್ಥಳದಲ್ಲಿ ಆಸ್ತಿ ಇರುವುದರಿಂದ, ಪ್ರತಿಶತ 55.77ರಷ್ಟು ಮಾಹಿತಿದಾರರು ವೃದ್ಧ ತಂದೆ ತಾಯಿಗಳನ್ನು ನೋಡಿಕೊಳ್ಳಲು ಹಾಗೂ ಪ್ರತಿಶತ 13.46ರಷ್ಟು ಮಾಹಿತಿದಾರರು ಸ್ವಸ್ಥಳದ ಬಗ್ಗೆ ಪ್ರೀತಿ ವಾತ್ಸಲ್ಯ ಹೊಂದಿರುವುದರಿಂದ ಮರಳಿ ಸ್ವ ಸ್ಥಳಕ್ಕೆ ಮರಳಿ ಬರಲು ಬಯಸಿದ್ದಾರೆ. ನರಸಲಗಿ ತಾಂಡಾದ ಪ್ರತಿಶತ 11.67ರಷ್ಟು ಮಾಹಿತಿದಾರರು ಸ್ವಸ್ಥಳಕ್ಕೆ ಮರಳಿ ಬರಲು ಬಯಸಿಲ್ಲಾ, ಕಾರಣಗಳನ್ನು ಮುಂದಿನ ಕೋಷ್ಟಕದ ಸಹಾಯಿದಿಂದ ನೋಡಬಹುದು.

**ಕೋಷ್ಟಕ 51, ವಲಸಿಗರು ತಿರುಗಿ ಜನ್ಮಸ್ಥಳಕ್ಕೆ ಹೋಗಲು ಬಯಸದಿರಲು ಕಾರಣವಾದ ಅಂಶಗಳ ಆಧಾರಿತ ಸಂಖ್ಯೆ ಮತ್ತು ಶೇಕಡವಾರು ಹಂಚಿಕೆ (Number & percent of migrants not willing to return to their native place by reason)**

| ಕಾರಣಗಳು | ಸಂಖ್ಯೆ | ಪ್ರತಿಶತ |
|---|---|---|
| ಸ್ವಂತ ಆಸ್ತಿ ಇಲ್ಲದಿರುವುದರಿಂದ | 2 | 28.57 |
| ಗೋವೆಯಲ್ಲಿ ಸತತ ಕೂಲಿ ಕೆಲಸ ಸಿಗುವುದರಿಂದ | 1 | 14.29 |
| ಸ್ವ ಸ್ಥಳದಲ್ಲಿ ಮೇಲಿಂದ ಮೇಲೆ ಬರಗಾಲ ಸಂಭವಿಸುವುದರಿಂದ | 2 | 28.57 |
| ಹೆಚ್ಚಿನ ಕೂಲಿದರಗಳು | 1 | 14.29 |
| ವ್ಯಾಪಾರ ವಹಿವಾಟು ಮಾಡುತ್ತಿರುವುದರಿಂದ | 1 | 14.29 |
| **ಒಟ್ಟು** | 7 | **100.00** |

ಮೇಲಿನ ಕೋಷ್ಟಕದ ಪ್ರಕಾರ ಪ್ರತಿಶತ 28.57ರಷ್ಟು ಮಾಹಿತಿದಾರರು ಆಸ್ತಿ ಇಲ್ಲದಿರುವುದರಿಂದ, ಪ್ರತಿಶತ 14.29ರಷ್ಟು ಮಾಹಿತಿದಾರರು ಗೋವೆಯಲ್ಲಿ ಸತತ ಕೂಲಿ ಕೆಲಸ ಸಿಗುವುದರಿಂದ, ಪ್ರತಿಶತ 28.57ರಷ್ಟು ಮಾಹಿತಿದಾರರು ಸ್ವಸ್ಥಳದಲ್ಲಿ ಮೇಲಿಂದ ಮೇಲೆ, ಬರಗಾಲ ಸಂಭವಿಸುವುದರಿಂದ, ಪ್ರತಿಶತ 14.29ರಷ್ಟು ಮಾಹಿತಿದಾರರು ಹೆಚ್ಚಿನ ಕೂಲಿದರವಿರುವುದರಿಂದ ಹಾಗೂ ಪ್ರತಿಶತ 14.29ರಷ್ಟು ಮಾಹಿತಿದಾರರು ವ್ಯಾಪಾರ ವಹಿವಾಟುಗಳನ್ನು ಮಾಡುತ್ತಿರುವುದರಿಂದ ಮರಳಿ ಸ್ವಸ್ಥಳಕ್ಕೆ ಬರಲು ನಿರಾಕರಿಸಿದ್ದಾರೆ. ಉದಾಹರಣೆಗೆ: ಸಂಗತಿ ಸಂಖ್ಯೆ 12ರಲ್ಲಿಯ ಕುಟುಂಬದ ಲಿಂಬಣ್ಣ ರಾಠೋಡ ಫಣಜಿಯ ಪರವರಿ ಪ್ರದೇಶದಲ್ಲಿ ನೆಲೆಸಿದ್ದು, ಈತನ ಕುಟುಂಬದಲ್ಲಿ ಒಟ್ಟು 5 ಸದಸ್ಯರಿದ್ದಾರೆ. ಸ್ವಸ್ಥಳದಲ್ಲಿ ಈತನಿಗೆ ಯಾವುದೇ ಆಸ್ತಿ ಇಲ್ಲ. 1976ರಲ್ಲಿ ಗೋವೆಗೆ ವಲಸೆ ಬಂದಿದ್ದಾನೆ. ಗೋವೆಯ ಸಾಮಾಜಿಕ ಜೀವನಕ್ಕೆ, ಇಲ್ಲಿಯ ಆಹಾರ ಅಭ್ಯಾಸಗಳಿಗೆ ಹೊಂದಿಕೊಂಡಿದ್ದರಿಂದ ಸತತವಾಗಿ ಉದ್ಯೋಗ ಸಿಗುವುದರಿಂದ ಸ್ವಸ್ಥಳಕ್ಕೆ ತಿರುಗಿ ಹೋಗುವುದಿಲ್ಲ ಎಂದು ಪ್ರತಿಕ್ರಿಯೆ ನೀಡಿದ್ದಾನೆ. ಗೋವೆಯಲ್ಲಿ ಕನ್ನಡಿಗರನ್ನು ಸ್ಥಳಾಂತರಿಸುವ ಕಾರ್ಯ ಏನಾದರೂ ಮುಂದುವರಿದರೆ, ಸಾಮಾಜಿಕ ಜೀವನಕ್ಕೆ ಅಡೆ-ತಡೆಗಳು ಬಂದರೆ ಮಾತ್ರ ಮರಳಿ ಜನ್ಮಸ್ಥಳಕ್ಕೆ ಹೋಗುವುದಾಗಿ ಹೇಳುತ್ತಾನೆ.

ಗೋವೆಗೆ ವಲಸೆ ಬಂದು ಮರಳಿ ತಮ್ಮ ಸ್ವಸ್ಥಳಗಳಿಗೆ ಬಂದು ನೆಲೆಸಿದ ನಂತರವೂ ವಲಸಿಗರು ವಲಸೆ ಹೊದ ಪ್ರದೇಶದ ಬಗ್ಗೆ ಭಾವನಾತ್ಮಕ ಸಂಬಂಧ ಹೊಂದಿರುತ್ತಾರೆ. ನನ್ನ ಕ್ಷೇತ್ರಕಾರ್ಯ ಸಂದರ್ಭದಲ್ಲಿ ಗೋವೆಯಿಂದ ಮರಳಿ ಬಂದು ತಾಂಡಾದಲ್ಲಿ ನೆಲೆಸಿರುವ ಲಂಬಾಣಿಗರು ಗೋವೆಯ ಅವರ ಅನುಭವಗಳನ್ನು ವಿವರಿಸಿದ್ದಾರೆ. ಕೆಲವರು ತಮ್ಮ ಮಕ್ಕಳನ್ನು ಗೋವೆಗೆ ವಲಸೆ ಹೋಗಲು ಪ್ರೋತ್ಸಾಹಿಸುತ್ತಿದ್ದಾರೆ. ಲಂಬಾಣಿಗರಿಗೆ ನೀವು ನಿಮ್ಮ ಮಕ್ಕಳಿಗೆ ಗೋವೆಯಲ್ಲಿ ಉದ್ಯೋಗ ಮಾಡಲು ಪ್ರೋತ್ಸಾಹಿಸುವಿರಾ? ಎಂದು ಕೇಳಿದ ಪ್ರಶ್ನೆಗೆ ಪ್ರತಿಶತ 21.67ರಷ್ಟು ಮಾಹಿತಿದಾರರು ಹೌದು ಎಂದು ಪ್ರತಿಶತ 36.67ರಷ್ಟು ಮಾಹಿತಿದಾರರು ಇಲ್ಲಾ ಎಂದು ಹಾಗೂ ಪ್ರತಿಶತ 41.67ರಷ್ಟು ಮಾಹಿತಿದಾರರು ಗೊತ್ತಿಲ್ಲವೆಂದು ಪ್ರತಿಕ್ರಿಯೆ ನೀಡಿದ್ದಾರೆ. ಲಂಬಾಣಿಗರು ತಮ್ಮ ಮಕ್ಕಳಿಗೆ ಗೋವೆಯಲ್ಲಿ ಉದ್ಯೋಗ ಮಾಡಲು ಪ್ರೋತ್ಸಾಹಿಸಲು ಕಾರಣವಾದ ಅಂಶಗಳನ್ನು ಮುಂದಿನ ಕೋಷ್ಟಕದ ಸಹಾಯದಿಂದ ನೋಡಬಹುದು.

**ಕೋಷ್ಟಕ 52, ವಲಸಿಗರು ತಮ್ಮ ಮಕ್ಕಳಿಗೆ ಗೋವೆಯಲ್ಲಿ ಉದ್ಯೋಗ ಮಾಡಲು ಪ್ರೋತ್ಸಾಹಿಸಲು ಕಾರಣವಾದ ಅಂಶಗಳ ಆಧಾರಿತ ಸಂಖ್ಯೆ ಮತ್ತು ಶೇಕಡವಾರು ಹಂಚಿಕೆ (Number & percentage distribution of migrants who encourage their Children to work in Goa by reason)**

| ಕಾರಣಗಳು | ಸಂಖ್ಯೆ | ಪ್ರತಿಶತ |
|---|---|---|
| ನಿರಂತರ ಉದ್ಯೋಗ ಸಿಗುವುದರಿಂದ | 3 | 23.08 |
| ಸ್ವಸ್ಥಳದಲ್ಲಿ ಸ್ವಂತ ಆಸ್ತಿ ಇಲ್ಲದಿರುವುದರಿಂದ | 1 | 7.68 |
| ಉದ್ಯೋಗ ಸುಲಭವಾಗಿ ಸಿಗುವುದರಿಂದ | 3 | 23.08 |
| ಹೆಚ್ಚಿನ ಕೂಲಿದರ ಇರುವುದರಿಂದ | 6 | 46.16 |
| ಒಟ್ಟು | **13** | **100.00** |

ಮೇಲಿನ ಕೋಷ್ಟಕದ ಪ್ರಕಾರ ಪ್ರತಿಶತ 23.08ರಷ್ಟು ಮಾಹಿತಿದಾರರು ಸತತ ಉದ್ಯೋಗ ಸಿಗುವುದರಿಂದ, ಪ್ರತಿಶತ 7.68ರಷ್ಟು ಮಾಹಿತಿದಾರರು ಸ್ವಸ್ಥಳದಲ್ಲಿ ಆಸ್ತಿ-ಪಾಸ್ತಿ ಇಲ್ಲದಿರುವುದರಿಂದ, ಪ್ರತಿಶತ 23.08ರಷ್ಟು ಮಾಹಿತಿದಾರರು ಉದ್ಯೋಗ ಸುಲಭವಾಗಿಸಿಗುವುದರಿಂದ ಹಾಗೂ ಪ್ರತಿಶತ 46.16ರಷ್ಟು ಮಾಹಿತಿದಾರರು ಹೆಚ್ಚಿನ ಕೂಲಿದರ ಇರುವುದರಿಂದ ಗೋವೆಯಲ್ಲಿ ತಮ್ಮ ಮಕ್ಕಳನ್ನು ಉದ್ಯೋಗ ಮಾಡಲು ಪ್ರೋತ್ಸಾಹಿಸುತ್ತಿದ್ದಾರೆ. ಉದಾಹರಣೆಗೆ: ಸಂಗತಿ ಸಂಖ್ಯೆ 4ರಲ್ಲಿಯ ಕುಟುಂಬದ ಶಿವಾನಂದ ಹಾಗೂ ರಾಜು ಎಂಬ ನರಸಲಗಿ ತಾಂಡಾದ ಯುವಕರು ವಾಸ್ಕೋನಗರದ ಗೋಮ್ಸ ಬ್ರೆಡ್ ತಯಾರಿಸುವ ಬೇಕರಿಯಲ್ಲಿ ಸಹಾಯಕರಾಗಿ ಉದ್ಯೋಗ ಮಾಡುತ್ತಿದ್ದು, ಇವರು ತಮ್ಮ ತಂದೆಯಿಂದ ಪ್ರೋತ್ಸಾಹಿಸಲ್ಪಟ್ಟು ಗೋವೆಗೆ ವಲಸೆ ಬಂದಿದ್ದಾರೆ. ಇವರ ತಂದೆ ಮೊದಲು ಸತತವಾಗಿ 20 ವರ್ಷಗಳವರೆಗೆ ಗೋವಗೆ ವಲಸೆ ಬಂದು ಈಗ ಜನ್ಮಸ್ಥಳದಲ್ಲಿ ವಾಸವಾಗಿದ್ದಾರೆ. ತನ್ನ ಇಬ್ಬರು ಮಕ್ಕಳಿಗೆ ಉದ್ಯೋಗಕ್ಕಾಗಿ ಗೋವೆಗೆ ಕಳುಹಿಸಿ ಕೊಟ್ಟಿದ್ದಾನೆ. ನರಸಲಗಿ ತಾಂಡಾದ ಪ್ರತಿಶತ 36.67ರಷ್ಟು ಮಾಹಿತಿದಾರರು ತಮ್ಮ ಮಕ್ಕಳನ್ನು ಗೋವೆಯಲ್ಲಿ ಉದ್ಯೋಗ ಮಾಡಲು ಪ್ರೋತ್ಸಾಹಿಸುವುದಿಲ್ಲ ಎಂದು ಪ್ರತಿಕ್ರಿಯೆ ನೀಡಿದ್ದಾರೆ. ಲಂಬಾಣಿಗರು ತಮ್ಮ ಮಕ್ಕಳನ್ನು ಗೋವೆಯಲ್ಲಿ ಉದ್ಯೋಗ ಮಾಡಲು ಪ್ರೋತ್ಸಾಹಿಸದಿರಲು ಕಾರಣಗಳನ್ನು ಮುಂದಿನ ಕೋಷ್ಟಕದ ಸಹಾಯದಿಂದ ಕಂಡುಕೊಳ್ಳಬಹುದು.

**ಕೋಷ್ಟಕ 53, ವಲಸಿಗರು ತಮ್ಮ ಮಕ್ಕಳಿಗೆ ಗೋವೆಯಲ್ಲಿ ಉದ್ಯೋಗ ಮಾಡಲು ಪ್ರೋತ್ಸಾಹ ನೀಡದಿರಲು ಕಾರಣವಾದ ಅಂಶಗಳ ಆಧಾರಿತ ಸಂಖ್ಯೆ ಮತ್ತು ಶೇಕಡವಾರು ಹಂಚಿಕೆ (Number & percentage distribution of migrants who do not encourage their children to work in Goa by reason)**

| ಕಾರಣಗಳು | ಸಂಖ್ಯೆ | ಪ್ರತಿಶತ |
|---|---|---|
| ಸ್ವ ಸ್ಥಳದಲ್ಲಿ ಮಕ್ಕಳು ವಿದ್ಯಾಭ್ಯಾಸ ಮಾಡುತ್ತಿರುವುದರಿಂದ | 11 | 50.00 |
| ಆಸ್ತಿ ಇರುವುದರಿಂದ | 1 | 4.55 |
| ಸ್ವ ಸ್ಥಳದಲ್ಲಿ ನೌಕರಿ ಕೊಡಿಸುವ ಆಸೆ | 9 | 40.91 |
| ನಮ್ಮ ಹಾಗೆ ಕಷ್ಟಪಡಬಾರದು | 1 | 4.55 |
| ಒಟ್ಟು | **22** | **100.00** |

ಮೇಲಿನ ಕೋಷ್ಟಕದ ಪ್ರಕಾರ ಪ್ರತಿಶತ 50.00ರಷ್ಟು ಮಾಹಿತಿದಾರರು ಸ್ವಸ್ಥಳದಲ್ಲಿ ಮಕ್ಕಳು ವಿದ್ಯಾಭ್ಯಾಸ ಮಾಡುತ್ತಿದ್ದರಿಂದ, ಪ್ರತಿಶತ 4.55ರಷ್ಟು ಮಾಹಿತಿದಾರರು ಆಸ್ತಿ ಇರುವುದರಿಂದ, ಪ್ರತಿಶತ 40.91ರಷ್ಟು ಮಾಹಿದಾರರು ಸ್ವಸ್ಥಳದಲ್ಲಿ ನೌಕರಿ ಕೊಡಿಸುವ ಆಶೆಯಿಂದ ಹಾಗೂ ಪ್ರತಿಶತ 4.55ರಷ್ಟು ಮಾಹಿತಿದಾರರು ತಮ್ಮ ಹಾಗೆ ಮಕ್ಕಳು ಕಷ್ಟ ಪಡಬಾರದು ಎಂಬ ಕಾರಣಕ್ಕಾಗಿ ಗೋವೆಯಲ್ಲಿ ಉದ್ಯೋಗ

ಮಾಡಲು ಪ್ರೋತ್ಸಾಹಿಸುತ್ತಿಲ್ಲ. ಉದಾಹರಣೆಗೆ: ಸಂಗತಿ ಸಂಖ್ಯೆ 31ರ ಕುಟುಂಬದ ಸೀತಪ್ಪ ಚವ್ಹಾಣ ವಯಸ್ಸು 45, 1980ರಿಂದ ಸತತವಾಗಿ ಗೋವೆಗೆ ವಲಸೆ ಬರುತ್ತಿದ್ದು ಒಡ್ಯಾಟಿಟ್ಯಾರ ಪ್ರದೇಶದಲ್ಲಿ ಕೂಲಿಕೆಲಸದಲ್ಲಿ ತೊಡಗಿದ್ದಾನೆ. ತನ್ನ ಮಕ್ಕಳನ್ನು ಸ್ವಸ್ಥಳದಲ್ಲಿ ಶಿಕ್ಷಣ ಕೊಡಿಸುತ್ತಿದ್ದು ಅವರಿಗೆ ಮುಂದೆ ಸರ್ಕಾರಿ ಉದ್ಯೋಗ ಕೊಡಿಸುವ ಆಶೆ-ಆಕಾಂಕ್ಷೆಗಳನ್ನು ಹೊಂದಿದ್ದಾನೆ. ತಾನು ಪಡುತ್ತಿರುವ ಕಷ್ಟ-ನೋವುಗಳನ್ನು ಮಕ್ಕಳು ಪಡಬಾರದು ಎಂದು ತನ್ನ ಭಾವನೆಗಳನ್ನು ವ್ಯಕ್ತಪಡಿಸಿದ್ದಾನೆ. ಹೆಚ್ಚಿನ ಸಂಖ್ಯೆಯ ಲಂಬಾಣಿಗರು ತಮ್ಮ ಮಕ್ಕಳ ಭವಿಷ್ಯ ರೂಡಿಸಲು ಪ್ರಯತ್ನಿಸುತ್ತಿರುವುದರಿಂದ ಗೋವೆಯಲ್ಲಿ ಉದ್ಯೋಗ ಮಾಡಲು ಪ್ರೋತ್ಸಾಹಿಸುತ್ತಿಲ್ಲ.

## ಅಧ್ಯಾಯ ೭

## ಸಮಾರೋಪ

**(Conclusion)**

ಔದ್ಯೋಗಿಕ ಕ್ರಾಂತಿಯ ನಂತರದ ಅವಧಿಯಲ್ಲಿ ಜಗತ್ತಿನಾದ್ಯಂತ ಬೃಹತ್ ಕೈಗಾರಿಕೆಗಳು ಸ್ಥಾಪನೆಯಾದವು. ಇದರಿಂದ ಗ್ರಾಮೀಣ ಪ್ರದೇಶದಲ್ಲಿದ್ದ ಸಣ್ಣ ಕೈಗಾರಿಕೆಗಳು ನಶಿಸಿಹೋಗಿದ್ದರಿಂದ ಉದ್ಯೋಗ ಕಳೆದುಕೊಂಡ ಗ್ರಾಮೀಣ ಜನರು ಜೀವನೋಪಾಯಕ್ಕಾಗಿ ಉದ್ಯೋಗ ಹುಡುಕಿಕೊಂಡು ನಗರ ಪ್ರದೇಶಗಳಿಗೆ ವಲಸೆ ಹೋಗುವುದು ಅನಿವಾರ್ಯವಾಗುತ್ತದೆ. ವಲಸೆಯ ಪರಿಣಾಮದಿಂದ ಆಧುನಿಕ ನಗರಗಳು ಹಾಗೂ ಬೃಹತ್ ನಗರಗಳು ಬೆಳವಣಿಗೆಯಾಗುತ್ತಿವೆ. ವಲಸೆಯು ಸಮಾಜದಲ್ಲಿ ಅನೇಕ ಬದಲಾವಣೆಗಳನ್ನು ತರಲು ಕಾರಣವಾಗಿದೆ. ಆದ್ದರಿಂದ ಪ್ರಸ್ತುತ ಅಧ್ಯಯನದಲ್ಲಿ ಲಂಬಾಣಿಗರ ಗೋವಾ ವಲಸೆ, ಅವರ ವಲಸೆಗೆ ಕಾರಣವಾದ ಅಂಶಗಳು, ಸಾಮಾಜಿಕ-ಆರ್ಥಿಕ ಜೀವನದಲ್ಲಿ ಆಗುತ್ತಿರುವ ಬದಲಾವಣೆಗಳನ್ನು ಹಾಗೂ ಲಂಬಾಣಿಗರು ವಲಸೆ ಹೋಗುತ್ತಿರುವ ಗೋವಾ ಸಮಾಜದ ಮೇಲೆ ಹಾಗೂ ಸ್ವಸ್ಥಳದ ಮೇಲೆ ಆಗುತ್ತಿರುವ ಪರಿಣಾಮಗಳನ್ನು ಸಂಶೋಧನೆಯಿಂದ ತಿಳಿದುಕೊಳ್ಳಲು ಪ್ರಯತ್ನಿಸಲಾಗಿದೆ.

ವಲಸೆಯನ್ನು ಕುರಿತು ಈವರೆಗೆ ಕೆಲವು ಅಧ್ಯಯನಗಳಾಗಿವೆ ಆದರೆ ಅವು ವಲಸೆ ಹೋಗಿ ನೆಲೆಸುವ ಹಾಗೂ ವಲಸಿಗರು ಬಿಟ್ಟು ಹೋಗುವ ಸಮಾಜಗಳ ಮೇಲಾಗುವ ಪರಿಣಾಮಗಳನ್ನು ಸವಿಸ್ತಾರವಾಗಿ ವಿವರಿಸಿಲ್ಲ. ಈ ಅಧ್ಯಯನಗಳಲ್ಲಿ ಸಾಮಾನ್ಯವಾಗಿ ಬಡತನ, ಕಡಿಮೆ ಕೂಲಿಗಳಂತಹ ಅಂಶಗಳು ವಲಸೆಗೆ ಕಾರಣವಾಗಿರುವುದನ್ನು ಸಂಶೋಧಕರು ಬಹಿರಂಗ ಪಡಿಸಿದ್ದಾರೆ. ಆದರೆ ನಮ್ಮ ಅಧ್ಯಯನದಲ್ಲಿ ಮುಖ್ಯವಾಗಿ ಬರಗಾಲದಿಂದ ಉದ್ಭವಿಸುವ, ನಿರುದ್ಯೋಗ ವರ್ಷದ ಎಲ್ಲಾ ಋತುಮಾನಗಳಲ್ಲಿ ಉದ್ಯೋಗ ದೊರೆಯದಿರುವ ಪರಿಸ್ಥಿತಿ ಮುಂತಾದವು ಲಂಬಾಣಿಗರ ವಲಸೆಗೆ ಕಾರಣವಾಗಿವೆ. ವಿಜಾಪುರ ಜಿಲ್ಲೆಯ ಜನರು ಬರಗಾಲದಿಂದ ತತ್ತರಿಸುತ್ತಿದ್ದಾರೆ. ಆದ್ದರಿಂದ ವಲಸೆ ಹೋಗುವುದನ್ನು ಜೀವನಕ್ರಮವನ್ನಾಗಿ ರೂಢಿಸಿಕೊಂಡಿದ್ದಾರೆ. ವಲಸೆ ಹೋಗುವುದರಿಂದ ಲಂಬಾಣಿಗಳು ತಮ್ಮ ಆರ್ಥಿಕ ಜೀವನದಲ್ಲಿ ಬದಲಾವಣೆ ಮಾಡಿಕೊಂಡಿದ್ದಾರೆ. ಕೆಲವರು ಭೂಮಿ ಖರೀದಿರಿದ್ದಾರೆ. ಮತ್ತೆ ಕೆಲವರು ಹೊಸ ಮನೆಗಳನ್ನು ನಿರ್ಮಿಸಿಕೊಳ್ಳುವುದರ ಜೊತೆಗೆ ಕುಟುಂಬದ ಸಾಲ ತೀರಿಸಿಕೊಂಡಿದ್ದಾರೆ. ಇಂತಹ ಅನೇಕ ಅಂಶಗಳನ್ನು ಸಂಶೋಧನೆಯಿಂದ ಕಂಡುಕೊಳ್ಳಲಾಗಿದೆ. ಪ್ರಸ್ತುತ ಅಧ್ಯಯನವು ಲಂಬಾಣಿಗರ ಗೋವಾ ವಲಸೆಯ ವಿವಿಧ ಮಗುಲುಗಳನ್ನು ಅರ್ಥೈಸಿಕೊಳ್ಳಲು ಸಹಾಯವಾಗುತ್ತದೆ.

ಪ್ರಸ್ತುತ ಅಧ್ಯಯನಕ್ಕಾಗಿ ಗೋವೆಯಲ್ಲಿ ಹಾಗೂ ವಿಜಾಪುರ ಜಿಲ್ಲೆಯ ನರಸಲಗಿ ತಾಂಡಾದಲ್ಲಿ ಮಾಹಿತಿಯನ್ನು ಕಲೆ ಹಾಕಲಾಗಿದೆ. ಇದರ ಜೊತೆಗೆ ಲಂಬಾಣೇತರ ಸಮುದಾಯದ ಜನರನ್ನು ಸಂದರ್ಶಿಸಿ ಮಾಹಿತಿ ಕಲೆ ಹಾಕಲು ಸಾಧ್ಯವಾದಷ್ಟು ಸಾಕಷ್ಟು ಪ್ರಯತ್ನಿಸಲಾಗಿದೆ. ವಲಸೆಯ ವಿವಿಧ ಮಗುಲುಗಳನ್ನು ತಿಳಿದುಕೊಳ್ಳಲು ಸಹಾಭಾಗಿತ್ವ ಅವಲೋಕನಾ ವಿಧಾನ (Participant Observation Method) ಬಳಸಿಕೊಂಡು ಮಾಹಿತಿ ಕಲೆ ಹಾಕಲಾಗಿದೆ. ಪ್ರಸ್ತುತ ಪ್ರಬಂಧವನ್ನು 6 ಅಧ್ಯಾಯಗಳಲ್ಲಿ ವಿಂಗಡಿಸಲಾಗಿದೆ. ವಿವಿಧ ಅಧ್ಯಾಯಗಳಲ್ಲಿ ಚರ್ಚಿಸಿದ ವಿಷಯವನ್ನು, ಸಂಶೋಧನೆಯಿಂದ ಕಂಡುಕೊಂಡ ಸತ್ಯಸಂಗತಿಗಳನ್ನು ಮುಂದಿನಂತೆ ನೋಡಬಹುದು.

ಲಂಬಾಣಿಗರು ಮೂಲತಹಃ ರಾಜಸ್ಥಾನ ರಾಜ್ಯದ ಮಾರವಾರ ಪ್ರದೇಶಕ್ಕೆ ಸೇರಿದವರಾಗಿದ್ದಾರೆ. ಇವರು ಮೊದಲು ಅಸಂಖ್ಯಾತ ದನಕರುಗಳನ್ನು ಹೊಂದಿದ್ದು, ಅವುಗಳ ಮೇಲೆ ಆಹಾರ ಪದಾರ್ಥಗಳನ್ನು ಹೇರಿಕೊಂಡು ವ್ಯಾಪಾರ-ವಹಿವಾಟುಗಳಲ್ಲಿ ತೊಡಗಿದ್ದರು. ಈ ಸಮುದಾಯ ಶ್ರೀಮಂತ ಆರ್ಥಿಕ-ಸಾಂಸ್ಕೃತಿಕ ಹಿನ್ನೆಲೆ ಹೊಂದಿತ್ತು. ಇವರ ವ್ಯಾಪಾರವು ಭಾರತದಲ್ಲಿ ಮಾತ್ರವಲ್ಲದೇ ವಿದೇಶಗಳವರೆಗೆ ವಿಸ್ತಾರವಾಗಿತ್ತು. ಹಾಗೂ ಇವರು ಸ್ವತಂತ್ರವಾಗಿ ಅಲೆದಾಡುತ್ತಿದ್ದರು. ಲಂಬಾಣಿಗರು ಜನಸಾಮಾನ್ಯರಿಗೆ ಸಾಧ್ಯವಾಗಲಾರದ ರಫ್ತುಕಾರ್ಯಗಳಲ್ಲಿ ತೊಡಗಿದ್ದರು ಹಾಗೂ ಘೋರ ಅರಣ್ಯಗಳನ್ನು ದಾಟಿ ಹೋಗುವ ಕಲೆ ಅರಿತವರಾಗಿದ್ದರು. ಈ ವೇಳೆಯಲ್ಲಿ ಮೊಗಲ ರಾಜರು ತಮ್ಮ ಸೈನಿಕರಿಗೆ ಯುದ್ಧದ ಸಾಮಾಗ್ರಿಗಳನ್ನು ಹಾಗೂ ಆಹಾರ ಧಾನ್ಯ ಪೂರೈಸಲು ಸಾರಿಗೆ ಸಮಸ್ಯೆಯನ್ನು ಅನುಭವಿಸುತ್ತಿದ್ದರು. ಇಂತಹ ಸಂಕಷ್ಟದ ಪರಿಸ್ಥಿತಿಯಲ್ಲಿ ಅಸಂಖ್ಯಾತ ದನಕರುಗಳನ್ನು ಹೊಂದಿ ವ್ಯಾಪಾರದಲ್ಲಿ ತೊಡಗಿದ್ದ ಲಂಬಾಣಿಗರಿಗೆ ಮೊಗಲರು ಒತ್ತಾಯಪೂರ್ವಕವಾಗಿ ತಮ್ಮ ಸೈನಿಕರಿಗೆ ಆಹಾರ ಧಾನ್ಯ ಸಾಗಿಸುವ ಉದ್ಯೋಗದಲ್ಲಿ ತೊಡಗಿಸಿದರು. ಹೀಗೆ ಮೊಗಲರ ಸೇವೆ ಮಾಡುತ್ತಾ ಮೊಗಲ ಸೈನಿಕರ ಹಿಂದೆ 1630ರಲ್ಲಿ ಲಂಬಾಣಿಗರು ದಕ್ಷಿಣ ಭಾರತವನ್ನು ಪ್ರವೇಶಿಸಿದರು. ಮೊದಲು ಸ್ವತಂತ್ರವಾಗಿ ಅಲೆದಾಡಿ ವ್ಯಾಪಾರ ಮಾಡುತ್ತಿದ್ದ ಲಂಬಾಣಿಗರು ಮೊಗಲರ ಆಡಳಿತ ಅವಧಿಯಲ್ಲಿ ಸ್ವಾತಂತ್ರ್ಯ ಕಳೆದುಕೊಂಡರು. ಲಂಬಾಣಿ ಸಮುದಾಯ ಮೊಗಲರ ಒತ್ತಾಯಕ್ಕೆ ಮಣಿದು ಧೀರ್ಘ ಅವಧಿಯವರೆಗೆ ಅವರಿಗೆ ಸೇವೆ ಸಲ್ಲಿಸಿದರೂ, ಅವರ ಧಾರ್ಮಿಕ-ಸಾಂಸ್ಕೃತಿಕ ಜೀವನದಲ್ಲಿ ಬದಲಾವಣೆ ಮಾಡಿಕೊಂಡಿಲ್ಲ. ಇದರಿಂದ ಮೊಗಲ ಅರಸರು ಇವರ ಸಾಮಾಜಿಕ ಜೀವನಕ್ಕೆ ಧಕ್ಕೆ ಬರದಂತೆ ನೋಡಿಕೊಂಡಿದ್ದು ಕಂಡು ಬರುತ್ತದೆ. ಮೊಗಲರು ಲಂಬಾಣಿಗರನ್ನು ತಮ್ಮ ಧರ್ಮಕ್ಕೆ ಮತಾಂತರಗೊಳಿಸುವ ಪ್ರಯತ್ನ ಮಾಡಿಲ್ಲ. ಆದರೆ ಇಸ್ಲಾಂ ಆಚರಣೆಗಳಿಂದ ಲಂಬಾಣಿಗರು ಪ್ರಭಾವಿತರಾಗಿದ್ದಾರೆ. ಆದ್ದರಿಂದ ಇಂದಿಗೂ ವಿಜಾಪುರ ಜಿಲ್ಲೆಯ ಕೆಲವು ಲಂಬಾಣಿಗರು ಮುಸ್ಲಿಂ ಮೊಹರಂ ಹಬ್ಬವನ್ನು ತಾಂಡಾಗಳಲ್ಲಿ ಆಚರಿಸುತ್ತಿದ್ದಾರೆ. ದಕ್ಷಿಣ ಭಾರತದಲ್ಲಿ ಅದರಲ್ಲಿಯೂ ಮುಸ್ಲಿಂ ಅರಸರು ಆಳಿದ ಪ್ರದೇಶಗಳಾದ ವಿಜಾಪುರ, ಗುಲ್ಬರ್ಗ, ಬೀದರ, ಹೈದರಬಾದ್‌ಗಳಲ್ಲಿ ಲಂಬಾಣಿಗರು ಹೆಚ್ಚಾಗಿ ನೆಲೆಗೊಂಡಿದ್ದಾರೆ. ಇದರಿಂದ ಮುಸ್ಲಿಂ ಅರಸರು ಲಂಬಾಣಿಗರಿಗೆ ಪ್ರಾಶಸ್ತ್ಯ ನೀಡಿದ್ದರೆಂಬುದು ಅಧ್ಯಯನದಿಂದ ತಿಳಿದುಬರುತ್ತದೆ. ಬ್ರಿಟಿಷರ ಆಡಳಿತ ಅವಧಿಯಲ್ಲಿ ಭಾರತದಲ್ಲಿ ರೈಲಿನಂತಹ ಆಧುನಿಕ ಸಾರಿಗೆ ಸಾಗಾಣಿಕೆಯ ಸಾಧನಗಳು ಪ್ರಾರಂಭವಾಗಿದ್ದರಿಂದ ಲಂಬಾಣಿಗರ ಸಾಂಪ್ರದಾಯಿಕ ಸಾಗಾಣಿಕೆಯ ಉದ್ಯೋಗ ನಿಂತು ಹೋಯಿತು.

ಬೇರೆ ಉದ್ಯೋಗಗಳಲ್ಲಿ ತರಬೇತಿ, ಅನುಭವ ಇಲ್ಲದ್ದರಿಂದ ದಕ್ಷಿಣ ಭಾರತಕ್ಕೆ ಲಂಬಾಣಿಗರು ಹೊಸಬರಾಗಿದ್ದರಿಂದ, ಇವರಿಗೆ ಸ್ಥಳಿಯರು ಸಹಾಕಾರ ಕೊಡದಿರುವುದರಿಂದ ತಮ್ಮ ಉಪಜೀವನಕ್ಕಾಗಿ ಕಳ್ಳತನದಂತಹ ಸಣ್ಣ-ಪುಟ್ಟ ಅಪರಾಧಿ ಕೃತ್ಯಗಳಲ್ಲಿ ತೊಡಗುತ್ತಾರೆ. ಲಂಬಾಣಿಗರು ಕಳ್ಳತನದಲ್ಲಿ ತೊಡಗಿದ್ದ ಬಗ್ಗೆ ಈ ಹಿಂದೆ ಯಾವುದೇ ಆಧಾರಗಳಿಲ್ಲಿ ಆದರೆ ತಮ್ಮ ವೃತ್ತಿ ಕಳೆದುಕೊಂಡಿದ್ದರಿಂದ ಸ್ಥಳಿಯರು ಸಹಕಾರ ನೀಡದೇ ಇರುವುದರಿಂದ ಬ್ರಿಟಿಷರ ಆಡಳಿತದ ಅವಧಿಯಲ್ಲಿ ಅಪಾರಾಧಿ ಕೃತ್ಯಗಳಿಗೆ ಕೈಹಾಕಿದ್ದು ಕಂಡುಬರುತ್ತದೆ. ಇವರ ಅಪರಾಧಿ ಚಟುವಟಿಕೆಗಳನ್ನು ಗಮನಿಸಿದ ಬ್ರಿಟಿಷರು ಲಂಬಾಣಿಗರನ್ನು ಅಪರಾಧಿ ಜನಾಂಗವೆಂದು ಪರಿಗಣಿಸಿ ಅಪಾರಾಧಿ ಬುಡಕಟ್ಟು ಕಾಯ್ದೆಯಡಿ ಸೇರಿಸುತ್ತಾರೆ. ನಂತರ ಲಂಬಾಣಿಗರು ಪ್ರತಿದಿನ ಪೊಲೀಸ್ ಸ್ಟೇಷನ್‌ಗಳಿಗೆ ಹೋಗಿ ಹಾಜರಿ ಕೊಡಬೇಕಾಗಿದ್ದರಿಂದ ಇವರ ಚಲನ-ವಲನಗಳು ಸ್ಥಗಿತವಾದವು. ಆದ್ದರಿಂದ ಲಂಬಾಣಿಗರು ಅನಿವಾರ್ಯವಾಗಿ ಯಾವುದೇ ಮೂಲಭೂತ ಸೌಕರ್ಯಗಳಿಲ್ಲದ ಮುಖ್ಯ ಸಮಾಜದಿಂದ ದೂರವಿರುವ ಅರಣ್ಯದ ಹತ್ತಿರದ ಪ್ರದೇಶಗಳಲ್ಲಿ ತಾಂಡಾಗಳನ್ನು ನಿರ್ಮಿಸಿಕೊಂಡು ನೆಲೆಗೊಂಡರು. ಹೀಗೆ ಬ್ರಿಟಿಷರ ಆಡಳಿತಾವಾಧಿಯಲ್ಲಿ ಲಂಬಾಣಿಗರು ಮತ್ತಷ್ಟು ಆರ್ಥಿಕ-ಸಾಮಾಜಿಕ ಸಮಸ್ಯೆಗಳನ್ನು ಎದುರಿಸಿದರು. ಮೊದಲು ರಾಜ ಮಹಾರಾಜರಿಂದ ಹೆಗ್ಗಳಿಕೆಗೆ ಪಾತ್ರರಾಗಿದ್ದ ಲಂಬಾಣಿಗರು ಪರಿಸ್ಥಿತಿಗಳಿಗೆ ದಾಸರಾಗಿ ಅಪರಾಧಿ ಜನಾಂಗವೆಂದು ಪರಿಗಣಿಸಲ್ಪಟ್ಟರೂ, ಸಂಕಷ್ಟದ ಪರಿಸ್ಥಿತಿ ಎದುರಿಸಿದರೂ, ಇಂತಹ ಸಂದರ್ಭದಲ್ಲಿ ಯಾವುದೇ ಸಮುದಾಯದ ಜನರು ಲಂಬಾಣಿಗರಿಗೆ ಸಹಾಯ-ಸಹಾಕಾರ ತೋರಿಸಿದ್ದು ಕಂಡುಬಂದಿಲ್ಲ. ಭಾರತಕ್ಕೆ ಸ್ವಾತಂತ್ರ್ಯ ದೊರೆತ ನಂತರದ ಅವಧಿಯಲ್ಲಿ ಲಂಬಾಣಿಗರನ್ನು ಮುಖ್ಯ ಸಮಾಜಕ್ಕೆ ಸೇರಿಸಲು ಸರ್ಕಾರ ಇವರನ್ನು ಬುಡಕಟ್ಟು ಕಾಯ್ದೆಯಿಂದ ವಿಮೋಚನೆಗೊಳಿಸಿ ಕೆಲವು ರಾಜ್ಯಗಳಲ್ಲಿ ಪರಿಶಿಷ್ಟ ಪಂಗಡಕ್ಕೆ ಹಾಗೂ ಮತ್ತೆ ಕೆಲವು ರಾಜ್ಯಗಳಲ್ಲಿ ಪರಿಶಿಷ್ಟ ಜಾತಿಯ ಪಟ್ಟಿಗೆ ಸೇರಿಸಿತು. ಕರ್ನಾಟಕ ಸರ್ಕಾರ ಲಂಬಾಣಿಗರನ್ನು ಪರಿಶಿಷ್ಟ ಜಾತಿಯ ಪಟ್ಟಿಗೆ ಸೇರಿಸಿದ್ದರಿಂದ ಈ ಸಮುದಾಯ ಆರ್ಥಿಕ, ಶೈಕ್ಷಣಿಕ, ರಾಜಕೀಯ ಕ್ಷೇತ್ರಗಳಲ್ಲಿ ಮೀಸಲಾತಿ ಸೌಲಭ್ಯ ಪಡೆದು ಚೇತರಿಸಿಕೊಳ್ಳುತ್ತಿದೆ. ಆದರೆ ಇಂದಿಗೂ ಹೆಚ್ಚಿನ ಸಂಖ್ಯೆಯಲ್ಲಿ ಲಂಬಾಣಿಗರು ಅನಕ್ಷರಸ್ಥರಾಗಿರುವುದರಿಂದ ಕೂಲಿ ಕೆಲಸವನ್ನು ಅವಲಂಬಿಸಿದ್ದಾರೆ, ಕೆಲವರು ಮಾತ್ರ ಒಕ್ಕಲುತನದಲ್ಲಿ ತೊಡಗಿದ್ದಾರೆ. ಸ್ವಸ್ಥಳದಲ್ಲಿ ನಿರಂತರವಾಗಿ ಕೂಲಿ ಕೆಲಸಗಳು ಸಿಗದೆ ಇರುವುದರಿಂದ ನಗರ ಪ್ರದೇಶಗಳಿಗೆ ವಲಸೆ ಹೋಗುತ್ತಾರೆ. ಪ್ರಸ್ತುತ ಅಧ್ಯಾಯದಲ್ಲಿ ಲಂಬಾಣಿಗರ ಸಾಮಾಜಿಕ ಸಂಸ್ಥೆಗಳ ಬಗ್ಗೆ, ಧಾರ್ಮಿಕ ಆಚರಣೆಗಳ ಬಗ್ಗೆ ಮೂಢನಂಬಿಕೆ, ಪಂಚಾಯಿತಿ ಮುಂತಾದವುಗಳನ್ನು ವಿವರಿಸಲಾಗಿದೆ.

ಲಂಬಾಣಿಗರು ತಮ್ಮ ಸಾಂಪ್ರದಾಯಿಕ ಉದ್ಯೋಗ ಕಳೆದುಕೊಂಡ ನಂತರ ಪ್ರತ್ಯೇಕವಾಗಿ ತಾಂಡಾಗಳನ್ನು ನಿರ್ಮಿಸಿಕೊಂಡು ವಾಸವಾಗಲು ಕಾರಣವಾದ ಅಂಶಗಳನ್ನು ತಿಳಿಯಲು ಪ್ರಯತ್ನಿಸಲಾಗಿದೆ. ಲಂಬಾಣಿಗರಿಗೆ ಇತರ ಸಮುದಾಯದ ಜನರು ಗ್ರಾಮಗಳಲ್ಲಿ ವಾಸವಾಗಲು ಅನುಮತಿ ನೀಡಿಲ್ಲವಾದ್ದರಿಂದ ಕಳ್ಳಭಟ್ಟಿ ಸಾರಾಯಿ ತಯಾರಿಸುವವರಾಗಿದ್ದರಿಂದ, ಅಸಂಖ್ಯಾತ ದನಕರುಗಳನ್ನು ಹೊಂದಿದ್ದರಿಂದ ಲಂಬಾಣಿಗರಿಗೆ ಅವುಗಳನ್ನು ಸಾಕಲು ಹುಲ್ಲುಗಾವಲು ಪ್ರದೇಶ ಬೇಕಾಗಿದ್ದರಿಂದ ಅರಣ್ಯದಲ್ಲಿ ಸಿಗುವ ಕಟ್ಟಿಗೆ, ಇನ್ನಿತರ ಪದಾರ್ಥಗಳನ್ನು ಮಾರಾಟ ಮಾಡಿ ಜೀವನ ಸಾಗಿಸುವ ಉದ್ದೇಶದಿಂದ ಪ್ರತ್ಯೇಕವಾಗಿ ವಾಸವಾದರು.

ಭಾರತ ಸ್ವಾತಂತ್ರ್ಯಗೊಂಡು 59 ವರ್ಷಗಳಾದರೂ, ಈವರೆಗೆ ಲಂಬಾಣಿ ತಾಂಡಾಗಳನ್ನು ಸರ್ಕಾರ ಕಂದಾಯ ಗ್ರಾಮಗಳನ್ನಾಗಿ ಘೋಷಿಸಿಲ್ಲ ಆದ್ದರಿಂದ ತಾಂಡಾಗಳು ಮೂಲಭೂತ ಸೌಕರ್ಯಗಳಾದ ಒಳಚರಂಡಿ ವ್ಯವಸ್ಥೆ, ಆಸ್ಪತ್ರೆ, ನ್ಯಾಯಬೆಲೆ ಅಂಗಡಿಗಳು ಮುಂತಾದವುಗಳಿಂದ ವಂಚಿತವಾಗಿವೆ. ಸರ್ಕಾರ ಕೊಡಮಾಡಲ್ಪಡುವ ರಿಯಾಯಿತಿ ದರದ ಆಹಾರ ಪದಾರ್ಥಗಳನ್ನು ಲಂಬಾಣಿಗರು ಸಮೀಪದ ಗ್ರಾಮಗಳಿಂದ ಪಡೆಯುತ್ತಿದ್ದು ಇದರಿಂದ ಅವರಿಗೆ ಸೌಲಭ್ಯಗಳು ಸರಿಯಾಗಿ ದೊರೆಯುತ್ತಿಲ್ಲಾ ಎಂದು ದೂರಿದ್ದಾರೆ. ತಾಂಡಾಗಳಿಗೆ ಈವರೆಗೂ ಸಾಮಾಜಿಕ ನ್ಯಾಯ ದೊರೆಯುತ್ತಿಲ್ಲಾ, ಸರಿಯಾದ ಕುಡಿಯುವ ನೀರಿನ ವ್ಯವಸ್ಥೆ, ಶೌಚಾಲಯ ಕಲ್ಪಿಸಿಲ್ಲ, ಆಸ್ಪತ್ರೆ ಇಲ್ಲದ್ದರಿಂದ ಲಂಬಾಣಿಗರಿಗೆ ತುರ್ತಾಗಿ ಆರೋಗ್ಯ ಸೌಲಭ್ಯ ಸಿಗುತ್ತಿಲ್ಲ. ಆದ್ದರಿಂದ ಕೆಲವು ರೋಗಪೀಡಿತ ಲಂಬಾಣಿಗರು ಮರಣ ಹೊಂದುತ್ತಿದ್ದಾರೆ ಎಂದು ನರಸಲಗಿ ತಾಂಡಾದ ಮಾಹಿತಿದಾರರು ನನ್ನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ದೂರು ನೀಡಿದ್ದಾರೆ.

ಸರ್ಕಾರ ಕೊಡಮಾಡಲ್ಪಡುವ ಮೀಸಲಾತಿ ಸೌಲಭ್ಯಗಳ ಬಗ್ಗೆ ನರಸಲಗಿ ತಾಂಡಾದ ಹೆಚ್ಚಿನ ಸಂಖ್ಯೆಯ ಲಂಬಾಣಿಗರಿಗೆ ಅರಿವು ಇಲ್ಲ. ಹಾಗೂ ಗೋವೆಗೆ ವಲಸೆ ಹೋಗುತ್ತಿರುವುದರಿಂದ ಇವರಿಗೆ ಮೀಸಲಾತಿ ಸೌಲಭ್ಯಗಳಾದ ಸರ್ಕಾರಿ ಭೂಮಿ ಪಡೆಯುವಿಕೆ, ಮನೆ, ಬೋರ್‌ವೆಲ್ ಸೌಕರ್ಯ ಮುಂತಾದವುಗಳಿಂದ ವಂಚಿತರಾಗುತ್ತಿದ್ದಾರೆ. ಇದಲ್ಲದೆ ಲಂಬಾಣಿಗರು ಭೂಮಿ ಖರೀದಿಸುವುದನ್ನು, ತಮ್ಮ ಭೂಮಿಗೆ ನೀರಾವರಿ ಸೌಲಭ್ಯ ಕಲ್ಪಿಸಲು, ಕೆರೆ ನಿರ್ಮಾಣಕ್ಕಾಗಿ ಸರ್ಕಾರಕ್ಕೆ ಮನವಿ ಪತ್ರ ಸಲ್ಲಿಸಿರುವುದನ್ನು ಸ್ಥಳೀಯರು ವಿರೋಧಿಸುತ್ತಿದ್ದಾರೆ. ಲಂಬಾಣಿಗರು ತಮ್ಮ ಹೊಲ-ಗದ್ದೆಗಳಿಗೆ ಹೋಗುವಾಗ ಲಂಬಾಣೇತರರು ರಸ್ತೆ ತಡೆ ಒಡ್ಡುತ್ತಿದ್ದಾರೆ. ಗ್ರಾಮಗಳಲ್ಲಿ ಕಳ್ಳತನ ಸಂಭವಿಸಿದರೆ, ಅಪಾರಾಧಿ ಕೃತ್ಯಗಳು ನಡೆದರೆ, ಯಾವುದೇ ಆಧಾರಗಳಿಲ್ಲದಿದ್ದರೂ ಲಂಬಾಣಿಗರ ಮೇಲೆ ಲಂಬಾಣೇತರರು ಆಪಾದನೆ ಮಾಡುತ್ತಾರೆ. ಇಂತಹ ಅನೇಕ ಅಂಶಗಳನ್ನು ನನ್ನ ಸಂಶೋಧನೆಯಿಂದ ಬಹಿರಂಗ ಪಡಿಸಲಾಗಿದೆ. ಲಂಬಾಣಿಗರು ಹೊಂದಿರುವ ಕೃಷಿಭೂಮಿ ಉತ್ತಮ ಗುಣಮಟ್ಟದ್ದಾಗಿಲ್ಲ. ಕಡಿಮೆ ಬೆಲೆಯ ಬಂಜರುಭೂಮಿಗಳನ್ನು ಹೊಂದಿದ್ದರಿಂದ ಇದರಿಂದ ಬರುವ ಅತ್ಯಲ್ಪ ಆದಾಯ ಅವರ ಹೊಟ್ಟೆ-ಬಟ್ಟೆಗೆ ಸಾಲದೇ ಬಡತನದಲ್ಲಿ ಜೀವನ ಸಾಗಿಸುತ್ತಿದ್ದಾರೆ. ಕೆಲವರು ನೆರೆಯ ಗ್ರಾಮಗಳ ಭೂಮಿ ಬಾಡಿಗೆಗೆ ಪಡೆದು ಕೃಷಿಯಲ್ಲಿ ತೊಡಗಿದ್ದಾರೆ. ಹೆಚ್ಚಿನವರ ಭೂಮಿಯು ನೀರಾವರಿ ಸೌಲಭ್ಯಗಳಿಗೆ ಒಳಪಟ್ಟಿಲ್ಲ. ಇದರಿಂದ ಆದಾಯ ಕಡಿಮೆ ಬರುವುದರಿಂದ ಲಂಬಾಣಿಗರಿಗೆ ತಮ್ಮ ಮಕ್ಕಳಿಗೆ ಶಿಕ್ಷಣ ಕೊಡಿಸಲು ಸಾಧ್ಯವಾಗುತ್ತಿಲ್ಲ ಆದ್ದರಿಂದ ಕೂಲಿಕಾರ ಲಂಬಾಣಿಗರ ಮಕ್ಕಳು ಕೂಲಿಕಾರರಗಿಯೇ ಮುಂದುವರಿಯುತ್ತಿದ್ದಾರೆ.

ನರಸಲಗಿ ತಾಂಡಾದ ಲಂಬಾಣಿಗರ ವಯೋರಚನೆ, ಲಿಂಗರಚನೆ, ಕುಟುಂಬದ ಗಾತ್ರ, ಕುಟುಂಬದ ಸ್ವರೂಪ ಮುಂತಾದವುಗಳನ್ನು ತಿಳಿಯಲು ಪ್ರಯತ್ನಿಸಲಾಗಿದೆ. ಮೊದಲು ಲಂಬಾಣಿಗರಲ್ಲಿ ಅವಿಭಕ್ತ ಕುಟುಂಬಗಳು ಪ್ರಚಲಿತವಿದ್ದವು. ಆದರೆ ಇಂದು ಅವಿಭಕ್ತ ಕುಟುಂಬಗಳು ಬದಲಾವಣೆಯಾಗಿ ವಿಭಕ್ತ ಕುಟುಂಬಗಳಾಗುತ್ತಿವೆ.

ವಲಸೆಯ ಕುರಿತು ಸಮಾಜಶಾಸ್ತ್ರೀಯ ವಿರಣೆಯನ್ನು ವಿವೇಚಿಸಲಾಗಿದೆ. ಸಮಾಜಶಾಸ್ತ್ರಜ್ಞರ ಪ್ರಕಾರ ಒಬ್ಬ ವ್ಯಕ್ತಿ ಸಮೀಪದ ಊರಿಗೆ ಉದ್ಯೋಗಕ್ಕಾಗಿ ಹೋಗಿ ಬರುವುದನ್ನು ವಲಸೆ ಎಂದು

ಪರಿಗಣಿಸಲ್ಪಡುವುದಿಲ್ಲ. ಒಬ್ಬ ವ್ಯಕ್ತಿಯ ಚಲನೆಯಿಂದ ಅವನ ಸಾಮಾಜಿಕ-ಆರ್ಥಿಕ ಜೀವನದಲ್ಲಿ ಬದಲಾವಣೆ ತರುವಂತಿದ್ದರೆ. ಅದನ್ನು ವಲಸೆ ಎಂದು ಕರೆಯುತ್ತಾರೆ. ಯಾವುದೇ ವಲಸೆಯಲ್ಲಿ ತಳ್ಳುವ ಹಾಗೂ ಸೆಳೆದುಕೊಳ್ಳುವ (Push and Pull Factors) ಮಹತ್ವದ ಪಾತ್ರ ವಹಿಸುತ್ತವೆ. ಬಡತನ, ನಿರುದ್ಯೋಗ, ಬರಗಾಲ, ಕಡಿಮೆ ಕೂಲಿ ಮುಂತಾದವು ತಳ್ಳುವ ಅಂಶಗಳಾದರೆ, ಹೆಚ್ಚಿನ ಕೂಲಿದರ, ಉದ್ಯೋಗಾವಕಾಶಗಳು, ಕೆಲಸಕೊಟ್ಟ ಮಾಲಿಕರು ಒದಗಿಸುವ ಸೌಲಭ್ಯಗಳು, ಮನೋರಂಜನೆ ಮುಂತಾದವುಗಳು ಸೆಳೆದುಕೊಳ್ಳುವ ಅಂಶಗಳಾಗಿವೆ. ಸೆಳೆದುಕೊಳ್ಳುವ ಅಂಶಗಳಿಗೆ ಆಕರ್ಶಿತರಾಗಿ ಗ್ರಾಮೀಣ ಜನರು ನಗರ ಪ್ರದೇಶಗಳಿಗೆ ವಲಸೆ ಹೋಗುತ್ತಾರೆ. ವಲಸೆಯಲ್ಲಿ ವ್ಯಕ್ತಿಯ ವಯಸ್ಸು, ಲಿಂಗ, ಶಿಕ್ಷಣ ಮುಂತಾದ ಜನಸಂಖ್ಯಾಶಾಸ್ತ್ರೀಯ ಅಂಶಗಳು ಪ್ರಭಾವಬೀರುತ್ತವೆ. ಸಾಮಾನ್ಯವಾಗಿ ದುಡಿಯುವ ವಯಸ್ಸಿನ ಯುವಕರು ಮೊದಲು ವಲಸೆ ಹೋಗುತ್ತಾರೆ. ನಗರಗಳಲ್ಲಿ ಸುವ್ಯವಸ್ಥಿತವಾಗಿ ನೆಲೆಸಿದ ನಂತರ ತಮ್ಮ ತಂದೆ ತಾಯಿಗಳನ್ನು ಕರೆದುಕೊಂಡು ಹೋಗುತ್ತಾರೆ. ಸ್ತ್ರೀಯರಿಗಿಂತ ಪುರುಷರು ಹೆಚ್ಚಿನ ಸಂಖ್ಯೆಯಲ್ಲಿ ವಲಸೆ ಹೋಗುತ್ತಾರೆ. ಇದಕ್ಕೆ ಪುರುಷ ಪ್ರಧಾನ ಸಮಾಜವೇ ಮುಖ್ಯ ಕಾರಣವಾಗಿದೆ.

ವಿಜಾಪುರ ಜಿಲ್ಲೆಯು ಮೊದಲಿನಿಂದಲೂ ಬರಗಾಲದ ಬವಣೆಯನ್ನು ಎದುರಿಸುತ್ತಿದೆ. ಆದರೆ 1396 ರಿಂದ ಬರಗಾಲದ ಬಗ್ಗೆ ದಾಖಲಿಗಳು ಸಿಗುತ್ತವೆ. 1396ರಲ್ಲಿ ಸಂಭವಿಸಿದ ಪ್ರಸಿದ್ಧ ದುರ್ಗಾದೇವಿ ಕ್ಷಾಮ, ಡೋಗಿಬರ ಹೀಗೆ ಈವರೆಗೆ ಜಿಲ್ಲೆಯಲ್ಲಿ ಮೇಲಿಂದ ಮೇಲೆ ಸಂಭವಿಸುತ್ತಾ ಬಂದ ಬರಗಾಲಗಳಿಂದ ಜನರು ವಲಸೆ ಹೋಗುತ್ತಲೇ ಬಂದಿದ್ದಾರೆ. ಬರಗಾಲದ ಜೊತೆಗೆ ನೀರಾವರಿ ಸೌಲಭ್ಯಗಳ ಕೊರತೆ, ಬಡತನ, ನಿರುದ್ಯೋಗ ಮುಂತಾದವು ಜಿಲ್ಲೆಯ ಜನರ ವಲಸೆಗೆ ಕಾರಣವಾಗಿವೆ. ಇಂತಹ ಸಮಸ್ಯೆಗಳಿಂದ ಕೂಡಿದ ಬರಗಾಲ ಜಿಲ್ಲೆಗೆ ಲಂಬಾಣಿಗರು ಸ್ವಸಂತೋಷದಿಂದ ಬರಲಿಲ್ಲ ಮೊಗಲರು ವಿಜಾಪುರದ ಮೇಲೆ ದಾಳಿ ಮಾಡಿದಾಗ 1630ರಲ್ಲಿ ಮೊಗಲರ ಸೈನಿಕರಿಗೆ ಆಹಾರ ಧಾನ್ಯ ಹಾಗೂ ಯುದ್ಧದ ಸಾಮಾಗ್ರಿಗಳನ್ನು ಪೂರೈಕೆ ಮಾಡುವ ಉದ್ಯೋಗ ಮಾಡುತ್ತಾ ವಲಸೆ ಬಂದು ವಿಜಾಪೂರದ ಸುತ್ತಮುತ್ತಲಿನ ಪ್ರದೇಶದಲ್ಲಿ ನೆಲೆಸುವುದು ಅನಿವಾರ್ಯವಾಯಿತು. ಅನೇಕ ಶತಮಾನಗಳಿಂದ ವಲಸೆಯಲ್ಲಿ ನಿರತರಾಗಿದ್ದ ಲಂಬಾಣಿಗರು ಬ್ರಿಟಿಷರ ಆಡಲಿತ ಅವಧಿಯಲ್ಲಿ ಇವರ ಚಲನ-ವಲನಗಳು ಸ್ಥಗಿತಗೊಂಡವು. ನಂತರ ಭಾರತಕ್ಕೆ ಸ್ವಾತಂತ್ರ್ಯ ದೊರೆತ ಮೇಲೆ ಭಾರತ ಸರ್ಕಾರ ಲಂಬಾಣಿಗರನ್ನು ಅಪಾರಾಧಿ ಬುಡಕಟ್ಟು ಕಾಯ್ದೆಯಿಂದ ತೆರವುಗೊಳಿಸಿತು. ಇದರಿಂದ ಸ್ವಾತಂತ್ರ್ಯಗೊಂಡ ಲಂಬಾಣಿಗರು ತಮ್ಮ ಚಲನ-ವಲನಗಳನ್ನು ಮತ್ತೆ ಪ್ರಾರಂಭಿಸಿದ್ದು ಕಂಡುಬರುತ್ತದೆ.

ಸ್ವಾತಂತ್ರ್ಯ ನಂತರದ ಅವಧಿಯಲ್ಲಿ ಲಂಬಾಣಿಗರು ತಮ್ಮ ಸ್ವಇಚ್ಛೆಯಿಂದ ಗೋವೆಗೆ ವಲಸೆ ಹೋಗುತ್ತಿಲ್ಲ ಜಿಲ್ಲೆಯಲ್ಲಿಯ ಬರಗಾಲ, ಕಡಿಮೆಕೂಲಿ, ನಿರುದ್ಯೋಗ, ನೀರಾವರಿ ಸೌಲಭ್ಯಗಳ ಕೊರತೆ, ತುಂಡುಭೂಮಿ, ಬಡತನ ಮುಂತಾದ ಅಂಶಗಳು ಲಂಬಾಣಿಗರನ್ನು ವಲಸೆ ಹೋಗುವಂತೆ ಮಾಡಿವೆ. ಆದ್ದರಿಂದ ಲಂಬಾಣಿಗರು ತಮ್ಮ ಆರ್ಥಿಕ ಸ್ಥಿತಿ-ಗತಿಗಳನ್ನು ಸುಧಾರಿಸಿಕೊಳ್ಳಲು ಗೋವೆಗೆ ವಲಸೆ ಹೋಗುತ್ತಿದ್ದಾರೆ. ವಿಜಾಪುರ ಜಿಲ್ಲೆಯ ಲಂಬಾಣಿಗರು ಗೋವೆ ವಿಮೋಚನೆಗೊಂಡ ನಂತರದ ಅವಧಿಯಿಂದ ಗೋವೆಗೆ ವಲಸೆ ಹೋಗುತ್ತಿದ್ದಾರೆ. ನರಸಲಗಿ ತಾಂಡಾದ ಲಂಬಾಣಿಗರು 1970ರಲ್ಲಿ ಸ್ವಸ್ಥಳದಲ್ಲಿ ಬರಗಾಲ

ಸಂಭವಿಸಿದ್ದರಿಂದ ತೀವ್ರ ಆರ್ಥಿಕ ಸಮಸ್ಯೆಗಳನ್ನು ಎದುರಿಸಿ ಈಗಾಗಲೇ ಗೋವೆಗೆ ವಲಸೆ ಹೋಗಿದ್ದ ಸ್ಥಳಿಯ ಪರಿಶಿಷ್ಟ ಜಾತಿಯ ಜನರ ಹಿಂದೆ ರೈಲಿನಲ್ಲಿ ಟಿಕೇಟ್ ಇಲ್ಲದೆ ಭೀಮಪ್ಪ ಹಾಗೂ ಶಂಕರ ಲಮಾಣಿ ಗೋವೆಗೆ ವಲಸೆ ಹೋಗುತ್ತಾರೆ. ಗೋವೆಯ ಪರಿಚಯ ಮಾಡಿಕೊಂಡು ಬಂದ ಈ ಯುವಕರು ನರಸಲಗಿ ತಾಂಡಾದ ಲಂಬಾಣಿಗರಿಗೆ ಕಮಿಶನ್ ಆಧಾರದ ಮೇಲೆ ಗೋವೆಗೆ ಕೂಲಿಕೆಲಸಕ್ಕಾಗಿ ಕರೆದುಕೊಂಡು ಹೋಗಲು ಪ್ರಾರಂಭಿಸಿದರು. ಹೀಗೆ 1970ರಿಂದ ಹಿಡಿದು ಇಂದಿನವರೆಗೆ ನರಸಲಗಿ ತಾಂಡಾದ ಲಂಬಾಣಿಗರು ಸತತವಾಗಿ ಗೋವೆಗೆ ವಲಸೆ ಹೋಗುತ್ತಿದ್ದಾರೆ. ಗೋವೆಯಲ್ಲಿ ಈಗಾಗಲೇ ವಲಸೆ ಬಂದು ನೆಲಿಸಿರುವ ವಲಸಿಗರ ಗೆಳೆಯರು ಸಂಬಂಧಿಕರು ಪರಿಚಯವಿರುವುದರಿಂದ ಲಂಬಾಣಿಗರು ಹೆಚ್ಚಾಗಿ ವಲಸೆ ಬರುತ್ತಿದ್ದಾರೆ. ಇದೇ ಪ್ರಕಾರವಾಗಿ ಗೋವೆಯಲ್ಲಿ ವಿಜಾಪುರ ಜಿಲ್ಲೆಯಲ್ಲಿ ಪಡೆಯುವ ಕೂಲಿಗಿಂತ ಎರಡರಷ್ಟು ಕೂಲಿ ಪಡೆಯುವುದರಿಂದ, ಲಂಬಾಣಿಗರ ಆಹಾರ ಅಭ್ಯಾಸಗಳು ಗೋವೆಯ ಆಹಾರ ಅಭ್ಯಾಸಗಳು ಒಂದೇ ಬಗೆಯದಾಗಿದ್ದರಿಂದ ಎಲ್ಲಾ ಸೌಲಭ್ಯಗಳು ದೊರೆಯುವುದರಿಂದ, ಸತತವಾಗಿ ಉದ್ಯೋಗ ಸಿಗುವುದರಿಂದ ಹೆಚ್ಚಾಗಿ ಗೋವೆಗೆ ಬರುತ್ತಾರೆ. ಪ್ರವಾಸೋದ್ಯಮದಿಂದ ಗೋವೆಯಲ್ಲಿ ವಿವಿಧ ಬಗೆಯ ಉದ್ಯೋಗಾವಕಾಶಗಳು ಸೃಷ್ಠಿಯಾಗಿವೆ. ಇಂತಹ ಉದ್ಯೋಗಾವಕಾಶಗಳು ಲಂಬಾಣಿಗರನ್ನು ಆಕರ್ಶಿಸುತ್ತಿವೆ. ಸ್ಥಳಿಯ ಗೋವೆಯ ಜನರು ದೇಶ-ವಿದೇಶಗಳಿಗೆ ಉದ್ಯೋಗಕ್ಕಾಗಿ ವಲಸೆ ಹೋಗಿದ್ದರಿಂದ ಅವರ ಕುಟುಂಬದ ವೃದ್ಧ ಸದಸ್ಯರನ್ನು ನೋಡಿಕೊಳ್ಳುಲು ಕೂಲಿಕಾರರ ಅವಶ್ಯಕತೆ ಇದೆ. ಹೀಗಾಗಿ ಗೋವೆಯಲ್ಲಿ ಕೂಲಿಕಾರರಿಗೆ ಹೆಚ್ಚಿನ ಬೇಡಿಕೆ ಇದೆ. ಆದ್ದರಿಂದ ಅನಕ್ಷರಸ್ಥ ಕೂಲಿಕಾರರು ಹೆಚ್ಚಾಗಿ ವಲಸೆ ಹೋಗುತ್ತಾರೆ. ನಮ್ಮ ಅಧ್ಯಯನದ ಪ್ರಕಾರ ಪ್ರತಿಶತ 45.00ರಷ್ಟು ಅನಕ್ಷರಸ್ಥರು ವಲಸೆ ಹೋಗಿದ್ದಾರೆ. ವಿದ್ಯಾವಂತರಿಗೆ ಹೆಚ್ಚಿನ ಬೇಡಿಕೆ ಇಲ್ಲದಿರುವುದೇ ಇದಕ್ಕೆ ಕಾರಣವಾಗಿದೆ. ಲಂಬಾಣಿಗರು ವಲಸೆ ಹೋಗುತ್ತಿರುವುದರಿಂದ ಅವರ ವೃದ್ಧ ತಂದೆ ತಾಯಿಗಳ ಕಾಳಜಿ ಕಡಿಮೆಯಾಗುತ್ತಿದೆ. ಹಾಗೂ ಮಕ್ಕಳಿಗೆ ಶಿಕ್ಷಣ ಕೊಡಿಸಲು ಸಾಧ್ಯವಾಗುತ್ತಿಲ್ಲ. ಶಿಕ್ಷಣ ಕೊಡಿಸುತ್ತಿರುವವರೂ ಸಹ ಅರ್ಧಕ್ಕೆ ನಿಲ್ಲಿಸಿದ್ದಾರೆ. ಇದೇ ಪ್ರಕಾರವಾಗಿ ಲಂಬಾಣಿಗರು ಗೋವೆಯಿಂದ ಮರಳಿ ಸ್ವಸ್ಥಳಕ್ಕೆ ಬರುವಾಗ ತಮ್ಮ ಜೊತೆ ವಿವಿಧ ಕಾಯಿಲೆಗಳು ತರುವುದರಿಂದ ಸ್ವಸ್ಥಳದಲ್ಲಿ ಕಾಯಿಲೆಗಳು ಹರಡುತ್ತಿವೆ. ನರಸಲಗಿ ತಾಂಡಾದಲ್ಲಿ ಗೋವೆಯಿಂದ ಮರಳಿ ಬಂದವರಲ್ಲಿ ಇಬ್ಬರು ಏಡ್ಸ್ ಕಾಯಿಲೆಯಿಂದ ಬಳಲಿ ಮೃತಪಟ್ಟಿದ್ದಾರೆ.

ಗೋವೆಯಲ್ಲಿ ಲಂಬಾಣಿಗರ ಸಾಂಸ್ಕೃತಿಕ ಉಡುಪುಗಳಿಗೆ ಸ್ಥಾನ-ಮಾನಗಳು ಸಿಗುತ್ತಿಲ್ಲ. ಸ್ಥಳಿಯರು ಸಾಂಪ್ರದಾಯಿಕ ಉಡುಪುಗಳನ್ನು ಧರಿಸಿದವರಿಗೆ ಉದ್ಯೋಗ ಕೊಡದೆ ಇರುವುದರಿಂದ ಲಂಬಾಣಿಗರು ತಮ್ಮ ಸಾಂಪ್ರದಾಯಿಕ ವೇಷಭೂಷಣಗಳಲ್ಲಿ ಬದಲಾವಣೆ ಮಾಡಿಕೊಳ್ಳುತ್ತಿದ್ದಾರೆ. ಆದರೆ ಧಾರ್ಮಿಕ ಆಚರಣೆಗಳಲ್ಲಿ ಅಷ್ಟೊಂದು ಬದಲಾವಣೆ ಮಾಡಿಕೊಂಡಿಲ್ಲ. ತಾಂಡಾಗಳಲ್ಲಿ ಆಚರಿಸಲ್ಪಡುವಂತೆ ಸಸಿಹಬ್ಬ, (ತೀಜ್) ಹೋಳಿಹಬ್ಬ, ದಸರಾ ಮುಂತಾದವುಗಳನ್ನು ಆಚರಿಸುತ್ತಿದ್ದಾರೆ. ಬಯನಾ ಹಾಗೂ ಮಂಗೂರ್ ಹಿಲ್ ಕೊಳಚೆ ಪ್ರದೇಶಗಳಲ್ಲಿ ದುರ್ಗಾದೇವಿ ಹಾಗೂ ಸಂತ ಸೇವಾಲಾಲರ ದೇವಾಲಯಗಳನ್ನು ನಿರ್ಮಿಸಿಕೊಂಡು ಆರಾಧಿಸುತ್ತಿದ್ದಾರೆ. ಮತಾಂತರಕ್ಕೆ ಸಿದ್ಧತೆ ನಡೆಸುತ್ತಿರುವವರು ತಮ್ಮ ಧಾರ್ಮಿಕ-ಸಾಂಸ್ಕೃತಿಕ ಜೀವನದಲ್ಲಿ ಬದಲಾವಣೆ ಮಾಡಿಕೊಳ್ಳುತ್ತಿದ್ದಾರೆ. ಮೊದಲು ತಾಂಡಾಗಳಲ್ಲಿ ಗೂಬೆ ಕೂಗಿದರೆ ಕೆಡಕು ಸಂಭವಿಸುತ್ತದೆಂದು

ನಂಬಿ ಪ್ರಾಣಿ ಬಲಿ ಕೊಡುವ ಪದ್ಧತಿ, ರೋಗರುಜಿನುಗಳು ಬಂದರೆ ಕುಲದೇವತೆಯನ್ನು ಸಾಮೂಹಿಕವಾಗಿ ಆರಾಧಿಸುವ ಪದ್ಧತಿಗಳನ್ನು ತ್ಯಜಿಸಿದ್ದಾರೆ. ಚರ್ಚುಗಳಿಗೆ, ಮುಸ್ಲಿಂಮರ ದರ್ಗಾಗಳಿಗೆ ಆರಾಧಿಸುತ್ತಿರುವುದು ಇತ್ತೀಚಿನ ಬೆಳವಣಿಗೆಯಾಗಿದೆ.

ತಾಂಡಾಗಳಲ್ಲಿರುವಂತೆ ಲಂಬಾಣಿಗರು ಗೋವೆಯಲ್ಲಿಯೂ 'ಗೋರ್ ಪಂಚಾಯತ್' ಜಾತಿಪಂಚಾಯಿತಿ ಹೊಂದಿದ್ದಾರೆ. ಆದರೆ ಮೂಲ ತಾಂಡಾಗಳಲ್ಲಿರುವಂತೆ ಪಂಚಾಯತಿಯ ಮುಖ್ಯಸ್ಥರಾದ ನಾಯಕ ಹಾಗೂ ಕಾರಭಾರಿ (ಕಾರ್ಯದರ್ಶಿ) ಹುದ್ದೆಗಳು ಸಾಂಪ್ರದಾಯಿಕವಾಗಿಲ್ಲ. ಸಮಾಜ ಕಾರ್ಯಗಳಲ್ಲಿ ತೊಡಗಿರುವ ಕೆಲವು ಲಂಬಾಣಿಗರು ಈ ಹುದ್ದೆಗಳನ್ನು ಹೊಂದಿದ್ದಾರೆ. ಹಬ್ಬ-ಹರಿದಿನಗಳು ಈ ಮುಖಂಡರ ಅನುಮತಿಯಿಂದ ನಡೆಯುತ್ತಿವೆ. ಮೊದಲು ಲಂಬಾಣಿ ತಾಂಡಾದ ಎಲ್ಲಾ ಸಮಸ್ಯೆಗಳು ಒಳಜಗಳಗಳು ನಾಯಕನ ಮುಂದೆ ಇತ್ಯರ್ಥವಾಗುತ್ತಿದ್ದವು ಆದರೆ ಇಂದು ಲಂಬಾಣಿಗರು ನ್ಯಾಯ ನಿರ್ಣಯಿಸಿಕೊಳ್ಳಲು ಪೊಲೀಸ್ ಸ್ಟೇಶನ್‌ಗಳಿಗೆ, ಕೋರ್ಟುಗಳಿಗೆ ಹೋಗುತ್ತಿದ್ದಾರೆ. ಸಾಂಪ್ರದಾಯಿಕ ವಿವಾಹಗಳು ಮೊದಲು 15 ದಿನಗಳಿಂದ ಒಂದು ತಿಂಗಳವರೆಗೆ ನಡೆಯುತ್ತಿದ್ದವು ಹಾಗೂ ವಿವಾಹದ ಎಲ್ಲಾ ಆಚರಣೆಗಳು ರಾತ್ರಿ ವೇಳೆಯಲ್ಲಿ ವಾದ್ಯಗಳಿಲ್ಲದೆ ನಡೆಯುತ್ತಿದ್ದವು. ಆದರೆ ಇಂದು ಲಂಬಾಣೇತರರ ಪದ್ಧತಿಯ ಪ್ರಕಾರ ವಿವಾಹ ಮಾಡಿಕೊಳ್ಳುತ್ತಿದ್ದಾರೆ. ವಿವಾಹದ ನಂತರ ಹೆಣ್ಣಿನ ಮನೆಯ ಮುಂದೆ ಹೊತದ ಬಲಿಕೊಟ್ಟು ಸಮುದಾಯದ ಜನರಿಗೆ ಭೋಜನಕೂಟ ಏರ್ಪಡಿಸುವುದು ಇಂದಿಗೂ ಮುಂದುವರಿದಿದೆ. ಮೊದಲು ಲಂಬಾಣಿಗರಲ್ಲಿ ವಧುದಕ್ಷಿಣೆ ಪದ್ಧತಿ ರೂಢಿಯಲ್ಲಿತ್ತು ಆದರೆ ಇಂದು ಕಂಡುಬರುವುದಿಲ್ಲ ಇದರ ಬದಲಾಗಿ ವರದಕ್ಷಿಣೆ ಪದ್ಧತಿ ರೂಢಿಸಿಕೊಂಡಿದ್ದಾರೆ ಅತ್ತೆ ಮೈದುನ ವಿವಾಹ, ವಿವಾಹದ ಮೊದಲ ದಿನ ಮದುಮಗನಿಗೆ ಕಾಯ್ದಿ ಸೂಜಿಯಿಂದ ತಾಂಡಾದ ನಾಯಕ ಬರೆ ಹಾಕುವ 'ದಾಗ್‌ಪದ್ಧತಿ' ಹೆಣ್ಣಿನ ಕಡೆಯವರು ವಿವಾಹದ ಸಂದರ್ಭದಲ್ಲಿ ಮದುಮಗನಿಗೆ ತಮಾಸೆಗಾಗಿ ಎಳೆದಾಡಿ ಬೀಳಿಸುವ ಪದ್ಧತಿ, ಮದುಮಗಳನ್ನು ಎತ್ತಿನ ಮೇಲೆ ಕೂಡ್ರಿಸಿ ಬೀಳ್ಕೊಡುವ ಪದ್ಧತಿಗಳು ಮಾಯವಾಗಿ ಮದುಮಗಳನ್ನು ವಾಹನಗಳಲ್ಲಿ ಗಂಡಿನ ಮನೆಗೆ ಕಳುಹಿಸಿಕೊಡುವುದು ಕಂಡುಬರುತ್ತಿದೆ. ಗೋವೆಗೆ ವಲಸೆ ಹೋಗುತ್ತಿರುವ ಲಂಬಾಣಿಗರು ತಮ್ಮ ಭಾಷೆಯಲ್ಲಿ ಬದಲಾವಣೆ ಮಾಡಿಕೊಂಡಿದ್ದಾರೆ. ವ್ಯವಹಾರಕ್ಕಾಗಿ ಕೊಂಕಣಿ, ಮರಾಠಿ, ಹಿಂದಿ ಭಾಷೆಗಳನ್ನು ಕಲಿಯುತ್ತಿದ್ದಾರೆ.

ಸಾಮಾಜಿಕ ಜೀವನದಲ್ಲಿ ಬದಲಾವಣೆಯಾದಂತೆ ಆರ್ಥಿಕ ಜೀವನದಲ್ಲಿಯೂ, ಲಂಬಾಣಿಗರು ಬದಲಾವಣೆ ಮಾಡಿಕೊಳ್ಳುತ್ತಿದ್ದಾರೆ. ಹೆಚ್ಚಿನ ಸಂಖ್ಯೆಯಲ್ಲಿ ಲಂಬಾಣಿಗರು ವಲಸೆ ಹೋಗುತ್ತಿರುವುದರಿಂದ ಸ್ವಸ್ಥಳದಲ್ಲಿ ಕೂಲಿಕಾರರ ಕೊರತೆ ಉಂಟಾಗುತ್ತಿದೆ. ಹಾಗೂ ಭೂಮಿಯು ಹಾಳುಬೀಳುತ್ತದೆ. ಸ್ಥಳಿಯ ಶ್ರೀಮಂತರು ಕೂಲಿಕಾರರ ಕೊರತೆಯಿಂದ ತಮ್ಮ ಹೊಲಗದ್ದೆಗಳನ್ನು ಮಾರಾಟ ಮಾಡುತ್ತಿದ್ದಾರೆ. ಕೆಲವರು ಎಂದೂ ಕೃಷಿಕಾರ್ಯಗಳನ್ನು ಮಾಡದವರು ಕೃಷಿಕಾರ್ಯಗಳಲ್ಲಿ ತೊಡಗಿದ್ದಾರೆ. ಆರ್ಥಿಕವಾಗಿ ಸುಧಾಸುತ್ತಿರುವ ಲಂಬಾಣಿಗರು ಸ್ಥಳಿಯ ಶ್ರೀಮಂತರ ಹೊಲ-ಗದ್ದೆಗಳಲ್ಲಿ ಕೂಲಿಕೆಲಸ ಮಾಡಲು ನಿರಾಕರಿಸುತ್ತಿದ್ದಾರೆ ಹಾಗೂ ಅವರಿಗೆ ಗೌರವಕೊಡುತ್ತಿಲ್ಲಾ. ಗೋವೆಗೆ ವಲಸೆ ಹೋಗುತ್ತಿರುವ ಲಂಬಾಣಿಗರ ಆರ್ಥಿಕ ಸ್ಥಿತಿ-ಗತಿಗಳು ತಾಂಡಾಗಳಲ್ಲಿ ವಾಸವಾಗಿರುವವರಿಗಿಂತ ಉತ್ತಮ ಸ್ಥಿತಿಯಲ್ಲಿವೆ. ಕೆಲವರು ಹೊಸ ಮನೆಗಳನ್ನು ಕಟ್ಟಿಸಿಕೊಂಡಿದ್ದಾರೆ, ಭೂಮಿ ಖರೀದಿಸಿದ್ದಾರೆ. ಗೋವೆಯಿಂದ ಹಣ ಹರಿದು ಬರುತ್ತಿರುವುದರಿಂದ

ನರಸಲಗಿ ತಾಂಡಾದ ಆರ್ಥಿಕತೆಯಲ್ಲಿ ಬದಲಾವಣೆ ಸಂಭವಿಸಿದೆ. ತಾಂಡಾದಲ್ಲಿ ಹೋಟೇಲು, ಕಿರಾಣಿ ಅಂಗಡಿಗಳು, ಭರದಿಂದ ನಡೆಯುತ್ತಿವೆ. ಮನೆಗಳಲ್ಲಿ ಟಿವ್ಹಿ. ರೇಡಿಯೋ, ಟೇಪ್‌ರೆಕಾರ್ಡರ್, ಮೋಟರ್‌ಸೈಕಲ್, ಮಿಕ್ಸರ್‌ಗ್ರೈಂಡರ್‌ಗಳಂತಹ ಆಧುನಿಕ ಉಪಕರಣಗಳನ್ನು ಬಳಸುತ್ತಿದ್ದಾರೆ. ಮೊದಲು ಸಾದಾ ರೀತಿಯಲ್ಲಿ ಆಚರಿಸಲ್ಪಡುತ್ತಿದ್ದ ಲಂಬಾಣಿಗರ ಹಬ್ಬ-ಹರಿದಿನಗಳು ಇಂದು ಅದ್ಧೂರಿಯಾಗಿ ಆಚರಿಸಲ್ಪಡುತ್ತಿವೆ. ಇತ್ತೀಚೆಗೆ ತಾಂಡಾದಲ್ಲಿ ಗಣೇಶ ಚತುರ್ಥಿ ಆಚರಿಸಲ್ಪಡುತ್ತಿದೆ. ಲಂಬಾಣಿಗರು ಒಂದು ಕಡೆ ಆರ್ಥಿಕವಾಗಿ ಚೇತರಿಸಿಕೊಳ್ಳುತ್ತಿದ್ದರೆ. ಇನ್ನೊಂದು ಕಡೆ ಸರ್ಕಾರ ಕಲ್ಪಿಸಿರುವ ಮೀಸಲಾತಿ ಸೌಲಭ್ಯಗಳಿಂದ ವಂಚಿತರಾಗುತ್ತಿದ್ದಾರೆ. ವಲಸೆಯು ಜಾನುವಾರುಗಳ ಮೇಲೂ ಪರಿಣಾಮ ಬೀರಿದೆ. ವಲಸೆ ಹೋಗುತ್ತಿರುವ ಕುಟುಂಬಗಳಲ್ಲಿ ಜಾನುವಾರುಗಳನ್ನು ಸಾಕಲು ಸದಸ್ಯರಿಲ್ಲದಿರುವುದರಿಂದ ಅವುಗಳನ್ನು ಮಾರಾಟ ಮಾಡುತ್ತಿದ್ದಾರೆ.

ವಲಸೆಯಿಂದ ಗೋವಾ ಸಮುದಾಯದ ಮೇಲೂ ಪರಿಣಾಮ ಉಂಟಾಗುತ್ತಿದೆ. ಗೋವೆಯಲ್ಲಿ ಸೃಷ್ಠಿಯಾಗಿರುವ ಉದ್ಯೋಗಾವಕಾಶಗಳಿಗೆ ಆಕರ್ಶಿತರಾಗಿ ಬಡತನದಿಂದ ಬಳಲುತ್ತಿರುವ ಕರ್ನಾಟಕ, ತಮಿಳುನಾಡು ಹಾಗೂ ಆಂಧ್ರಪ್ರದೇಶಗಳಿಂದ ಕೂಲಿಕಾರರು ಹೆಚ್ಚಿನ ಸಂಖ್ಯೆಯಲ್ಲಿ ವಲಸೆ ಬರುತ್ತಿರುವುದರಿಂದ ಗೋವೆಯ ಜನಸಂಖ್ಯೆ ಹೆಚ್ಚಾಗುತ್ತಾ ಸಾಗಿದೆ. ವಿಪರೀತವಾಗಿ ಏರುತ್ತಿರುವ ಜನಸಂಖ್ಯೆಗೆ ಮೂಲಭೂತ ಸೌಕರ್ಯಗಳನ್ನು ಒದಗಿಸುವುದು ಗೋವಾ ಸರ್ಕಾರಕ್ಕೆ ಕಷ್ಠದಾಯಕವಾಗಿದೆ. ಇಲ್ಲಿಯ ಮನೆಬಾಡಿಗೆ ದರಗಳು ದೇಶದಲ್ಲಿಯೇ ದುಬಾರಿಯಾಗಿದೆ. ಆದ್ದರಿಂದ ಕೂಲಿಕಾರರು ಅನಧಿಕೃತ ಪ್ರದೇಶಗಳಲ್ಲಿ ನೆಲೆಸುತ್ತಿರುವುದರಿಂದ ಬಯನಾ ಹಾಗೂ ಮಂಗೂರ್‌ಹಿಲ್‌ಗಳಂತಹ ಕೊಳಚೆ ಪ್ರದೇಶಗಳು ಸೃಷ್ಠಿಯಾಗಿವೆ. ಜನಸಂಖ್ಯೆ ಹೆಚ್ಚಳದಿಂದ ನಿರ್ಮಲೀಕರಣ ಸಮಸ್ಯೆ ಉಂಟಾಗಿದೆ. ರಸ್ತೆಯ ಬದಿಯಲ್ಲಿ, ಬೀಚುಗಳ ದಡಗಳಲ್ಲಿ ಅನಧಿಕೃತ ಬಾರು, ಹೋಟೇಲು, ಡಬ್ಬಾ ಅಂಗಡಿಗಳು ತೆರೆಯಲ್ಪಟ್ಟಿವೆ. ಇದರಿಂದ ಜನರು ನಿರ್ಮಲೀಕರಣ ಸಮಸ್ಯೆ, ಅನಾರೋಗ್ಯ ಸಮಸ್ಯೆ ಎದುರಿಸಬೇಕಾಗಿದೆ. ನಗರ ಪೌರಸಂಸ್ಥೆಗೆ ಗಟಾರ, ರಸ್ತೆ ಸ್ವಚ್ಛಗೊಳಿಸುವುದು ತುಂಬಾ ಕಷ್ಟದಾಯಕವಾಗುತ್ತಿದೆ. ದಿನನಿತ್ಯ ಬಳಸುವ ಆಹಾರ ಪದಾರ್ಥಗಳು ತರಕಾರಿ, ಹಣ್ಣು ಮುಂತಾದವುಗಳ ಬೆಲೆಗಳು ದಿನದಿಂದ ದಿನಕ್ಕೆ ದುಬಾರಿಯಾಗುತ್ತಿವೆ. ಗೋವೆ ಉತ್ಪಾದಿಸುವ ಆಹಾರ ಪದಾರ್ಥಗಳು ಸಾಕಾಗದೇ ಇರುವುದರಿಂದ ನೆರೆಯ ರಾಜ್ಯಗಳಿಂದ ಆಹಾರ ಪದಾರ್ಥಗಳನ್ನು ಆಮದು ಮಾಡಿಕೊಳ್ಳಬೇಕಾಗಿದೆ. ಇದರಿಂದ ಮಧ್ಯಮ ಹಾಗೂ ಕೆಳವರ್ಗದ ಜನರಿಗೆ ಗೋವೆಯಲ್ಲಿ ಜೀವನ ಸಾಗಿಸುವುದು ತುಂಬಾ ಕಷ್ಟದಾಯಕವಾಗಿದೆ.

ಕೊಳಚೆ ಪ್ರದೇಶಗಳಲ್ಲಿ ವಾಸವಾಗಿರುವವರು. ಕಳ್ಳತನ, ಮಾದಕಪದಾರ್ಥಗಳ ಮಾರಾಟ, ವೇಶ್ಯಾವೃತ್ತಿ ಮುಂತಾದ ಅಪಾರಾಧಿಕೃತ್ಯಗಳಲ್ಲಿ ತೊಡಗಿದ್ದಾರೆ. ಇದರಿಂದ ಸ್ಥಳಿಯರ ಸಾಮಾಜಿಕ ಜೀವನದ ಮೇಲೆ ಪರಿಣಾಮ ಉಂಟಾಗುತ್ತಿದೆ. ಹೆಚ್ಚುತ್ತಿರುವ ಅಪಾರಾಧಿಕೃತ್ಯಗಳನ್ನು ಹತೋಟಿಯಲ್ಲಿಡುವುದು ಗೋವಾ ಪೊಲೀಸ್ ಇಲಾಖೆಗೆ ಕಷ್ಟದಾಯಕವಾಗಿದೆ. ಲಂಬಾಣಿಗರು ಮಾದಕಪದಾರ್ಥಮಾರಾಟ, ಸಣ್ಣಪುಟ್ಟ ವಸ್ತುಗಳನ್ನು ಕಳ್ಳತನ ಮಾಡುವುರಲ್ಲಿ ತೊಡಗಿದ್ದು ಕಂಡುಬಂದಿದೆ. ಈ ಎಲ್ಲಾ ಅಪರಾಧಿಕೃತ್ಯಗಳಿಂದ ಸ್ಥಳಿಯ ಗೋವೆಯ ಜನರಿಗೆ ತೊಂದರೆಯಾಗುತ್ತಿರುವುದರಿಂದ, ಸ್ಥಳಿಯ ಶ್ರೀಮಂತರ ಮಕ್ಕಳು ಏಡ್ಸ್

ಕಾಯಿಲೆಯಿಂದ ಮರಣಹೊಂದುತ್ತಿರುವುದರಿಂದ, ಕೊಳಚೆ ಪ್ರದೇಶದಲ್ಲಿಯ ಗೂಂಡಾಗಳಿಂದ, ಅಪರಾಧಿಗಳಿಂದ ಸ್ಥಳಿಯರಿಗೆ ತೊಂದರೆಯಾಗುತ್ತಿರುವುದರಿಂದ ಗೋವಾ ಸರ್ಕಾರ ಅನಧಿಕೃತ ಕೊಳಚೆ ಪ್ರದೇಶಗಳನ್ನು ತೆರವುಗೊಳಿಸಲು ಪ್ರಯತ್ನಿಸುತ್ತಿದೆ. ಇದರಿಂದ ಲಂಬಾಣಿಗರು, ಕನ್ನಡಿಗರ ಸಾಮಾಜಿಕ ಜೀವನಕ್ಕೆ ತೊಂದರೆಯಾಗುತ್ತಿದೆ. ಆಂದ್ರ ಪ್ರದೇಶ, ತಮಿಳುನಾಡಿನಿಂದ ವಲಸೆ ಬಂದಿರುವ ಕೆಲವು ವೇಶ್ಯೆಯರು ಕೊಳಚೆ ಪ್ರದೇಶಗಳಲ್ಲಿ ವೇಶ್ಯಾವೃತ್ತಿಯಲ್ಲಿ ತೊಡಗಿದ್ದಾರೆ. ಆದರೆ ಸ್ಥಳಿಯರು ಇಂತಹ ಕೃತ್ಯಗಳನ್ನು ಕರ್ನಾಟಕದ ಜನರು ಮಾಡುತ್ತಿದ್ದಾರೆಂದು ಸುಳ್ಳು ಅಪಾದನೆ ಮಾಡುತ್ತಿದ್ದಾರೆ. ಇದರಿಂದ ಕರ್ನಾಟಕದ ಜನರಿಗೆ ತೊಂದರೆಯಾಗುತ್ತಿದೆ. ಕರ್ನಾಟಕದ ವಲಸಿಗರನ್ನು ರಕ್ಷಿಸಲು ಗೋವಾ ಕನ್ನಡ ಸಂಘವು ಶಕ್ತಿಮೀರಿ ಪ್ರಯತ್ನಿಸುತ್ತಿದೆ. ಆದರೆ ಸಫಲವಾಗಿಲ್ಲ. ಇದರಿಂದ ವಲಸಿಗರು ಅನಾಥಪ್ರಜ್ಞೆಯನ್ನು ಅನಭವಿಸುತ್ತಿದ್ದಾರೆ.

ಪ್ರವಾಸೋದ್ಯಮ ಇಲಾಖೆ ಗೋವೆಯಲ್ಲಿ ಉನ್ನತ ಮಟ್ಟದ ಮನೋರಂಜನಾ ಸಾಧಗಳನ್ನು ಸ್ಥಾಪಿಸಿದೆ. ಈ ಸಾಧನಗಳು ಕೂಲಿಕಾರರ ಕೈಗೆಟುಕುವುದಿಲ್ಲ ಆದ್ದರಿಂದ ಕೆಳವರ್ಗದ ಜನರು ಮನೋರಂಜನೆ ಪಡೆಯಲು ಜೂಜಾಟ, ವೇಶ್ಯಾಗೃಹ, ಕೆಳಮಟ್ಟದ ಬಾರ್, ಕ್ಲಬ್‌ಗಳಿಗೆ ಭೇಟಿ ನೀಡುತ್ತಾರೆ. ಲಂಬಾಣಿಗರು ಮನೋರಂಜನೆಗಾಗಿ ಮದ್ಯಪಾನ ಮಾಡುವುದು, ಸಿನಿಮಾ ಮಂದಿರಗಳಿಗೆ ಭೇಟಿ ನೀಡುತ್ತಾರೆ. ಕೆಲವು ಕೂಲಿಕಾರರು ಗೋವೆಯಲ್ಲಿ ಶಾಸ್ವತ ನೆಲೆಸುತ್ತಿರುವುದರಿಂದ ಸ್ಥಳಿಯರಿಗೆ ಉದ್ಯೋಗದ ಮಾರುಕಟ್ಟೆಯಲ್ಲಿ ಸ್ಪರ್ಧೆ ಏರ್ಪಟ್ಟಿದೆ. ಉದಾಹರಣೆಗೆ ಕೆಲವು ಲಂಬಾಣಿ ಮಹಿಳೆಯರು ವಾಸ್ಕೋನಗರದ ಬಯನಾ ಪ್ರದೇಶದಲ್ಲಿ ಮೀನುಮಾರಾಟ ಮಾಡುವ ವ್ಯಾಪಾರದಲ್ಲಿ ತೊಡಗಿರುವುದನ್ನು ಸ್ಥಳಿಯರು ತಡೆ ಒಡ್ಡುತ್ತಿದ್ದಾರೆ. ಇದರಿಂದ ಗೋವೆಯ ಜನರಿಗೆ ಲಂಬಾಣಿಗರು ಕೂಲಿಕಾರರಾಗಿಯೇ ಮುಂದುವರಿಯಬೇಕಾಗಿದೆ ಆರ್ಥಿಕವಾಗಿ ಮುಂದುವರಿಯುವುದನ್ನು ಅವರು ಸಹಿಸುತ್ತಿಲ್ಲ ಎಂಬುದು ಗೊತ್ತಾಗುತ್ತದೆ. ಗೋವೆಗೆ ಕೂಲಿಕಾರರು ಹೆಚ್ಚಾಗಿ ವಲಸೆ ಬರುವುದರಿಂದ ಕೆಳವರ್ಗದ ಕೂಲಿಕಾರರ ಸಂಖ್ಯೆ ಹೆಚ್ಚಾಗುತ್ತಿದೆ.

**ವಲಸೆಯಿಂದ ಗೋವಾ ರಾಜ್ಯಕ್ಕೆ ಆಗುತ್ತಿರುವ ಪ್ರಯೋಜನಗಳು.**

1. ಗೋವೆ ವಿಮೋಜನೆಗೊಂಡ ನಂತರದ ಅವಧಿಯಲ್ಲಿ ಸ್ಥಳಿಯರು ಹೆಚ್ಚಾಗಿ ದೇಶ-ವಿದೇಶಗಳಿಗೆ ವಲಸೆ ಹೋಗಿದ್ದರಿಂದ ಅವರ ಕುಟುಂಬದ ಅಸಹಾಯಕ ಸದಸ್ಯರನ್ನು, ಅವರ ಭೂಮಿ ಮುಂತಾದವುಗಳನ್ನು ನೋಡಿಕೊಳ್ಳಲು ಕೂಲಿಕಾರರ ಅಗತ್ಯವಿದೆ. ಈ ಅಗತ್ಯವನ್ನು ಕೂಲಿಕಾರರು ತುಂಬಿದ್ದಾರೆ. ಕೂಲಿಕಾರರು ಇರದೇ ಹೋದರೆ ಸ್ಥಳಿಯರ ಜೀವನ ಸಂಕಷ್ಮದಲ್ಲಿ ಸಿಲುಕುತ್ತದೆ.

2. ಗೋವೆ ವ್ಯವಸ್ಥಿತವಾಗಿ ಬೆಳೆಯಲು ಆರ್ಥಿಕವಾಗಿ ಮುಂದುವರಿಯಲು ಕೂಲಿಕಾರರು ಕಾರಣೀಭೂತರಾಗಿದ್ದಾರೆ. ಮ್ಯಾಂಗ್‌ನೀಜ್ ಗಣಿಗಳಲ್ಲಿ, ಫ್ಯಾಕ್ಟರಿಗಳಲ್ಲಿ, ಹಡಗುಗಳಲ್ಲಿ, ಕೂಲಿಕಾರರು ದುಡಿಯುತ್ತಿರುವುದರಿಂದ ಗೋವೆಯು ಆರ್ಥಿಕವಾಗಿ ಅಭಿವೃದ್ಧಿಗೊಳ್ಳುತ್ತಿದೆ.

ನರಸಲಗಿ ತಾಂಡಾದ ಹೆಚ್ಚಿನ ಸಂಖ್ಯೆಯ ದುಡಿಯುವ ವಯಸ್ಸಿನ ಕೂಲಿಕಾರರು ಗೋವೆಗೆ ವಲಸೆ ಬಂದಿದ್ದಾರೆ. ತಮ್ಮ ಗಂಡಂದಿರ ಹಿಂದೆ ಸ್ತ್ರೀಯರು ಹೆಚ್ಚಾಗಿ ವಲಸೆ ಬಂದು ಕೂಲಿಕೆಲಸಗಳಲ್ಲಿ ತೊಡಗಿದ್ದಾರೆ. ಲಂಬಾಣಿಗರಿಗೆ ಶಿಕ್ಷಣ ಹಾಗೂ ಪರಿಣತಿ ಇಲ್ಲದ್ದರಿಂದ ಕೆಳಮಟ್ಟದ ಉದ್ಯೋಗಗಳಲ್ಲಿ

